ಮೊದಲನೆಯ ಮುದ್ರಣ : ಜನೆವರಿ ೧೯೫೩



ಮುದ್ರಕರು ಮತ್ತು ಪ್ರಕಾಶಕರು:
ಭಾಲಚಂದ್ರ ವೇಂಕಟೇಶ ಘಾಣೇಕರ,
**ಪ್ರತಿಭಾ ಮುದ್ರಣ, ಧಾರವಾಡ.**

---

# ಸಂಪಾದಕರ ಮಾತು.

ತಮ್ಮ ಅನೇಕ ಕಥಾಸಂಕಲನಗಳಿಂದಲೂ ಕಾದಂಬರಿಗಳಿಂದಲೂ ಈಗಾಗಲೆ ಕರ್ನಾಟಕದಲ್ಲೆಲ್ಲ ಜನಪ್ರಿಯತೆ ಗಳಿಸಿಕೊಂಡಿರುವ ನಮ್ಮ ಮಿತ್ರರಾದ ಶ್ರೀ. ಬಸವರಾಜ ಕಟ್ಟೀಮನಿಯವರ ಈ ಕಾದಂಬರಿಯನ್ನು ಹತ್ತನೆ ವರುಷದ ಎರಡನೆ ಕಿರಣವನ್ನಾಗಿ ವಾಚಕರಿಗರ್ಪಿಸಲು ಸಂತೋಷವಾಗುತ್ತಿದೆ.

"ಈ ಕಾದಂಬರಿಗೆ ಮುನ್ನುಡಿ ಬರೆಯುವಿರೋ ಹೇಗೆ?" ಎಂದು ನಾವು ಶ್ರೀಯುತರನ್ನು ವಿಚಾರಿಸಿದಾಗ ಅವರೆಂದರು: "ಇಂಥ ಕೃತಿಗೆ ಮುನ್ನುಡಿಯ ಅವಶ್ಯಕತೆಯೇನೂ ಇಲ್ಲ. ಇದರಲ್ಲಿನ ಗುಣದೋಷಗಳನ್ನು ಕಂಡುಹಿಡಿಯುವದು ಸಹೃದಯರಾದ ವಾಚಕ–ವಿಮರ್ಶಕರಿಗೆ ಸೇರಿದ್ದು."

"ಇಲ್ಲಿ ನೀವು ಬಳಸಿರುವ ತಂತ್ರವೂ ಕನ್ನಡ ಕಾದಂಬರೀ ಪ್ರಪಂಚಕ್ಕೆ ಹೊಸದೆಂದು ತೋರುತ್ತದೆ." ಎಂದು ನಾವು ಹೇಳಿದಾಗ ಅವರೆಂದರು: "ಹೊಸದು ಎನ್ನುವಿರಾ? ಹಾಗೆ ಹೇಳಬೇಕಾದರೆ ಹೊಸದು ಎಂಬ ಶಬ್ದಕ್ಕೆ ಅಂಥ ವಿಶಿಷ್ಟ ಅರ್ಥವೇನೂ ಇಲ್ಲ. ಇಂಗ್ಲಿಷ್, ಫ್ರೆಂಚ್, ರಶಿಯನ್, ನಾರ್ವೇಜಿಯನ್, ಅಮೇರಿಕನ್ ಸಾಹಿತ್ಯಗಳಿಗೆ ಎಂದೋ ಹಳೆಯದಾಗಿದ್ದ ತಂತ್ರ ಇಂದು ನಮಗೆ ಹೊಸದಾಗಿ ಕಾಣಿಸುವ ಸಂಭವವೂ ಇದೆ. ಇಂದಿನ ಆಧುನಿಕ ಪಾಶ್ಚಾತ್ಯ ಕಾದಂಬರಿ ತಂತ್ರ, ಕಲೆ, ಯೋಗ್ಯತೆ ಎಲ್ಲ ದೃಷ್ಟಿಯಿಂದಲೂ ಬಹಳ ಮುಂದುವರಿದಿದೆ. ಕಾದಂಬರಿಯ ಕಥನ ತಂತ್ರಗಳನ್ನು ನಾವು ಭಾರತೀಯರು ಕಲಿತುಕೊಂಡದ್ದೇ ವಿದೇಶೀಯರಿಂದ. ನಿಜವಾಗಿ ಕಲಾಕೃತಿಯಲ್ಲಿ ತಂತ್ರಕ್ಕೆ ಅಂಥ ಮಹತ್ವದ ಸ್ಥಾನವೇನೂ ಇಲ್ಲ. ಕಲೆ ಉತ್ತಮಗೊಳ್ಳಲು ಮಾತ್ರವೇ ತಂತ್ರದ ಉಪಯೋಗ."

"ಇದರಲ್ಲಿ ಕೆಲವು ಪಾತ್ರಗಳ ಬಾಯಲ್ಲಿ ಬರುವ ಬೈಗಳನ್ನು ತೆಗೆದುಬಿಟ್ಟಿದ್ದರೆ ಚೆನ್ನಾಗಿರುತ್ತಿತ್ತಲ್ಲವೇ" ಎಂದು ನಾವು ಕೇಳಿದಾಗ ಅವರೆಂದರು: "ಇಲ್ಲಿ ನಾನು ಚಿತ್ರಿಸಿರುವದು ತೀರ ಕೆಳತರಗತಿಯ ಜನರ ಜೀವನವನ್ನು.

ಅವರು ನಿತ್ಯವೂ ಬಳಸುವ ಶಬ್ದಕೋಶದಲ್ಲಿ ಈ ಬೈಗಳಿಗೂ ಒಂದು ಮುಖ್ಯ ಸ್ಥಾನವಿರುತ್ತದೆ. ಅವರ ಜೀವನ ವಾಸ್ತವವಾಗಿ ಚಿತ್ರಿತವಾಗಬೇಕಾದರೆ ಅವರ ಭಾಷಾಶೈಲಿ ಸಾಧ್ಯವಾದಮಟ್ಟಿಗೆ ಇದ್ದುದಿದ್ದಂತೆ ಬರಬೇಕಾಗುತ್ತದೆ. ಸಾಹಿತ್ಯ ಕೃತಿಯಲ್ಲಿ ಬೈಗಳುಗಳನ್ನು ಉಪಯೋಗಿಸುವ ಸಂದರ್ಭ ಬಂದಾಗಲೆಲ್ಲ........ ಹೀಗೆ ಚುಕ್ಕೆಗಳನ್ನು ತೋರಿಸಿ, ಮೂಗು ಮುರಿದ ಹಾಗೆ ಮಾಡಿ ಮುಂದೆ ಸಾಗುವ ಸಾಹಿತ್ಯಕರೂ ಕೆಲವರಿರಬಹುದು. ಸರಿ. ಅವರ ದಾರಿ ಅವರಿಗಿರಲಿ, ನನ್ನದು ಮೊದಲಿನಿಂದಲೂ ಸ್ವತಂತ್ರ ದಾರಿ. ಜೇಮ್ಸ್‌ಜಾಯ್ಸ್ "ಯೂಲಿಸಸ್" ಬರೆದಾಗ ಈ ಬಗೆಯ ಮಡಿವಂತರು. ಬಹಳ ಗದ್ದಲವೆಬ್ಬಿಸಿ ಸರಕಾರ ಆ ಕಾದಂಬರಿಯನ್ನು ಮುಟ್ಟುಗೋಲು ಹಾಕುವಂತೆ ಮಾಡಿದರು. ಆ ಬಗೆ ವಿಚಾರಣೆ ನಡೆಸಿದ ನ್ಯಾಯಾಧೀಶರು— ಕೆಳತರಗತಿಯ ಜನರ ಜೀವನ ಚಿತ್ರಣದಲ್ಲಿ ಆ ಜನರ ಭಾಷೆಯೂ ಇದ್ದುದಿದ್ದ ಹಾಗೆ ಬರಬೇಕಾದುದು ಕಲಾ ದೃಷ್ಟಿಯಿಂದ ಅವಶ್ಯ; ಇದರಲ್ಲಿ ಅಶ್ಲೀಲತೆ, ಅಸಭ್ಯತೆ ಯಾವುದೂ ಇಲ್ಲ— ಎಂದಪ್ಪಣೆ ಕೊಡಿಸಿ ಪುಸ್ತಕವನ್ನು ನಿರ್ಬಂಧದಿಂದ ಮುಕ್ತಗೊಳಿಸಿದರು. ; ಇದರಿಂದ ನಾವು ತಿಳಿಯಬೇಕಾದುದಿಷ್ಟೇ. ಕಥಾವಸ್ತುವಿನ ಬೆಳವಣಿಗೆಗೆ ಅಗತ್ಯವಾದುದೆಲ್ಲ ಬರಬಹುದು. ಅನಾವಶ್ಯಕವಾಗಿ ಮಾತ್ರ ಯಾವುದೂ ಬರಬಾರದು."

ಶ್ರೀ. ಕಟ್ಟೀಮನಿಯವರು ಇನ್ನುಮುಂದೆಯೂ ಸಹ ಆಗಾಗ ಪ್ರತಿಭಾ ಗ್ರಂಥಮಾಲೆಗೆ ಕಾದಂಬರಿಗಳನ್ನು ಬರೆದುಕೊಡಲು ಒಪ್ಪಿರುವರೆಂದು ತಿಳಿಸಲು ಹರ್ಷಿಸುತ್ತೇವೆ. ಶ್ರೀ. ಕಟ್ಟೀಮನಿಯವರಿಗೆ ಮಾಲೆಯು ಚಿರಋಣಿಯಾಗಿ ಉಳಿಯುವದರಲ್ಲಿ ಸಂದೇಹವಿಲ್ಲ.

೧—೧—೧೯೫೩. ಭಾಲಚಂದ್ರ ಘಾಣೇಕರ.

# ಒಂದನೆಯ ಅಂಕ.

## ತೆರೆ: ಒಂದು.

ರೈಲು ಹಳಿಗಳ ಮೇಲೆ ದೇಹವನ್ನೊರಗಿಸಿ ಕಿವಿಗಳಲ್ಲಿ ಬೆರಳುಗಳನ್ನಿಟ್ಟು ಕೊಂಡಳು ಯಮುನಾ.

ರೈಲು ಬರಬಹುದು ಇನ್ನು ಒಂದೆರಡು ನಿಮಿಷಗಳಲ್ಲಿ.

ಇನ್ನು ಎರಡು ನಿಮಿಷಗಳವರೆಗೆ ಮಾತ್ರ ಈ ದುಃಖ.

ಮೃತ್ಯುವಿನ ಸಕಲ ಶಕ್ತಿಯನ್ನು ಪ್ರದರ್ಶಿಸುತ್ತ ಧಾವಿಸಿ ಬರುವುದು ರೈಲು. ಭೂತದ ಕಾಲುಗಳಂಥ ಅದರ ಚಕ್ರಗಳು ತನ್ನ ದೇಹದ ಮೇಲುರುಳುವವು. ಮುಂಡದಿಂದ ರುಂಡ ಬೇರೆಯಾಗುವುದು. ದೇಹದಿಂದ ಜೀವ ಬೇರೆಯಾಗುವುದು.

ಅನಂತರ....ದುಃಖವಿಲ್ಲ....ಸಂಕಟವಿಲ್ಲ....ಏನೂ ಇಲ್ಲ. ಶೂನ್ಯ.... ಎಲ್ಲವೂ ಶೂನ್ಯ. ಯಾವುದೂ ಇಲ್ಲದ ಬಟ್ಟಬಯಲಿನಲ್ಲಿ ಪ್ರವೇಶಿಸುವುದು ತನ್ನ ಪ್ರಾಣಪಕ್ಷಿ.

ಅವಳ ಒಳಗಣ್ಣುಗಳಿದಿರು ತನ್ನ ತಾಯಿಯ ಮೂರ್ತಿ ಬಂದು ನಿಂತಂತಾಯಿತು. ತಂದೆಯ ರೂಪವೂ ಸುಳಿದಂತಾಯಿತು. ತನ್ನ ಗಂಡ, ಸವತಿ, ಗೌಡರು, ರಾಮು....ತನ್ನ ಪ್ರೀತಿಯ ರಾಮು.... ಆ ಗಳಿಗೆಯಲ್ಲಿಯೂ ಅವಳ ಕಣ್ಣು ತೇವಗೊಂಡಿತು. ಇನ್ನು ಎರಡು ನಿಮಿಷಗಳ ಬಾಳು ತನ್ನದು....

ಈಗಲೂ ಕಣ್ಣಿನಲ್ಲಿ ನೀರೇ........ ಎಂದು ಯೋಚಿಸಿದಾಗ ಆಕೆಗೆ ಕೊಂಚ ನಗೆಯೂ ಬಂದಿತು.

ದೂರದಿಂದ ಓಡಿಬರುತ್ತಿರಬೇಕು ರೈಲು. ಇನ್ನೊಂದು ನಿಮಿಷದೊಳಗಾಗಿ ಬಂದು ಬಿಡಬಹುದು. ಯಾಕೆ, ಸದ್ದೇ ಕೇಳಿಸಲೊಲ್ಲದಲ್ಲ? ರೈಲು ಇನ್ನೂ ಬಲು ದೂರವಿದೆಯೊ ಏನೊ.

ಕುತ್ತಿಗೆಯನ್ನು ಕೊಂಚ ಬಲಕ್ಕೆ ತಿರುಗಿಸಿ ಯಮುನಾ ರೈಲು ಬರುವ ದಿಕ್ಕಿಗೆ ದೃಷ್ಟಿ ಹೊರಳಿಸಿದಳು. ರಾತ್ರಿಯ ಕತ್ತಲೆಯನ್ನುಳಿದು ಇನ್ನೇನೂ ಕಾಣಿಸುವಂತಿರಲಿಲ್ಲ.

ರೈಲು ಇನ್ನೂ ದೂರವಿದ್ದೀತು ಎಂದುಕೊಳ್ಳುತ್ತ ಆಕೆ ಮತ್ತೆ ಕುತ್ತಿಗೆಯನ್ನು ಹಳಿಯ ಮೇಲಿರಿಸುತ್ತಿದ್ದ ಹಾಗೆ ಬ್ಯಾಟ್ರಿ ದೀಪದ ಪ್ರಖರ ಬೆಳಕು ಆಕೆಯ ಮುಖದ ಮೇಲೆ ಹರಿಯಿತು. ಇಂಥ ರಾತ್ರಿಯಲ್ಲಿ, ಇಂಥ ಸ್ಥಳಕ್ಕೆ ಯಾರೂ ಬರಲಿಕ್ಕಿಲ್ಲವೆಂಬ ವಿಚಾರದಿಂದ ಅಲ್ಲಿಗೆ ಬಂದು ಆತ್ಮಹತ್ಯೆಗೆ ಸಿದ್ಧಳಾಗಿದ್ದ ಯಮುನಳಿಗೆ ಅಚ್ಚರಿಯಾಗದಿರಲಿಲ್ಲ. ತಾನು ಬದುಕುವುದಕ್ಕೂ ಅಡ್ಡಬಂದ ಈ ಪ್ರಪಂಚ ತಾನು ಜೀವ ಕಳೆದುಕೊಳ್ಳುವುದಕ್ಕೂ ಅಡ್ಡ ಬರಬೇಕೇ!

"ಯಾರವರು ?"

ಗಂಡುಸಿನ ಒರಟು ಧ್ವನಿ? ಅದರೊಂದಿಗೆ ಬ್ಯಾಟ್ರಿಯ ಬೆಳಕು ಅವಳ ದೇಹದ ಮೇಲೆಲ್ಲ ಓಡಾಡಿತು.

ಉಸಿರು ಬಿಗಿಹಿಡಿದು ಯಮುನಾ ಕದಲದೆ ಬಿದ್ದುಕೊಂಡಿದ್ದಳು. ಮಾತನಾಡಿದವನು ಹತ್ತಿರ ಬಂದು ಅವಳ ತಲೆಗೂದಲನ್ನು ಹಿಡಿದು ಮೇಲಕ್ಕೆಬ್ಬಿಸಿ ಹಳಿಗಳ ಪಕ್ಕದ ಕಾಲುದಾರಿಗೆ ಎಳೆದು ತಂದು ಕೇಳಿದ:

"ಯಾರು ನೀನು ? ಇಲ್ಲ್ಯಾಕ ಬಂದಿದ್ದಿ ಸಾಯಾಕ ?"

ಅವನ ಧ್ವನಿ ಇನ್ನೂ ಬಿರುಸಾಗಿದ್ದಿತು.

ಯಮುನಾ ಉತ್ತರವೀಯಲಿಲ್ಲ. ಅವಳ ಚಿತ್ತ ಬಧಿರವಾಗಿದ್ದಿತು.

"ಯಾರವ್ವಾ ನೀನು ? ಏನಾತು ನಿನಗ ?"

ಆಗಲೂ ಆಕೆ ಬಾಯಿ ಬಿಚ್ಚಲಿಲ್ಲ.

"ಪಾಪ....ಪಾಪ....ಏನು ತ್ರಾಸಾಗಿತ್ತೋ........ಅಲ್ಲಾನೇ ನನ್ನ ಈ

ವೇಳೆಯೊಳಗ ಇಲ್ಲಿಗೆ ಕಳಿಸಿರಬೇಕು. ನಿನ್ನ ಜೀವ ಉಳೀತು. ಮನಸಿಗೆ ಹಚ್ಚಿಕೊಳ್ಳಬೇಡವ್ವ. ಮನೆಗೆ ಹೋಗೋಣ ಬಾ ತಂಗೀ...." ಎಂದು ಆತ ಕನಿಕರದಿಂದ ಹೇಳಿದ.

"ತಂಗೀ" ಎಂಬ ಶಬ್ದ ಕಿವಿಗೆ ಬಿದ್ದೊಡನೆ ಯಮುನಳ ಹೃದಯ ಕರಗಿ ನೀರಾಯಿತು. ಇಪ್ಪತ್ತು ವರ್ಷಗಳ ತನ್ನ ಜೀವಮಾನದಲ್ಲಿ ಅದು ವರೆಗೆ 'ತಂಗೀ' ಎಂದು ಸಹಾನುಭೂತಿಯಿಂದ ಯಾರೂ ತನ್ನನ್ನು ಕರೆದಿರ ಲಿಲ್ಲ. ತಾನೂ ಒಬ್ಬಳು ಮನುಷ್ಯಪ್ರಾಣಿ, ತನಗೂ ಎಲ್ಲರಂತೆ ಹೃದಯವಿದೆ, ಮನಸ್ಸಿದೆ, ತನಗೂ ದುಃಖವಾಗುತ್ತದೆ, ಕಳವಳವಾಗುತ್ತದೆ ಎಂಬ ವಿಚಾರ ಒಬ್ಬರಿಗೂ ಬಂದಿರಲಿಲ್ಲ. ತಾನು ಸಾಯಲಿರುವ ವೇಳೆಯಲ್ಲಿ ಅಕಸ್ಮಾತ್ತಾಗಿ ಬಂದು ತನ್ನನ್ನುಳಿಸಿ ಇಷ್ಟೊಂದು ಕನಿಕರದಿಂದ ಮಾತನಾಡಿಸುವ ಈ ಪುಣ್ಯ ವಂತನಾರು ?

ಅವಳ ಕೈಹಿಡಿದು ಕಾಲುದಾರಿಗುಂಟ ನಡೆಯುತ್ತ ಆತ ಕೇಳಿದ:

"ಯಾವೂರಾಕೆ ನೀನು ತಂಗೀ ?"

ಊರು ? ತನ್ನ ಊರು ? ಅದರ ಹೆಸರು ಹೇಳುವುದರಿಂದ ಆಗುವ ಉಪಯೋಗವಾದರೂ ಏನು ? ಎಲ್ಲ ಹಳ್ಳಿಗಳ ಹಾಗೆ ತನ್ನದೂ ಒಂದು ಹಳ್ಳಿ. ತನ್ನಂಥ ಅಭಾಗಿನಿಯರೂ ಕಡು ಬಡವರೂ ಹುಟ್ಟಿ ಸಾಯುವ ಹಳ್ಳಿ.

"ಯಾಕವ್ವಾ, ಮಾತಾಡುವದಿಲ್ಲ ? ಯಾವೂರು ನಿನ್ನದು ?"

"ಇಲ್ಲೆ ಒಂದು ಹಳ್ಳಿ ಅಣ್ಣಾ."

"ಜೀವ ಯಾಕೆ ಬೇಸರಾಯ್ತು ತಂಗೀ ? ಯಾರಾದರೂ ಬಡಿದರೇ ? ಹೊಡೆದರೇ ?"

"ಹೊಡಿಯೂದು ಬಡಿಯೂದು ಎಲ್ಲಾ ಎಂದೋ ಮುಗಿದಿತ್ತು ಅಣ್ಣಾ."

"ತಂದೆ ತಾಯಿ ಯಾರೂ ಇಲ್ಲೇನವ್ವ ನಿನಗೆ ?"

"ಅಪ್ಪ ಮೊನ್ನೆಮೊನ್ನೆ ಸತ್ತುಹೋದ. ಅವ್ವನ್ನ ಪೋಲೀಸರು ಹಿಡಿದು ಕೊಂಡು ಹೋಗಿದ್ದಾರ...."

"ಹಂಗಾದರ ಈಗ ಮನೆಯೊಳಗ ಯಾರೂ ಇಲ್ಲೇನು ?"

"ಯಾರೂ ಇಲ್ಲ."

" ಮದುವಿ ಆಗಿಲ್ಲ ? "

" ಆಗಿತ್ತು. ಅದು ಮುರೀತು. "

" ಹಂಗಾದರ ನಿನಗೀಗ ಯಾರದೂ ಆಧಾರ ಇಲ್ಲ ಅಂದಂತಾಯ್ತು. ಅದಕ್ಕೇ ಜೀವ ಬಿಡೂದಕ್ಕ ಹೋಗಿದ್ದೆಯೊ ಏನೊ. ಹಂಗೆಲ್ಲಾ ಆಶಾ ಬಿಡಬಾರದು ತಂಗೀ. ಪ್ರಾಣಾ ಕಳಕೊಳ್ಳಬಾರದು. ಹೊಂ, ಈಗ ನಮ್ಮ ನೆಗೆ ಹೋಗೂಣು. ನಾವು ಮುಸಲ್ಮಾನರು ನೋಡವ್ವ. ನೀನು ಯಾವ ಜಾತಿಯವಳೊ ಏನೋ. ನಮ್ಮಲ್ಲಿ ಇರಲಿಕ್ಕಾಗುತ್ತೈತೋ ಇಲ್ಲೋ ? "

ತಾನು ಯಾವ ಜಾತಿಯವಳು ? ಮುಸಲ್ಮಾನರ ಮನೆಯಲ್ಲಿರುವುದರಿಂದ ತನ್ನ ಜಾತಿ ಕೆಟ್ಟು ಹೋಗುವುದೇ ? ಯಮುನಾಗೆ ಕೊಂಚ ನಗೆ ಬಂದಿತು. ಹಳ್ಳಿಯಲ್ಲಿ ಯಾರಿಗೂ ಬೇಡವಾಗಿ, ಜೀವ ತ್ಯಜಿಸಲು ಬಂದಿದ್ದ ತನ್ನ ಜಾತಿ ಯಾವುದು ? ಜಾತಿ........

" ನಾವು ಮುಸಲ್ಮಾನರು ಅನ್ನೂದನ್ನ ಮೊದಲೇ ಹೇಳಿದ್ದೇನೆ ನೋಡವ್ವ........ "

ದೂರದಿಂದ ನಗರದ ದೀಪಗಳು ಕಾಣಿಸುತ್ತಿದ್ದುವು. ಹತ್ತಿಪ್ಪತ್ತು ನಿಮಿಷ ನಡೆದು ಬಂದಾಗ ಮನೆಗಳೂ ಕಾಣಿಸತೊಡಗಿದುವು. ಹಳಿಗಳ ಪಕ್ಕದ ಕಾಲುದಾರಿಯನ್ನು ತ್ಯಜಿಸಿ ಅವರು ನಗರದ ರಸ್ತೆಗೆ ಬಂದರು. ಎರಡು ಮೂರು ಕಡೆಗಳಲ್ಲಿ ಹೊರಳಿ, ಚಿಕ್ಕ ಚಿಕ್ಕ ಬೀದಿಗಳಲ್ಲಿ ಹಾಯ್ದು, ಮಾರುಕಟ್ಟೆಯನ್ನು ಹಿಂದೆ ಹಾಕಿ ಸಣ್ಣ ಓಣಿಯೊಂದರಲ್ಲಿ ಅಡಿಯಿರಿಸಿದರು.

ಆ ಓಣಿಯಲ್ಲಿ ವಿದ್ಯುದ್ದೀಪವಿರಲಿಲ್ಲವಾದುದರಿಂದ ಯಾವುದೂ ಸ್ಪಷ್ಟವಾಗಿ ಕಾಣುವಂತಿರಲಿಲ್ಲ ಹೆಚ್ಚು ಉದ್ದವೂ ಅಲ್ಲದ ಹೆಚ್ಚು ಅಗಲವೂ ಅಲ್ಲದ ಸಣ್ಣ ಸಂಕುಚಿತ ಓಣಿ. ಮನೆಗಳೂ ಸಣ್ಣವೇ. ಚಿಕ್ಕ ಚಿಕ್ಕ ಬಾಗಿಲುಗಳು. ತೆರೆದಿದ್ದ ಬಾಗಿಲುಗಳೊಳಗಿನಿಂದ ಅಲ್ಪ ಸ್ವಲ್ಪ ಬೆಳಕು ಹರಿದುಬಂದು ಓಣಿಯನ್ನು ಬೆಳಗಿಸುತ್ತಿದ್ದುದೆಷ್ಟೊ ಅಷ್ಟೆ ಬಾಗಿಲುಗಳ ಮುಂದಿನ ಮೆಟ್ಟಲುಗಳ ಮೇಲೆ ಹೆಂಗಳೆಯರು ಕುಳಿತುಕೊಂಡು ಎಲೆ–ಅಡಿಕೆ ತಂಬಾಕು ಮೆಲ್ಲುತ್ತ, ಆಗಾಗ ಓಣಿಯ ನೆಲದ ಮೇಲೆ ಪಿಚಕ್ಕೆಂದು ಉಗುಳುತ್ತ ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಎಡಗಡೆಗಿದ್ದ ಮನೆಯೊಂದರಿಂದ ಯಾರೋ ಹಾಡಿಕೊಳ್ಳುವುದು ಕೇಳಬರುತ್ತಿತ್ತು. ಅದೆಂಥ ಹಾಡು, ಅದಾವ

# ಬೀದಿಯಲ್ಲಿ ಬಿದ್ದವಳು.

## ನಾಂದಿ.

ರಾತ್ರಿ ಹತ್ತು ಗಂಟೆಯಾಗುತ್ತ ಬಂದಿತ್ತು.

ಅರ್ಧ ಗಂಟೆಯ ವರೆಗೆ ಒಂದೇಸಮನೆ ಸುರಿಯುತ್ತಿದ್ದ ಮಳೆಯ ರಭಸ ಕೊಂಚ ತಗ್ಗುತ್ತಲೂ ನಾವಿಬ್ಬರೂ ಬೀದಿಗಿಳಿದು ಮುನ್ನಡೆದೆವು.

ಶಂಕರ ನನ್ನ ಹಳೆಯ ಗೆಳೆಯ. ಹೈಸ್ಕೂಲಿನಲ್ಲಿ ನನ್ನ ಸಹಪಾಠಿ. ನಲವತ್ತೆರಡರ ಚಳವಳಿಯ ಕಾಲಕ್ಕೆ ಕಾಲೇಜಿಗೆ ಶರಣು ಹೊಡೆದು ಅಜ್ಞಾತ ವಾಸಿಯಾದ. ಮತ್ತೆ ಕಾಲೇಜಿನ ಕಡೆ ಸುಳಿಯಲಿಲ್ಲ. ಬಡಜನರ ಸೇವೆಗಾಗಿ ತನ್ನ ಜೀವನವನ್ನು ಮೀಸಲಾಗಿರಿಸಿ ದುಡಿಯತೊಡಗಿದ. ಇಂದು ಆತ ಆ ಜಿಲ್ಲೆಯ ಹೆಸರಾಂತ ಕಾರ್ಯಕರ್ತ.

ಬೆಂಗಳೂರಿಗೆ ಹೊರಟಿದ್ದ ನಾನು ಒಂದೆರಡು ದಿನಗಳ ಮಟ್ಟಿಗೆ ಆ ನಗರದಲ್ಲಿ, ಶಂಕರನಲ್ಲಿ ಬಿಡಾರ ಹೂಡಿದ್ದೆ. ಭೋಜನಾಲಯದಲ್ಲಿ ರಾತ್ರಿಯೂಟ ಮುಗಿಸಿಕೊಂಡು ನಾವಿಬ್ಬರೂ ಆತನ ಕೊಟಡಿಯತ್ತ ಸಾಗಿದ್ದೆವು.

ಕೆಸರು ಕೊಚ್ಚೆಯಿಂದ ತುಂಬಿದ ತಗ್ಗುಗಳಲ್ಲಿ ಮುಗ್ಗರಿಸುತ್ತ ನಾವು ಕೊಟಡಿಯ ಬಳಿ ಬಂದಾಗ ನನ್ನ ಎಡಗಾಲಿಗೆ ಏನೋ ತಾಕಿದಂತಾಯಿತು. ಕೊಂಚ ಬಾಗಿ ನೋಡಿದರೆ ಮಾನವಜೀವಿಯೊಂದು ನಿಧಾನವಾಗಿ ಉಸಿರಾಡಿಸುವುದು ಕೇಳಬಂದಿತು.

ಕಣ್ಣುಗಳನ್ನಣಕಿಸುವ ಆ ಕತ್ತಲಲ್ಲಿ ಯಾವುದೂ ಕಾಣಿಸುವಂತಿರಲಿಲ್ಲ. ಕುರುಡನ ಹಾಗೆ ಆ ದೇಹದ ಮೇಲೆ ಕೈಯಾಡಿಸಿದೆ. ಮಳೆಯಲ್ಲಿ ಮಿಂದು, ಶೀತಲವಾದ ದೇಹ, ಒದ್ದೆಯಾದ ಬಟ್ಟೆ, ತೊಯ್ದು ಕೂದಲು.

ನನ್ನ ಕರಸ್ಪರ್ಶವಾಗುತ್ತಲೂ ಆ ವ್ಯಕ್ತಿ ಅತ್ಯಂತ ಕ್ಷೀಣಸ್ವರದಲ್ಲಿ ಪುಟುಪುಟಿಸಿತು: "ರಾಮ ರಾಮಾ ರಾಮಾ...."

ಮೆಟ್ಟಿಲುಗಳನ್ನೇರಿ ಮೇಲೆ ಹೋಗಿ ಕೊಟಡಿಯ ಬಾಗಿಲಿನ ಬೀಗ ತೆಗೆಯುತ್ತಿದ್ದ ಶಂಕರ ಆ ಧ್ವನಿಯನ್ನು ಕೇಳುತ್ತಲೂ ಮತ್ತೆ ಕೆಳಗಿಳಿದು ಬಂದ.

"ಯಾರೋ ನರಳಿದಂತಾಯಿತಲ್ಲ?"

"ಹೌದು. ಇಲ್ಲಿ ಯಾರೋ ಬಿದ್ದುಕೊಂಡಿದಾರೆ."

ಮನೆಯೊಳಗಡೆ ಸಂಸಾರವೊಂದು ವಾಸವಾಗಿದ್ದಿತು. ಅದರ ಯಜಮಾನನ ಹೆಸರೆತ್ತಿ ಕೂಗಿದ ಶಂಕರ. ಕೈದೀಪದೊಂದಿಗೆ ದಂಪತಿಗಳಿಬ್ಬರೂ ಧಾವಿಸಿ ಬಂದರು. ದೀಪದ ಬೆಳಕಿನಲ್ಲಿ ಬೀದಿಯ ಕೆಸರಿನಲ್ಲಿ ಬಿದ್ದವಳ ಸ್ಥಿತಿಯನ್ನು ಕಂಡು ಎಲ್ಲರಿಗೂ ಕಣ್ಣೀರು ಬರುವಂತಾಯಿತು. ಆಗಾಗ ಬಲವಾಗಿ ಕಂಪಿಸುತ್ತಿದ್ದ ದೇಹ, ತೊಯ್ದು ತಪ್ಪಡಿಯಾಗಿದ್ದ ಸೀರೆ–ಕುಪ್ಪುಸ, ರಾಡಿ ನೀರಲ್ಲಿ ಮುಳುಗಿದ್ದ ತಲೆಗೂದಲು....ರಾಮ ರಾಮಾ ಎಂಬ ಆರ್ತಧ್ವನಿ ..."

"ಯಮುನಾ," ಎಂದು ಕಳವಳದಿಂದ ಕೂಗಿದ ಶಂಕರ.

"ನಿಮಗಿವಳ ಗುರುತು ಇದೆಯೇನ್ರೀ?" ಎಂದು ಕೇಳಿದಳು ಮನೆಯಾಕೆ.

"ಹೌದು, ಗುರುತಿದೆ. ಒಂದೆರಡು ಸಲ ನೋಡಿದ್ದೇನೆ. ಇಂಥ ಮಳೆಯಲ್ಲಿ ಹೀಗೆ ಬಿದ್ದಿರುವಳಲ್ಲ.... ನನ್ನ ಸ್ನೇಹಿತರು ನೋಡಿದರೆಂದು ನೆಟ್ಟ

ಗಾಯಿತು. ಇಲ್ಲವಾದರೆ ರಾತ್ರಿಯೆಲ್ಲ ಇಲ್ಲೇ ಬಿದ್ದುಕೊಂಡಿರುತಿದ್ದಳೋ ಏನೋ. ಸದ್ಯ ಇವಳನ್ನು ಒಳಗೊಯ್ದು ಬಿಸಿ ನೀರಲ್ಲಿ ಸ್ನಾನ ಮಾಡಿಸಿ ಬೇರೆ ಬಟ್ಟೆ ತೊಡಿಸಿ ಮಲಗಿಸಬೇಕು. ಅಷ್ಟು ಮಾಡುವಿರಾ ತಾಯಿ ? "

" ಬೇಗ ಎಬ್ಬಿಸಿರಪ್ಪ ಆಕೆಯನ್ನ. ಪಾಪ....ಪಾಪ.... "

ಶಂಕರ ಅವಳನ್ನೆತ್ತಿಕೊಂಡು ಮನೆಯೊಳಗಡೆ ಸಾಗಿಸಿದ.

ಆತ ಮತ್ತೆ ಕೊಟಡಿಗೆ ಬರುತ್ತಲೂ ನಾನು ಕೇಳಿದೆ:

" ಈ ಯಮುನಳನ್ನು ನೀವು ಚೆನ್ನಾಗಿ ಬಲ್ಲಿರಾ ? "

" ಕೆಲ ತಿಂಗಳುಗಳ ಹಿಂದೆ ಕಸಗುಡಿಸುವವರ ಸಂಪು ನಡೆದಿತ್ತು. ಆಗ ಸಂಪಿನ ನಿಧಿಗೆ ಹಣ ಕೂಡಿಸಲು ಇವರ ಓಣಿಗೆ ಹೋಗಿದ್ದಾಗ ಇವಳನ್ನು ನೋಡಿದ್ದೆ. ಬಾಟಲಿಗಳ ಬಾಬು ಅಂತ ಒಬ್ಬನಿದಾನೆ ಆ ಓಣಿಯಲ್ಲಿ ಅವನ ಮೂಲಕ ಇವಳ ಕತೆಯೆಲ್ಲಾ ತಿಳಿದುಬಂದಿತ್ತು. "

" ಕತೆ ? "

" ಹೊಂ. ಕತೆಯೇ ಸರಿ. ಭಯಂಕರ ಕತೆ. ಇದರ ಮೇಲೊಂದು ಕಾದಂಬರಿ ಬರೆಯಬಹುದು ನೀವು. ಕೇಳುತ್ತೀರಾ ? "

ಶಂಕರ ಹೇಳತೊಡಗಿದ. ಆತ ಹೇಳುತ್ತ ಹೋದ ಹಾಗೆ ಯಮುನಳ ಜೀವನದ ಒಂದೊಂದೇ ಘಟನೆ ಚಿತ್ರಪಟದ ದೃಶ್ಯದಂತೆ ನನ್ನ ಒಳಗಣ್ಣಿ ನೆದುರು ಮೂಡತೊಡಗಿತು.

ಭಾಷೆ ಯಾವುದೂ ತಿಳಿಯಲಿಲ್ಲ ಯಮುನಳಿಗೆ. ಓಣಿಯ ಕೊನೆಯಲ್ಲಿದ್ದ ಪುಟ್ಟ ಕಿರಾಣಿ ಅಂಗಡಿಯ ಒಡೆಯ ಎದುರು ಮನೆಯ ಮುಂದೆ ಕುಳಿತಿದ್ದ ಹೆಂಗುಸಿನೊಂದಿಗೆ ಸರಸಸಲ್ಲಾಪದಲ್ಲಿ ತೊಡಗಿದ್ದ. ಆಕೆ ಎಡಗೈಯಲ್ಲಿ ಒಂದು ಸಿಗರೇಟು ಹಿಡಿದುಕೊಂಡು ಆಗಾಗ ಅದರ ಹೊಗೆಯನ್ನೆಳೆಯುತ್ತ, ನಡು ನಡುವೆ ಮುಗುಳ್ನಗೆ ಬೀರುತ್ತ ಆತನೊಂದಿಗೆ ಹರಟುತ್ತಿದ್ದಳು. ಅವಳ ಕಾಲುಗಳ ಬಳಿಯಲ್ಲಿ ನಾಯಿಯೊಂದು ಬಿದ್ದುಕೊಂಡು ಮೈ ಕೆರೆದುಕೊಳ್ಳುವ ಕಾರ್ಯದಲ್ಲಿ ಮಗ್ನವಾಗಿದ್ದಿತು.

ಯಮುನಳನ್ನು ಕರೆದುತಂದವನು ಓಣಿಯಲ್ಲಿ ಕಾಣಿಸಿಕೊಳ್ಳುತ್ತಲೂ ಒಂದು ಮನೆಯೆದುರಿಗೆ ಕುಳಿತಿದ್ದ ಬಾಲಿಕೆಯೊಬ್ಬಳು "ಬಾಬಾ ಆಯಾ.... ಬಾಬಾ ಆಯಾ" ಎನ್ನುತ್ತ ಥಟ್ಟನೆ ಹಾರಿ ಅವನ ಬಳಿ ಬಂದಳು. ಆಕೆ ಕೂಗಿದೊಡನೆ ಓಣಿಯ ಹೆಣ್ಣುಮಕ್ಕಳೆಲ್ಲ ಅತ್ತ ತಿರುಗಿದರು.

"ಬಾಬ್ಯಾನ ಸಂಗಡ ಯಾರೋ ಒಬ್ಬ ಹುಡುಗಿ ಬಂದಾಳ ನೋಡಿರೀ" ಎಂದು ಒಬ್ಬಾಕೆ ಕೂಗಿ ಹೇಳಿದಳು.

"ಹುಡುಗಿ ಅಂದರೇನೇ! ಪ್ರಾಯದಾಕೇ ಅದಾಳೆ."

"ಯಾರೋ ಅವಳು ಬಾಬ್ಯಾ?"

"ಎಲ್ಲಿ ಗಂಟು ಬಿದ್ದಳೋ?"

"ಇನ್ನುಮ್ಯಾಲ ಫಾತಿಮಾ ಗತಿ?"

ಒಬ್ಬೊಬ್ಬಳಿಂದ ಒಂದೊಂದು ಪ್ರಶ್ನೆ ಹೊರಟಿತು.

ಅಂಗಡಿಕಾರ ಚೆನ್ನಪ್ಪ ನಗುತ್ತಾ ಎದುರಿಗಿದ್ದವಳನ್ನು ಕುರಿತು "ನಿನಗೊಬ್ಬಳು ಎದುರಾಳಿ ಬಂದಂಗ ಕಾಣುತೈತಿ ನೋಡೇ ಮಲ್ಲೀ," ಎಂದು ನುಡಿದ.

ಮಲ್ಲಿ ಸಿಗರೇಟನ್ನು ಚರಂಡಿಗೆ ಬಿಸುಟಿ ಎದ್ದು ಬಾಬುವಿನ ಹತ್ತಿರ ಬಂದು, ಹೊಸಬಳನ್ನು ಉತ್ಸುಕತೆಯಿಂದ ದಿಟ್ಟಿಸುತ್ತ— "ಎಲ್ಲಿ ಸಿಕ್ಕಳೋ ಬಾಬ್ಯಾ?" ಎಂದು ಕೇಳಿದಳು. ಇನ್ನೂ ನಾಲ್ಕಾರು ಜನ ಹೆಂಗಳೆಯರು ಅವರ ಸುತ್ತ ಗುಂಪುಗೂಡಿದರು

ಅವರನ್ನೆಲ್ಲ ದೂರ ಸರಿಸಿ ಬಾಬು ಕರ್ಕಶ ಸ್ವರದಲ್ಲಿ— "ಈಗ ಯಾರೂ ಗದ್ದಲಾ ಮಾಡಬೇಡಿರಿ, ನಡೀರಿ. ಪಾಪ, ಇಕೀದೇ ಇಕೀಗೆ ಸಾಕಾಗೈತಿ"

ಎಂದು ಗದರಿಸಿ ಯಮುನಳನ್ನು ತನ್ನ ಮನೆಗೆ ಕರೆದು ತಂದ. ಅಷ್ಟು ಹೊತ್ತಿಗೆ ಬಾಗಿಲಲ್ಲಿ ಬಂದು ನಿಂತಿದ್ದ ಫಾತಿಮಾ ಅವಳನ್ನು ಮಮತೆಯಿಂದ ಬರಮಾಡಿಕೊಂಡಳು.

"ಪೇಟೆಗೆ ಇನ್ನೊಂದು ಮಾಲು ಬಂತು." ಎಂದು ನುಡಿದು ಅಂಗಡಿ ಕಾರ ನಕ್ಕ. ಮಲ್ಲಿಯೂ ನಕ್ಕಳು.

"ಯಾಕೆ ಮಲ್ಲೀ? ಬಹಾಳ ನಗಾಕ ಹತ್ತೀದೀ ಇವತ್ತು?" ಒಳಗಿನಿಂದ ಧ್ವನಿ ಕೇಳಿಸಿತು.

"ನಾ ನಕ್ಕರ ನಿನಗೇನ ಹೊಟ್ಟೇಕಿಚ್ಚು? ಸುಮ್ಮನ ಬೀಳೋ ಮೂಳಾ!" ಎಂದು ನುಡಿದು ಮತ್ತೆ ನಕ್ಕಳು ಮಲ್ಲಿ.

"ಏನಂತಾನ ಹಣಮ್ಯಾ? ಅವ.ಲು ನೆತ್ತಿಗೇರ್ಯೈತೇನು?" ಅಂಗಡಿ ಕಾರನೆಂದ.

"ಅಮಲು ಏರ್ಯೈತೆಂತ ಕೇಳಾಕ ನೀಯೇನೂ ರೊಕ್ಕಾ ಕೊಟ್ಟು ಕುಡಿಸಿಲ್ಲ. ಬಾಯಾಗಿನ ಹಲ್ಲು ಉದುರ್ಯಾವು. ತಣ್ಣಗ ಕುಂದ್ರು." ಎಂದು ಒಳಗಿನಿಂದಲೇ ಕೂಗಿದ ಹಣಮ. ಆತನ ಶಕ್ತಿಯೇನೆಂಬುದನ್ನರಿತ ಅಂಗಡಿಕಾರ ಮರುಮಾತನಾಡುವ ಗೊಡವೆಗೆ ಹೋಗದೆ, ಮಲ್ಲಿಯನ್ನು ನೋಡಿ ಕಣ್ಣು ಮಿಟುಕಿಸಿ, ಬೀಡಿಯೊಂದನ್ನು ಹೊತ್ತಿಸಿ ಸೇದುತ್ತ ಕುಳಿತ

ಫಾತಿಮಳ ಮನೆಯಲ್ಲಿ ಯಮುನಾ ಸಂಕೋಚದಿಂದ ಮುದುಡಿಕೊಂಡು ಕುಳಿತಿದ್ದಳು. ಅಂಗಿ ತೆಗೆದು ಗೂಟಕ್ಕೇರಿಸುತ್ತ ಬಾಬು ಯಮುನಳನ್ನು ತಾನು ಕಂಡ ಬಗೆಯನ್ನು ಫಾತಿಮಳಿಗೆ ವಿವರಿಸುತ್ತಲಿದ್ದ.

"ಇವತ್ತು ಒಂದು ಹಳ್ಳಿಯಿಂದ ಅಕ್ಕಿ ತರಬೇಕಾಗಿತ್ತು. ಅದಕ್ಕಂತ ಹೋಗಿದ್ದವನು ಹೊರಳಿ ಬರುವಾಗ ಏಕಾಏಕಿ ಇವಳ ಭೇಟಿ ಆಯ್ತು. ಗಾಡಿ ಬರೂದು ಬಹಳ ತಡ ಇತ್ತು ಅಂತ ಜೀವ ಉಳೀತು. ಇಲ್ಲದಿದ್ದರ...."

"ಪಾಪ....ಪಾಪ....ಏನಾಗಿತ್ತೊ ಏನೊ," ಎಂದು ಮರುಕ ಸೂಚಿಸಿ ಫಾತಿಮಾ ಹೇಳಿದಳು: "ಹಸಿವಾಗಿದ್ದೀತು ಏಳವ್ವ. ಉಂಡು ಮಲಗೇಳು. ಇಲ್ಲೇ ಉಣ್ಣುತೀಯೋ, ಇಲ್ಲಾ ನಿಮ್ಮ ಜಾತಿಯವರ ಮನ್ಯಾಗ ಹೇಳಲೋ?"

"ನನಗೇನೂ ಹಸಿವಿಲ್ಲವ್ವ."

"ಛೆ, ಛೆ. ಹಾಂಗೆಲ್ಲ ಮಾಡಬಾರದು ತಂಗೀ. ಆದದ್ದನ್ನೆಲ್ಲ ಮರೆತು ಬಿಡು. ಯಾವದನ್ನೂ ಮನಸಿಗೆ ಹಚ್ಚಿಕೋ ಬ್ಯಾಡ. ಹೊಟ್ಟೆತುಂಬ ಉಂಡು ಮಲಗಿಕೋ. ಇದೂ ನಿನ್ನದೇ ಮನೆ ಅಂತ ತಿಳಿದುಕೋ. ಏಳು," ಎನ್ನುತ್ತ ಫಾತಿಮಾ ಯಮುನಳನ್ನು ಬಲವಂತದಿಂದಲೇ ಊಟಕ್ಕೆಬ್ಬಿಸಿದಳು.

"ನಿನ್ನ ಹೆಸರೇನೇ ಚಿಗವ್ವಾ?" ಎಂದು ಪ್ರಶ್ನಿಸಿದಳು ಫಾತಿಮಳ ಮಗಳು ಮವ್ತಾಜ್.

"ಯಮುನಾ."

"ನಿನ್ನ ಗಂಡನ ಹೆಸರು?"

"ಈಗಲೇ ಸುರು ಮಾಡಬ್ಯಾಡ ನಿನ್ನ ಮುಲುಖವೈದಾನ್. ಈಕಿ ಊಟ ಮಾಡುತನಕ ಆದ್ರೂ ಸುಮ್ಮನಿರು," ಎಂದು ಮಗಳನ್ನು ಗದರಿಸಿ ಫಾತಿಮಾ ಒಳಗಿನ ಕೋಟಡಿಗೆ ಯಮುನಳನ್ನು ಕರೆದೊಯ್ದಳು.

ಎಂಟು ಅಡಿ ಉದ್ದವೂ ಆರು ಅಡಿ ಅಗಲವೂ ಆದ ಚಿಕ್ಕ ಕೋಟಡಿ. ಒಂದು ಮೂಲೆಯಲ್ಲಿ ಒಲೆ, ಅದರ ಹತ್ತಿರವೇ ಸಣ್ಣ ಬಚ್ಚಲು. ಅಲ್ಲಿಯೆ ಗಡಿಗೆ ಮಡಿಕೆಗಳು. ಒಂದು ಕೊಡ, ಒಂದು ಹರವಿ. ಹಿತ್ತಾಳೆಯ ಪಾತ್ರೆಗಳು ಕೆಲವು. ಅಡ್ಡವಾಗಿ ನೇತಾಡುತ್ತಿದ್ದ ಬಿದಿರು ಗಳದ ಮೇಲೆ ಸೀರೆ ರವಕೆಗಳು. ಕೊಂಚ ದೂರದಲ್ಲಿ ಒಂದು ಚಾಪೆ, ಅದರ ಮೇಲೊಂದು ಕಂಬಳಿ. ಹತ್ತಿರದಲ್ಲಿಯೇ ಒಂದು ಮುರುಕು ಪೆಟ್ಟಿಗೆ. ಗೋಡೆಗಿದ್ದ ಮೊಳೆಯೊಂದಕೆ ಚಿಮಣಿ ದೀಪವೊಂದು ನೇತಾಡುತ್ತ ಮಂದ ಬೆಳಕು ಸುರಿಯುತ್ತಿದ್ದಿತು.

ತಟ್ಟೆಯಲ್ಲಿ ಅನ್ನವನ್ನೂ ಎಸರು ಬೇಳೆಯನ್ನೂ ಬಡಿಸಿ ಯಮುನಳನ್ನು ಊಟಕ್ಕೆ ತೊಡಗಿಸಿದಳು ಫಾತಿಮಾ. ನಾಲ್ಕೈದು ತುತ್ತು ನುಂಗುವುದೇ ಮಹಾ ಪ್ರಯಾಸದ ಕೆಲಸವಾಯಿತು. ಕಂಠ ಉಬ್ಬಿ ಬಂದಿದ್ದಿತು. ಗಂಟಲಲ್ಲಿ ಅನ್ನವಿಳಿಯದಂತಾಗಿದ್ದಿತು. ರೈಲಿನ ಕೆಳಗೆ ಬಿದ್ದು ಸತ್ತುಹೋಗುವದರಲ್ಲಿದ್ದ ತನ್ನನ್ನು ಕರೆದು ತಂದು ಪ್ರೀತಿಯಿಂದಲೂ ಆತ್ಮೀಯತೆಯಿಂದಲೂ ಉಪಚರಿಸುತ್ತಿದ್ದ ಆ ಮುಸಲ್ಮಾನ ಕುಟುಂಬದ ಬಗೆಗೆ ಕೃತಜ್ಞತೆಯುಕ್ಕಿ ಬಂದು ಅವಳ ಕಣ್ಣುಗಳಲ್ಲಿ ನೀರಾಗಿ ಹರಿಯುತ್ತಿದ್ದಿತು. ಅವರು ತನಗೆ ಯಾರೊ, ತಾನು ಅವರಿಗೆ ಯಾರೊ! ಗುರುತಿಲ್ಲ, ಪರಿಚಯವಿಲ್ಲ, ಸಂಬಂಧವಿಲ್ಲ. ಸ್ನೇಹವಿಲ್ಲ. ಆದರೂ ಇಷ್ಟೊಂದು ಪ್ರೀತಿ....ಕನಿಕರ....ಆತ್ಮೀಯತೆ!

"ಉಣ್ಣವ್ವಾ, ಉಣ್ಣು." ಫಾತಿಮಾ ಮತ್ತೆ ಮತ್ತೆ ಬಲವಂತ ಮಾಡು ತ್ತಿದ್ದಳು. ಯಮುನಳಿಗೆ ಆ ಕ್ಷಣಕ್ಕಂತೂ ತನ್ನ ದುಃಖವೆಲ್ಲ ಮರೆತು ಹೋಯಿತು. ಅನ್ನವನ್ನು ಮುಗಿಸಿ ಮೇಲಕ್ಕೆದ್ದಳು.

ಬಾಬುವು ಊಟ ಮಾಡಿ ಬೀಡಿಯೊಂದನ್ನು ಹೊತ್ತಿಸಿ ಸೇದುತ್ತ— "ಇಲ್ಲೇ ಆರಾಮಾಗಿ ಮಲಗಿರು ಯಮುನಾ. ಯಾವುದೂ ಚಿಂತೀ ಮಾಡ ಬ್ಯಾಡ" ಎಂದು ಹೇಳಿ ಹೊರಗಡೆ ಹೊರಟುಹೋದ.

ಮುಮ್ತಾಜಳ ಕಣ್ಣು ಭಾರವಾಗತೊಡಗಿದ್ದುವು ಮಗಳನ್ನು ಚಾಪೆಯ ಮೇಲೆ ಮಲಗಿಸಿ ಫಾತಿಮಾ ತಾನೂ ಊಟ ಮುಗಿಸಿದಳು.

"ಮಲಗುತೀಯಾ ಯಮುನಾ? ನಿದ್ದೆ ಬಂದಿಲ್ಲ?"

"ಇಲ್ಲವ್ವ."

ಹೇಗೆ ತಾನೆ ಬಂದೀತು ನಿದ್ದೆ ಅವಳಿಗೆ? ಒಂದು ತಾಸಿಗೆಮೊದಲು ತಾನು ರೈಲು ಹಳಿಗಳಮೇಲೆ ಮಲಗಿ ಪ್ರಾಣ ತ್ಯಜಿಸಲು ಕಾಯುತ್ತಿದ್ದ ದೃಶ್ಯವೇ ಮತ್ತೆ ಮತ್ತೆ ಅವಳ ಒಗೆಗಣ್ಣಿನೆದುರಿಗೆ ಮೂಡುತ್ತಿದ್ದಿತು. ಆ ಹೊತ್ತಿಗೆ ಸರಿಯಾಗಿ ಬಾಬು ಅಲ್ಲಿಗೆ ಬರದಿದ್ದಲ್ಲಿ ಈಗ ತಾನೀ ಲೋಕದಲ್ಲಿಯೇ ಇರುತ್ತಿರಲಿಲ್ಲ. ಆಗಲೇ ಹಾರಿ ಹೋಗುತ್ತಿತ್ತು, ತನ್ನ ಪ್ರಾಣಪಕ್ಷಿ. ಎಲ್ಲಿಗೆ? ಎಲ್ಲಿಗೆ?

ಮುಮ್ತಾಜಳ ಪಕ್ಕದಲ್ಲಿ ಒಂದು ತಲೆಗಿಂಬು ಇರಿಸಿ ಫಾತಿಮಾ ಹೇಳಿ ದಳು: "ಮಲಗಿಕೊಂಡು ಬಿಡವ್ವ. ನಾ ಹೊರಗಿನ ಖೋಲಿಯೊಳಗ ಇರುತೀನಿ"

ಗೋಡೆಗಿದ್ದ ಚಿಮಣಿಯನ್ನು ತೆಗೆದುಕೊಂಡು, ನಡುವಿನ ಬಾಗಿಲನ್ನು ಮುಚ್ಚಿಕೊಂಡು ಫಾತಿಮಾ ಹೊರಗಿನ ಕೊಟಡಿಗೆ ಹೋದಳು. ಮುಮ್ತಾ ಜಳ ಪಕ್ಕದಲ್ಲಿ ದೇಹವನ್ನೊರಗಿಸಿ ಯಮುನಾ ದೃಷ್ಟಿಯನ್ನು ಶೂನ್ಯದಲ್ಲಿ ಹರಿ ಬಿಟ್ಟಳು.

ಕೊಂಚ ಹೊತ್ತು ಹಾಗೆ ಕಳೆಯಿತು. ನಿದ್ದೆ ಬರುವಂತಿರಲಿಲ್ಲ ಯಮುನಳಿಗೆ. ಚಾಪೆಯಲ್ಲೆಲ್ಲ ಮನೆ ಮಾಡಿದ್ದ ತಿಗಣೆಗಳು ಎದ್ದು ಬಂದು ಅವಳ ನೆತ್ತರನ್ನು ಕುಡಿಯತೊಡಗಿದುವು. ಸೊಳ್ಳೆಗಳೂ ದಾಳಿಗಾರಂಭಿ ಸಿದುವು. ಬಚ್ಚಲಿನಿಂದ ದುರ್ವಾಸನೆಯೆದ್ದು ಕೊಟಡಿಯನ್ನೆಲ್ಲ ತಬ್ಬಿ ಕೊಂಡಿತು. ಇಲಿಗಳ ಓಡಾಟಕ್ಕೂ ಆರಂಭವಾಯಿತು. ಅದಾವುದೂ

ಯಮುನಳ ಗಮನಕ್ಕೆ ಬರಲಿಲ್ಲ.

ಹೊರಗಡೆ ಓಣಿಯಲ್ಲಿ ಕುಡುಕನೊಬ್ಬ ಧ್ವನಿ ಏರಿಸಿ ಅಶ್ಲೀಲವಾಗಿ ಮಾತನಾಡುವುದೂ ಅದಕ್ಕೆ ಉತ್ತರವಾಗಿ ಹೆಂಗುಸೊಬ್ಬಳು ಇನ್ನೂ ಅಶ್ಲೀಲ ವಾಗಿ ಬಯ್ಯುವುದೂ ಕೇಳಿಸುತ್ತಿದ್ದಿತು. ನಾಯಿಯೊಂದು ಬಗಳುತ್ತಿದ್ದಿತು. ಯಾರೋ ವಿಚಿತ್ರವಾಗಿ ಹಾಡುತ್ತಿದ್ದರು. ಯಾರೋ ನಗುತ್ತಿದ್ದರು. ಯಾರೊ ಚಪ್ಪಾಳೆ ತಟ್ಟುತ್ತಿದ್ದರು.

ಒಂದು ಗಂಟೆ ಕಳೆದಿರಬಹುದು. ಹೊರಗಿನ ಕೊಟಡಿಯಲ್ಲಿ ಫಾತಿಮನ ಜತೆಗೆ ಯಾರೋ ಮಾತನಾಡುವುದು ಕೇಳಿಬರತೊಡಗಿತು. ಅದು ಬಾಬು ವಿನ ಧ್ವನಿಯಂತಿರಲಿಲ್ಲ.

"ಯಾಕ ಬಾಗಿಲಾ ಹಾಕಿದ್ದೀ ಒಳಗಿಂದು?"

"ನಮ್ಮ ಪೈಕಿ ಒಬ್ಬಾಕಿ ಮಲಗಿದಾಳ."

"ನಿಮ್ಮ ಪೈಕಿ? ನನಗ ಗೊತ್ತಿಲ್ಲದಾಕಿ ಯಾವಾಕಿ ಬಂದಳಪ್ಪ? ನಮಗ ತೋರಿಸುವದಿಲ್ಲೇನು?"

"ಇವತ್ತು ಬ್ಯಾಡ. ಪಾಪ. ಆಕಿಗೆ ಬಹಳ ತ್ರಾಸ ಆಗ್ಯೆತಿ. ಗಾಡಿಯ ಮುಂದ ಬಿದ್ದು ಜೀವಾ ಕೊಡಾಕ ಹೋಗಿದ್ದಳಂತೆ. ಬಾಬ್ಯಾ ಉಳಿಸಿ ಕೊಂಡು ಬಂದಾನ."

"ವಯಸ್ಸೆಷ್ಟು ಫಾತಿಮಾ ಆಕೀದು?"

"ಇಪ್ಪತ್ತು ಇಪ್ಪತ್ತೊಂದು ಇದ್ದೀತು."

"ಅರೆ! ಈ ವಯಸ್ಸಿನಾಗ ಯಾರಾದರೂ ತಾವಾಗೇ ಪ್ರಾಣಾ ಕಳ ಕೊಳ್ಳಾಕ ಹೋಗುತಾರೇನು! ನೋಡೂದಕ್ಕ ಹೆಂಗಿದಾಳೆ?"

"ಗಟ್ಟಿಮುಟ್ಯಾಗಿದಾಳ. ಹಳ್ಳಿಯ ಹೆಣ್ಣು. ಒಳ್ಳೆ ತುಂಬಿದ ಪ್ರಾಯ."

"ತಲಿ ಗಿಲಿ ಕೆಟ್ಟೈತ್ತೋ ಏನು ಮಣ್ಣೋ. ಇಂಥಾಕಿ ಸಾಯಾಕ ಹೋಗೂದಂದರೇನು!"

"ಅಂಥಾ ಕಾರಣ ಏನಾರೆ ಇರಾಕಬೇಕು. ಸುಮ್ಮಸುಮ್ಮನೆ ಯಾರು ಕಳಕೊಂತಾರ ಪ್ರಾಣಾ?"

"ಏನದು ಅಂಥಾ ಕಾರಣ?"

"ಏನೋ ನನಗೂ ಗೊತ್ತಿಲ್ಲ. ಹೊತ್ತಾಯ್ತು. ಮಲಗಿಕೊಳ್ಳಿರಿ. ದೀಪ ಆರಿಸಲೇ ?" ಎಂದು ಫಾತಿಮಾ ದೀಪ ಆರಿಸಿಬಿಟ್ಟಳು. ಸಂಭಾಷಣೆಯೂ ಅಲ್ಲಿಗೇ ನಿಂತುಹೋಯಿತು.

ಚಾಪೆಯ ಮೇಲೆ ಬಿದ್ದುಕೊಂಡಿದ್ದ ಹಾಗೆ ಆ ಮಾತುಗಳನ್ನಾಲಿಸುತ್ತಿದ್ದ ಯಮುನಾಗೆ ಕೊಂಚ ಆಶ್ಚರ್ಯವಾಗದಿರಲಿಲ್ಲ. ಫಾತಿಮಾನೊಂದಿಗೆ ಮಾತನಾಡುವ ಆ ಗಂಡುಸು ಯಾರೆಂಬುದು ಆಕೆಗೆ ಅರ್ಥವಾಗಲಿಲ್ಲ. ಬಾಬುವಂತೂ ಅಲ್ಲ ಆತ. ಬಾಬುವೇ ಆ ಮನೆಯೊಡೆಯ, ಫಾತಿಮಾ ಆತನ ಹೆಂಡತಿ, ಮುಮ್ತಾಜ ಅವರ ಮಗಳು ಎಂದು ಆಕೆ ತಿಳಿದಿದ್ದಳು. ಹಾಗಿದ್ದಲ್ಲಿ ಬಾಬು ಇಲ್ಲದಾಗ ಇಲ್ಲಿಗೆ ಬಂದು ಫಾತಿಮಳೊಂದಿಗೆ ಮಲಗಿಕೊಳ್ಳುವವನಾರೀತ ? ಇದೆಂಥ ವಿಚಿತ್ರ ?

ಬಾಬುವಿನ ಸಂಗಡ ತಾನು ಆ ಓಣಿಯಲ್ಲಿ ಅಡಿಯಿರಿಸಿದಾಗ ಪ್ರತಿಯೊಂದು ಮನೆಯೆದುರಿಗೂ ಕುಳಿತು ಹರಟೆ ಕೊಚ್ಚುತ್ತಿದ್ದ ಹೆಂಗಳೆಯರು ! ಮೂರು ನಾಲ್ಕು ಜನರು ಎದ್ದು ತನ್ನನ್ನು ನೋಡಲು ಬಂದಿದ್ದರು. ಅವರ ರೂಪು, ಉಡಿಗೆ ತೊಡಿಗೆಗಳು ಸಂಸಾರಸ್ಥರ ಹಾಗಿರಲಿಲ್ಲ. ಎಡಗಡೆಗೋ ಬಲಗಡೆಗೋ ತೆಗೆದ ಬೈತಲೆ, ಹಣೆಯ ಮೇಲೂ ಕಿವಿಯ ಮೇಲೂ ಸುತ್ತಿಸುತ್ತಿ ಬಾಚಿದ ತಲೆಗೂದಲು, ಆಟದ ಪಾತ್ರಧಾರಿಗಳಂತಿದ್ದ ಮುಖ, ಸಂಕೋಚವಿಲ್ಲದ ಸ್ವಚ್ಛಂದ ವರ್ತನೆ. ಅಶ್ಲೀಲ ಮಾತು....ಗದ್ದಲ ಮಾಡುತ್ತಿದ್ದ ಕುಡುಕ....ಆತನನ್ನು ಬಯ್ದು ಗದರಿಸುತ್ತಿದ್ದ ಹೆಣ್ಣು........ ಫಾತಿಮಳ ಜತೆಗೆ ಮಲಗಿಕೊಂಡ ಈ ಮನುಷ್ಯ...."

ಯಾರಾಗಿರಬಹುದು ಈ ಫಾತಿಮಾ ? ಈ ಹೆಂಗುಸರೆಲ್ಲ ಸಂಸಾರಿಗಳಂತೆ ಕಾಣಿಸುವುದಿಲ್ಲ. ಹಾಗಾದರೆ.... ? ಯಾರು ಇವರು ? ಯಾರದು ಓಣಿ ?

ಸೂಳೆಯರೇ ? ಸೂಳೆಯರ ಓಣಿಯೇ ಇದು ?

ಈ ಮೊದಲೆಂದೂ ಯಮುನಾ ಸೂಳೆಯರ ಓಣಿಯಲ್ಲಿ ಪ್ರವೇಶಿಸಿರಲಿಲ್ಲ. ಈ ನಗರಕ್ಕೆ ಬಂದುದೂ ಒಂದೆರಡು ಸಲ, ಅಷ್ಟೆ. ಅದೂ ತೀರಾ ಚಿಕ್ಕವಳಿದ್ದಾಗ. ದೊಡ್ಡವಳಾದ ಬಳಿಕ, ತಿಳಿವು ಬಂದ ಬಳಿಕ ನಗರಕ್ಕೆ ಬರುವ ಸಂದರ್ಭ ಬಂದಿರಲಿಲ. ಸೂಳೆಯರ ಓಣಿಗೆ ಬರುವ ಮಾತಂತೂ ದೂರವೇ

ಉಳಿಯಿತು.

ಸೂಳೆಯರ ಓಣಿಯೊಂದಿಗೆ ಸಂಬಂಧ ಬಂದಿರಲಿಲ್ಲವಾದರೂ ಸೂಳೆಯ ರೆಂದರೆ ಯಾರೆಂಬುದು ಆಕೆಗೆ ಗೊತ್ತಿರದಿರಲಿಲ್ಲ. ಸೂಳೆಯ ಬಾಳಿನಿಂದ ಪಾರಾಗುವುದಕ್ಕಾಗಿಯೇ ರೈಲಿನ ಕೆಳಗೆ ಬೀಳಲು ಹೋಗಿದ್ದ ತಾನು ಮತ್ತೆ ಸೂಳೆಯರ ಪ್ರಪಂಚಕ್ಕೇ ಬಂದು ಬೀಳುವಂತಾಯಿತಲ್ಲ! "ನನ್ನ ಕಾಡುವ ದೈವ ಹಿಂಗೆಲ್ಲಾ ಆಟ ಆಡುತ್ತಿರಬೇಕು." ಎಂದುಕೊಂಡು ಮಮ್ತಾಜಳನ್ನು ತಬ್ಬಿಕೊಂಡು ಮಲಗಿದಳು.

## ತೆರೆ: ಎರಡು.

ಬೆಳಗಾಯಿತು. ಮುದುಕಿ ದುರ್ಗವ್ವನ ದೊಡ್ಡ ಹುಂಜ ರೆಕ್ಕೆಗಳನ್ನು ನಿಮಿರಿಸಿ ಧ್ವನಿಯೆತ್ತಿ ಕೂಗಿತು. ಹಿಂಗಾಲುಗಳಲ್ಲಿ ಮುಖ ಮುಚ್ಚಿಕೊಂಡು ಬಿದ್ದುಕೊಂಡಿದ್ದ ನಾಯಿಯು ಎಚ್ಚರಗೊಂಡು ಮೈ ಜಾಡಿಸುತ್ತ ಮೇಲಕ್ಕೆದ್ದಿತು. ಸಾವಿತ್ರಿಯ ಬೆಕ್ಕು ಮನೆಯ ಮೇಲ್ಕಟ್ಟಿನೊಳಗಿನಿಂದ ಇಳಿದು ಬಂದು ದುರ್ಗವ್ವನ ಹುಂಜವನ್ನಟ್ಟಿಸಿಕೊಂಡು ಹೋಯಿತು.

ಓಣಿಯಲ್ಲಿ ಯಾರ ಮನೆಯ ಬಾಗಿಲೂ ತೆರೆದಿರಲಿಲ್ಲ. ಚಿನ್ನಪ್ಪನ ಅಂಗಡಿಯೂ ಮುಚ್ಚಿಕೊಂಡಿದ್ದಿತು. ರಾತ್ರಿಯಲ್ಲಿ ಹೆಂಗಳೆಯರು ಸಿಡಿಸಿದ ಉಗುಳು ಓಣಿಯ ನೆಲಕ್ಕೆಲ್ಲ ಬಣ್ಣ ಬಳಿದಿದ್ದಿತು.

ಸೂರ್ಯೋದಯವಾದ ಒಂದು ಗಂಟೆಯ ತರುವಾಯ ದುರ್ಗವ್ವನ ಮನೆಯ ಬಾಗಿಲು ತೆರೆಯಿತು. ಕಣ್ಣುಗಳಲ್ಲಿ ತುಂಬಿದ್ದ ಪಿಚ್ಚನ್ನು ಬೆರಳುಗಳಿಂದ ಒರೆಸುತ್ತ ಆಕೆ ಮೆಟ್ಟಿಲುಗಳ ಮೇಲೆ ಬಂದು ನಿಂತಳು. ಎದುರಿಗಿನ ಮನೆಯ ಮುಂದೆ ಕುಳಿತುಕೊಂಡು ದೂರದಲ್ಲಿದ್ದ ನಾಯಿಯನ್ನು ದಿಟ್ಟಿಸುತ್ತಲಿದ್ದ ಬೆಕ್ಕು ಅವಳ ದೃಷ್ಟಿಯನ್ನು ಸೆಳೆಯಿತು. ಪಿಚ್ಚು ತೆಗೆಯುವುದನ್ನು ಮರೆತು ದುರ್ಗವ್ವ ಸಿಟ್ಟಿನಿಂದ ಉರಿಯುತ್ತ— "ಬೆಳಗಾಗ ನಿನ್ನ ಮಾರೀನೇ ಕಾಣಿಸಬೇಕೇ ಹಡಬೆ! ನಿನ್ನೆಯೂ ಹಂಗೇ ಆಯ್ತು. ಇಡೀ ರಾತ್ರಿಯೆಲ್ಲಾ ನನ್ನ ಚಿನ್ನಿಗೆ ವ್ಯಾಪಾರನೇ ಆಗಲಿಲ್ಲ. ಇವತ್ತೂ ಬರಿಗೈಯೋ ಏನೋ. ನಿನ್ನಒಯ್ದು ಮಣ್ಣಾಗ ಹಾಕಲೀ...." ಎಂದು ಶಪಿಸುತ್ತಾ ಬೆಕ್ಕನ್ನು ಅಟ್ಟಿಸಿ

ಕೊಂಡು ಹೋದಳು. ಅದು ಒಂದೇಟಿಗೇ ಸಾವಿತ್ರಿಯ ಮನೆಯ ಮೇಲ್ಛಟ್ಟಿಗೆ ಹಾರಿ ಒಳಗಡೆ ನುಸುಳಿಕೊಂಡಿತು. ದುರ್ಗವ್ವ ಗೊಣಗಿಕೊಳ್ಳುತ್ತ ಶೌಚ ಕೂಪದತ್ತ ತೆರಳಿದಳು.

ದುರ್ಗವ್ವನಿಗೆ ಅಂಥ ವಯಸ್ಸೇನೂ ಆಗಿಲ್ಲ. ಬಹಳವಾದರೆ ಐವತ್ತು ಇರಬಹುದು, ಅಷ್ಟೆ. ಆದರೂ ಆಕೆಯನ್ನು ಆ ಓಣಿಯವರೆಲ್ಲ 'ಮುದುಕೀ' ಎಂದು ಕರೆಯುತ್ತಾರೆ. ಆಕೆ ಮುದುಕಿಯಾಗಿ ಕಾಣುವುದೂ ನಿಜವೆ. ಸಿಡುಬಿನ ಕಲೆಗಳಿಂದ ವಿಕೃತವಾದ ಅವಳ ಮುಖದ ತುಂಬಾ ವೃದ್ಧಾಪ್ಯದ ಗೆರೆಗಳು ಕಾಣಿಸಿಕೊಂಡಿವೆ. ಹುಣ್ಣುಗಳ ಪರಿಣಾಮವಾಗಿ ದೇಹದ ಚರ್ಮ ವೆಲ್ಲ ಬಣ್ಣಗೆಟ್ಟಿದೆ. ಕಣ್ಣುಗಳ ಶಕ್ತಿಯೂ ಕಡಮೆಯಾಗಿದೆ. ನಡೆದಾಡು ವಾಗ ಬೆನ್ನು ಬಾಗುತ್ತದೆ. ಯಾವುದೊಂದು ಶ್ರಮದ ಕೆಲಸ ಮಾಡಿದಾಗ ಉಸಿರು ವೇಗವಾಗಿ ಹೊರಡುತ್ತದೆ. ಆಗಾಗ ಕೆಮ್ಮು ಬರುತ್ತದೆ. ದುರ್ಗವ್ವ ಇನ್ನೂ ಜೀವಿಸಿರುವುದೇ ದೊಡ್ಡ ವಿಷಯ—ಎಂದು ಅಲ್ಲಿನ ಹೆಂಗಳೆಯರೆಲ್ಲ ಹೇಳುತ್ತಾರೆ. ವಯಸ್ಸಿನಲ್ಲಿ ದುರ್ಗವ್ವನೇ ಅಲ್ಲಿ ಎಲ್ಲರಿಗೂ ಹಿರಿಯಳು. ಮಾತು ಬಲು ಒರಟು. ಬೈಗಳಂತೂ ಆಕೆಯ ನಾಲಿಗೆಯ ಮೇಲೇ ಕಾದು ಕೊಂಡಿರುತ್ತವೆ. ಯಾರನ್ನು ಮಾತನಾಡಿಸಬೇಕಾದರೂ "ಏ ಹೊಯ್ಮಾಲೀ, ಏ ಛಿನಾಲೀ" ಎಂದೇ ಸಂಬೋಧಿಸುವುದು ಆಕೆಯ ಚಟ. ಅದೊಂದು ಚಟವೇ ಆಗಲಿ, ಆದರಲ್ಲೇನೂ ಅರ್ಥವಿಲ್ಲವೆಂಬುದು ಓಣಿಯವರಿಗೆಲ್ಲ ಚೆನ್ನಾಗಿ ಗೊತ್ತು. ಅಂತೆಯೆ, ಆಕೆಯ ಬೈಗಳಿಗೆ ಕೊಂಚವೂ ಗಮನ ವೀಯದೆ ಎಲ್ಲರೂ ನಗುತ್ತಲೇ ಇರುತ್ತಾರೆ.

ಶೌಚಕರ್ಮಗಳನ್ನು ಮುಗಿಸಿ ದುರ್ಗವ್ವ ನೇರವಾಗಿ ಫಾತೀಮಳ ಮನೆಗೆ ಬಂದಳು. ಅಷ್ಟು ಹೊತ್ತಿಗಾಗಲೆ ಫಾತೀಮಳೂ ಎದ್ದು ಒಲೆಯ ಮೇಲೆ ಚಹಕ್ಕೆ ಎಸರಿಡುತ್ತಿದ್ದಳು. ಹೊರಗಿನ ಕೊಟಡಿಯಲ್ಲಿ ಬಾಬು ಮಲಗಿ ಕೊಂಡು ಗೊರಕೆ ಹೊಡೆಯುತ್ತಲಿದ್ದ. ಒಳಗೆ ಮಮ್ತಾಜ್ ಇನ್ನೂ ನಿದ್ದೆ ಯಲ್ಲಿದ್ದಳು. ಯಮುನಾ ಆಗ ತಾನೆ ಎದ್ದು ಮುಖ ತೊಳೆದುಕೊಳ್ಳುತ್ತಿ ದ್ದಳು.

ದುರ್ಗವ್ವ ಮನೆಯಲ್ಲಿ ಅಡಿಯಿರಿಸುತ್ತ—"ಇನ್ನೂ ಆರಾಮ ಮಲಗಿ ದಾಳಲ್ಲ ನಮ್ಮ ರಾಜಕುಮಾರಿ!" ಎಂದು ನುಡಿದು ಮಮ್ತಾಜಳ ಮುದ್ದು

ಮುಖವನ್ನು ಮಮತೆಯಿಂದ ದಿಟ್ಟಿಸುತ್ತ ಎಡಗೈಯನ್ನು ನೆಲಕ್ಕೂರಿ ಕುಳಿತು ಕೊಂಡಳು. ಓಣಿಯವರನ್ನೆಲ್ಲ ಬೈಯುವ ದುರಗವ್ವ ಮುಮ್ತಾಜಳೊಬ್ಬಳನ್ನು ಮಾತ್ರ ಬೈಯುವುದಿಲ್ಲ. ಆಕೆಯನ್ನು ಕರೆಯುವಾಗ್ಗೆ "ಛಿನಾಲಿ" "ಭೋಸಡಿ" ಮುಂತಾದ ಶಬ್ದಗಳನ್ನೂ ಉಪಯೋಗಿಸುವುದಿಲ್ಲ. "ರಾಜಕುಮಾರಿ" "ರಾಣಿ" ಎಂಬ ಪ್ರೀತಿಯ ಮಾತುಗಳಿಂದ ಕರೆಯುತ್ತಾಳೆ. ಹಾಗೆ ಕರೆಯುವುದರಲ್ಲಿ ದುರ್ಗವ್ವನ ಹಿರಿಮೆಯೇನೂ ಇರಲಾರದು. ಅದು ಮುಮ್ತಾಜಳ ಮಹತಿ. ಎಂಥವರ ಹೃದಯದಲ್ಲೂ ಮೋಹ ಹುಟ್ಟಿಸುವಂಥ ಮುದ್ದು ಬಾಲಕಿ ಆಕೆ. ಅವಳ ರೂಪು ಎಳೆಯ ಚಂದ್ರನಂತೆ. ಮಾತು ಅರಗಿಣಿಯಂತೆ. "ಅವ್ವ" "ಅಕ್ಕ" ಎಂದು ಸಂಬೋಧಿಸುತ್ತ ಎಲ್ಲರನ್ನೂ ಗೆದ್ದುಕೊಂಡಿದ್ದಾಳೆ. ರೂಪಜೀವಿಗಳ ಆ ಓಣಿಯಲ್ಲಿ ಮಕ್ಕಳಾಗದಂತೆ ಎಚ್ಚರಿಕೆ ವಹಿಸುವ ಹೆಂಗಳೆಯರೇ ಹೆಚ್ಚು ಜನ. ಅಂತೆಯೆ, ಓಣಿಗೆಲ್ಲ ಒಬ್ಬಳೇ ಒಬ್ಬಳಾದ ಬಾಲಕಿ ಮುಮ್ತಾಜ್ ಎಂದರೆ ಎಲ್ಲರಿಗೂ ಅಚ್ಚುಮೆಚ್ಚು. ಅಲ್ಲಿಗೆ ಬರುವ ಗಂಡುಸರಿಗೂ ಅಷ್ಟೆ. ಮುಮ್ತಾಜ್ ಎಂದರೆ ತುಂಬ ಪ್ರೀತಿ. ಮಲ್ಲಿಯ ಪ್ರಿಯಕರ ಹಣಮು ಮುಮ್ತಾಜಳಿಗೂ ಪ್ರತಿದಿನ ಏನಾದರೊಂದು ತಿಂಡಿಯ ವಸ್ತು ತರುತ್ತಾನೆ. ಸಾವಿತ್ರಿಯ ಮನೆಗೆ ಬರುವ ಪೋಲೀಸು ಹವಾಲ್ದಾರ ಮುಮ್ತಾಜಳಿಗಾಗಿ ಆಗಾಗ ಆಟಿಗೆಯ ವಸ್ತುಗಳನ್ನು ತಂದು ಕೊಡುತ್ತಾನೆ. ಹಣ್ಣುಹಂಪಲು, ಬೆಂಡು ಬತ್ತಾಸು, ಕನ್ನಡಿ ಬಾಚಣಿಗೆ; ಮುಮ್ತಾಜಳಿಗೆ ಯಾವುದಕ್ಕೂ ಕೊರತೆಯಿಲ್ಲ.

"ಇನ್ನೂ ಮಲಗಿದಾಳಲ್ಲ ನಮ್ಮ ರಾಜಕುಮಾರಿ!" ಎಂದು ದುರ್ಗವ್ವ ನುಡಿಯುತ್ತಲೂ ಮುಮ್ತಾಜ್ ಕಣ್ಣು ತೆರೆದಳು. "ಯಾರು ಅಜ್ಜಿ ಬಂದಾಳೇನು! ಏನಜ್ಜಿ, ಇಷ್ಟು ಲಗು ಎದ್ದಿಯೇನು?" ಎನ್ನುತ್ತ ಮೇಲಕ್ಕೆದ್ದು ದುರ್ಗವ್ವನ ಬಳಿ ಬಂದು ಆಕೆಯ ತೊಡೆಯ ಮೇಲೇರಿ ಕುಳಿತಳು.

ಮುಮ್ತಾಜಳ ತಲೆಯನ್ನು ನೇವರಿಸುತ್ತ ದುರ್ಗವ್ವ ಯಮುನಳ ಕಡೆಗೆ ಹೊರಳಿ— "ಏನವ್ವ, ನೆಟ್ಟಗ ನಿದ್ದೆ ಮಾಡಿದಿಯಾ?" ಎಂದು ಕೇಳಿದಳು.

ನಿದ್ದೆ? ರಾತ್ರಿಯಲ್ಲೆಲ್ಲ ಯಮುನಳಿಗೆ ಕೊಂಚವೂ ನಿದ್ದೆ ಬಂದಿರಲಿಲ್ಲ. ಹೊರಗಿನ ಕೊಟಡಿಯಲ್ಲಿ ನಡೆಯುತ್ತಿದ್ದ ಚಲನವಲನಗಳನ್ನು ಕೇಳುತ್ತ, ಹಾಸುಗೆಯ ಮೇಲೆ ಹೊರಳಾಡುತ್ತ ಇರುಳನ್ನು ಕಳೆದಿದ್ದಳು. ಘಾತಿಮ

ಳೊಂದಿಗೆ ಮಲಗಿದ್ದವನು ಎರಡುತಾಸುಗಳ ತರುವಾಯ ಹೊರಟುಹೋಗಿದ್ದ. ಆಮೇಲೆ ಒಂದು ತಾಸು ಕಳೆದ ಬಳಿಕ ಬಾಬು ಮತ್ತೆ ಮನೆಗೆ ಬಂದು ಮಲಗಿದುದು ಗೊತ್ತಾಗಿದ್ದಿತು. "ಇವತ್ತು ಏನಾರೆ ಸಿಕ್ಕಿತೇನು ?" ಎಂದು ಪಿಸುದನಿಯಲ್ಲಿ ಕೇಳಿದ್ದಳು ಫಾತಿಮಾ. "ಅಲ್ಲಾ ನಮ್ಮ ಮ್ಯಾಲ ಸಿಟ್ಟಾದಂತೆ ಕಾಣುತ್ತೈತಿ. ನಾಲ್ಕು ದಿನಗಳಿಂದ ಒಂದು ಪೈಯೂ ಸಿಕ್ಕಿಲ್ಲ," ಎಂದಿಷ್ಟೇ ಹೇಳಿ ಬಾಬು ಸುಮ್ಮನಾಗಿದ್ದ. ಅವರು ಯಾವ ವಿಷಯವನ್ನು ಕುರಿತು ಮಾತನಾಡುತ್ತಿದ್ದರೆಂಬುದೇನೂ ಗೊತ್ತಾಗಿರಲಿಲ್ಲ ಯಮುನಳಿಗೆ. ಅಂಥ ರಾತ್ರಿಯಲ್ಲಿ ಬಾಬು ಹೊರಗಡೆ ಅಲೆಯುವುದೇಕೋ ಎಂದು ಯೋಚಿಸುತ್ತ ಬಿದ್ದುಕೊಂಡಿದ್ದಳು. ರಾತ್ರಿಯೆಲ್ಲ ಕಣ್ಣಿಗೆ ಕಣ್ಣು ಹತ್ತಿರಲಿಲ್ಲ.

"ಯಾವೂರಾಕಿ ಈ ಹುಡುಗಿ ?" ಅದು ದುರ್ಗವ್ವನ ಪ್ರಶ್ನೆ.

"ನನಗೂ ಗೊತ್ತಿಲ್ಲ. ಯಾವೂರವ್ವ ನಿನ್ನದು ?" ಎಂದು ಕೇಳಿದಳು ಫಾತಿಮಾ.

"ಇಲ್ಲೇ ಒಂದು ಹಳ್ಳಿ."

"ಬಾಬ್ಯಾ ಇನ್ನೂ ಬಿದ್ದೇ ಇದಾನಲ್ಲ?" ಎಂದಳು ದುರ್ಗವ್ವ.

"ನಿದ್ದೆ ಮಾಡಲಿ ಬಿಡು ಪಾಪ. ರಾತ್ರಿ ಬಹಳ ಹೊತ್ತಾದ ಮ್ಯಾಲ ಬಂದಾನ," ಎಂದಳು ಫಾತಿಮಾ.

ಆವರು ಚಹ ಕುಡಿಯುತ್ತ ಕುಳಿತಿದ್ದ ಹಾಗೆ ಮಲ್ಲಿ, ಸಾವಿತ್ರಿ, ಭಾಗೀರಥಿ, ಯಶೋದಾ ಒಳಗೆ ಬಂದರು. ಮುನ್ನಾ ದಿನದ ರಾತ್ರಿ ಹೊಸದಾಗಿ ಬಂದ ಹುಡುಗಿಯನ್ನು ಕಂಡು ಮಾತನಾಡಿಸಿ ಆಕೆಯ ವಿಷಯ ತಿಳಿದುಕೊಳ್ಳಲೆಂದೇ ಅವರೆಲ್ಲ ಬಂದುದು.

"ನಮ್ಮನ್ನು ಬಿಟ್ಟೇ ಚಹ ಕುಡಿದಿರೇನು ?" ಎಂದು ಹುಸಿಮುನಿಸಿನಿಂದ ನುಡಿದಳು ಮಲ್ಲಿ. ಆಕೆಗೆ ಮೂವತ್ತು ಮೂವತ್ತೈದು ವರ್ಷವಾಗಿರಬಹುದು. ಕಣ್ಣು ಮೂಗಿನಿಂದ ಆಕರ್ಷಕವಾಗಿದ್ದಳು. ಮುಖ ಬಿಳಿಚಿಕೊಂಡಿತ್ತಾದರೂ ಒಂದು ಕಾಲದಲ್ಲಿ ಸುಂದರವಾಗಿದ್ದಿತೆಂಬುದನ್ನೂ ಕಂಡುಕೊಳ್ಳಬಹುದಾಗಿದ್ದಿತು. ಕಪ್ಪು ಬಣ್ಣಕ್ಕೆ ತಿರುಗುತ್ತಿದ್ದ ಎಣ್ಣೆಯ ಬಣ್ಣದ ತೋಳುಗಳು. ಮೂಳೆಗಳನ್ನು ತೋರಿಸುತ್ತಿದ್ದ ಕೈಗಳು. ರಕ್ತದ ಅಭಾವದಿಂದ ಒಣಗಿದ್ದರೂ ತಾಂಬೂಲದಿಂದ ಕಳೆಗೊಂಡ ತುಟಿಗಳು. ಕೆನ್ನೆಗಳೆರಡೂ ಒಳಸೇರಿದ್ದುವಾದರೂ ಆಕೆ ನಕ್ಕಾಗ ಅವುಗಳಲ್ಲಿ ಕುಳಿ ಬೀಳುತ್ತಿತ್ತು. ಓಣಿಯ ಹೆಂಗಳೆ

ಯರಲ್ಲೆಲ್ಲ ಚೆಲುವೆಯೆಂದು ಹೆಸರಾಗಿದ್ದಿತು ಮಲ್ಲಿಗೆ. ಅಂತೆಯೆ, ಒಂದು ಕಾಲಕ್ಕೆ ಪೈಲವಾನನಾಗಿದ್ದ ಹಣಮ ಅವಳನ್ನು ಪ್ರೇಯಸಿಯನ್ನಾಗಿ ಮಾಡಿ ಕೊಂಡು ಅವಳ ಮನೆಯಲ್ಲಿಯೆ ಇರುತ್ತಿದ್ದ ದು.

"ಹೊಟೇಲಿನಾಗ ಚಾ ಹೇಳಿ ಬಾ ಹೋಗು ಮುದುಕಿ," ಎಂದು ದುರ್ಗವ್ವನನ್ನು ಕಳುಹಿಸಿ ಮಲ್ಲಿ ಯಮುನಳ ಕಡೆಗೆ ತಿರುಗಿ, "ನಿನ್ನ ಹೆಸರೇನೇ ?" ಎಂದು ಕೇಳಿದಳು. ಆಕೆ ತನ್ನ ಹೆಸರು ಹೇಳುತ್ತಲೂ— "ಹೆಸರೇನೋ ಚಂದ ಐತಿ. ನಿನಗೇನಾಗಿತ್ತು ಗಾಡಿಯ ಮುಂದೆ ಬೀಳಾಕ ?" ಎಂದು ಕೇಳಿದಳು. ಮುನ್ನಾದಿನ ರಾತ್ರಿ ತಮ್ಮ ಓಣಿಗೆ ಬಂದ ಹುಡುಗಿ ರೈಲಿನ ಬುಡಕ್ಕೆ ಬಿದ್ದು ಪ್ರಾಣ ಕಳೆದುಕೊಳ್ಳಲು ಪ್ರಯತ್ನಿಸಿದ್ದಳೆಂಬ ಸುದ್ದಿ ಅಷ್ಟೇ ಹೊತ್ತಿಗಾಗಲೆ ಎಲ್ಲರಿಗೂ ಗೊತ್ತಾಗಿದ್ದಿತು.

ಓಣಿಯ ಸನಿಯದಲ್ಲಿದ್ದ ಹೋಟೆಲಿನಿಂದ ಚಹ ಬಂದಿತು. ಅಷ್ಟರಲ್ಲಿ ಇನ್ನೂ ನಾಲ್ಕೈದು ಜನ ಹೆಂಗಳೆಯರು ಬಂದು ಸೇರಿದರು. ಚಹ ಕುಡಿದು ಎಲೆ ಅಡಿಕೆ ಹಾಕಿಕೊಂಡು ಮೆಲ್ಲುತ್ತ ಕುಳಿತರು.

"ಹೂಂ, ಹೇಳಲ್ಲ ? ಗಾಡಿಯ ಕೆಳಗ ಬೀಳುವಂಥ ಪ್ರಸಂಗ ಏನು ಬಂತು ನಿನಗ ?" ಎಂದು ಮತ್ತೆ ಕೇಳಿದಳು ಮಲ್ಲಿ.

"ಹೇಳವ್ವ. ಕೇಳೂಣು." ಫಾತಿಮಳೂ ದನಿಗೂಡಿಸಿದಳು.

ಬಾಬುವಿಗೂ ಎಚ್ಚರವಾಗಿದ್ದಿತು. ಆತ ಹಾಸುಗೆಯ ಮೇಲೆ ಒರಗಿ ಕೊಂಡಿದ್ದ ಹಾಗೆ ಒಂದು ಬೀಡಿ ಹೊತ್ತಿಸಿ ಹೊಗೆಯನ್ನೆಳೆಯುತ್ತಲಿದ್ದ.

ಒಳಗಿನ ಕೊಟಡಿಯಲ್ಲಿ ಯಮುನಾ ತನ್ನ ಕತೆ ಹೇಳಲು ಮೊದಲು ಮಾಡಿದ್ದಳು.

"ನನ್ನ ಮದುವೆ ಆದಾಗ ನಾನಿನ್ನೂ ಸಣ್ಣವಳು. ಎಂಟೋ ಒಂಬತ್ತೋ ವಯಸ್ಸು. ಆಗ ನನಗೇನೂ ತಿಳೀತಿರಲಿಲ್ಲ...."

## ತೆರೆ: ಮೂರು.

ಯಮುನಾಗೆ ಮದುವೆಯಾದಾಗ ಆಕೆಯಿನ್ನೂ ಸಣ್ಣವಳು. ಎಂಟೋ ಒಂಭತ್ತೋ ಇರಬಹುದು ವಯಸ್ಸು. ಆಗ ಆಕೆಗೇನೂ ತಿಳಿಯುತ್ತಿರಲಿಲ್ಲ.

ಳೊಂದಿಗೆ ಮಲಗಿದ್ದವನು ಎರಡುತಾಸುಗಳ ತರುವಾಯ ಹೊರಟುಹೋಗಿದ್ದ. ಆಮೇಲೆ ಒಂದು ತಾಸು ಕಳೆದ ಬಳಿಕ ಬಾಬು ಮತ್ತೆ ಮನೆಗೆ ಬಂದು ಮಲಗಿದುದು ಗೊತ್ತಾಗಿದ್ದಿತು. "ಇವತ್ತು ಏನಾರೆ ಸಿಕ್ಕಿತೇನು ?" ಎಂದು ಪಿಸುದನಿಯಲ್ಲಿ ಕೇಳಿದ್ದಳು ಫಾತಿಮಾ. - "ಅಲ್ಲಾ ನಮ್ಮ ವ್ಯಾಲ ಸಿಟ್ಟಾದಂತೆ ಕಾಣುತ್ತೈತಿ. ನಾಲ್ಕು ದಿನಗಳಿಂದ ಒಂದು ಪೈಯೂ ಸಿಕ್ಕಿಲ್ಲ," ಎಂದಿಷ್ಟೇ ಹೇಳಿ ಬಾಬು ಸುಮ್ಮನಾಗಿದ್ದ. ಅವರು ಯಾವ ವಿಷಯವನ್ನು ಕುರಿತು ಮಾತನಾಡುತ್ತಿದ್ದರೆಂಬುದೇನೂ ಗೊತ್ತಾಗಿರಲಿಲ್ಲ ಯಮುನಳಿಗೆ. ಅಂಥ ರಾತ್ರಿಯಲ್ಲಿ ಬಾಬು ಹೊರಗಡೆ ಅಲೆಯುವುದೇಕೋ ಎಂದು ಯೋಚಿಸುತ್ತ ಬಿದ್ದುಕೊಂಡಿದ್ದಳು. ರಾತ್ರಿಯೆಲ್ಲ ಕಣ್ಣಿಗೆ ಕಣ್ಣು ಹತ್ತಿರಲಿಲ್ಲ.

"ಯಾವೂರಾಕಿ ಈ ಹುಡುಗಿ ?" ಅದು ದುರ್ಗವ್ವನ ಪ್ರಶ್ನೆ.

"ನನಗೂ ಗೊತ್ತಿಲ್ಲ. ಯಾವೂರವ್ವ ನಿನ್ನದು ?" ಎಂದು ಕೇಳಿದಳು ಫಾತಿಮಾ.

"ಇಲ್ಲೇ ಒಂದು ಹಳ್ಳಿ."

"ಬಾಬ್ಯಾ ಇನ್ನೂ ಬಿದ್ದೇ ಇದಾನಲ್ಲ?" ಎಂದಳು ದುರ್ಗವ್ವ.

"ನಿದ್ದೆ ಮಾಡಲಿ ಬಿಡು ಪಾಪ. ರಾತ್ರಿ ಬಹಳ ಹೊತ್ತಾದ ವ್ಯಾಲ ಬಂದಾನ," ಎಂದಳು ಫಾತಿಮಾ.

ಅವರು ಚಹ ಕುಡಿಯುತ್ತ ಕುಳಿತಿದ್ದ ಹಾಗೆ ಮಲ್ಲಿ, ಸಾವಿತ್ರಿ, ಭಾಗೀರಥಿ, ಯಶೋದಾ ಒಳಗೆ ಬಂದರು. ಮುನ್ನಾ ದಿನದ ರಾತ್ರಿ ಹೊಸದಾಗಿ ಬಂದ ಹುಡುಗಿಯನ್ನು ಕಂಡು ಮಾತನಾಡಿಸಿ ಆಕೆಯ ವಿಷಯ ತಿಳಿದುಕೊಳ್ಳಲೆಂದೇ ಅವರೆಲ್ಲ ಬಂದುದು.

"ನಮ್ಮನ್ನು ಬಿಟ್ಟೇ ಚಹ ಕುಡಿದಿರೇನು ?" ಎಂದು ಹುಸಿಮುನಿಸಿನಿಂದ ನುಡಿದಳು ಮಲ್ಲಿ. ಆಕೆಗೆ ಮೂವತ್ತು ಮೂವತ್ತೈದು ವರ್ಷವಾಗಿರಬಹುದು. ಕಣ್ಣು ಮೂಗಿನಿಂದ ಆಕರ್ಷಕವಾಗಿದ್ದಳು. ಮುಖ ಬಿಳಿಚಿಕೊಂಡಿತ್ತಾದರೂ ಒಂದು ಕಾಲದಲ್ಲಿ ಸುಂದರವಾಗಿದ್ದಿತೆಂಬುದನ್ನೂ ಕಂಡುಕೊಳ್ಳಬಹುದಾಗಿದ್ದಿತು. ಕಪ್ಪು ಬಣ್ಣಕ್ಕೆ ತಿರುಗುತ್ತಿದ್ದ ಎಣ್ಣೆಯ ಬಣ್ಣದ ತೋಳುಗಳು. ಮೂಳೆಗಳನ್ನು ತೋರಿಸುತ್ತಿದ್ದ ಕೈಗಳು. ರಕ್ತದ ಅಭಾವದಿಂದ ಒಣಗಿದ್ದರೂ ತಾಂಬೂಲದಿಂದ ಕಳೆಗೊಂಡ ತುಟಿಗಳು. ಕೆನ್ನೆಗಳೆರಡೂ ಒಳಸೇರಿದ್ದುವಾದರೂ ಆಕೆ ನಕ್ಕಾಗ ಅವುಗಳಲ್ಲಿ ಕುಳಿ ಬೀಳುತ್ತಿತ್ತು. ಓಣಿಯ ಹೆಂಗಳೆ

ಯರಲ್ಲೆಲ್ಲ ಚೆಲುವೆಯೆಂದು ಹೆಸರಾಗಿದ್ದಿತು ಮಲ್ಲಿಗೆ. ಅಂತೆಯೆ, ಒಂದು ಕಾಲಕ್ಕೆ ಪೈಲವಾನನಾಗಿದ್ದ ಹಣಮ ಅವಳನ್ನು ಪ್ರೇಯಸಿಯನ್ನಾಗಿ ಮಾಡಿ ಕೊಂಡು ಅವಳ ಮನೆಯಲ್ಲಿಯೆ ಇರುತ್ತಿದ್ದುದು.

"ಹೊಟೇಲಿನಾಗ ಚಾ ಹೇಳಿ ಬಾ ಹೋಗು ಮುದುಕಿ," ಎಂದು ದುರ್ಗವ್ವನನ್ನು ಕಳುಹಿಸಿ ಮಲ್ಲಿ ಯಮುನಳ ಕಡೆಗೆ ತಿರುಗಿ, "ನಿನ್ನ ಹೆಸರೇನೇ ?" ಎಂದು ಕೇಳಿದಳು. ಆಕೆ ತನ್ನ ಹೆಸರು ಹೇಳುತ್ತಲೂ— "ಹೆಸರೇನೋ ಚಂದ ಐತಿ. ನಿನಗೇನಾಗಿತ್ತು ಗಾಡಿಯ ಮುಂದೆ ಬೀಳಾಕ ?" ಎಂದು ಕೇಳಿದಳು. ಮುನ್ನಾದಿನ ರಾತ್ರಿ ತಮ್ಮ ಓಣಿಗೆ ಬಂದ ಹುಡುಗಿ ರೈಲಿನ ಬುಡಕ್ಕೆ ಬಿದ್ದು ಪ್ರಾಣ ಕಳೆದುಕೊಳ್ಳಲು ಪ್ರಯತ್ನಿಸಿದ್ದಳೆಂಬ ಸುದ್ದಿ ಅಷ್ಟೇ ಹೊತ್ತಿಗಾಗಲೆ ಎಲ್ಲರಿಗೂ ಗೊತ್ತಾಗಿದ್ದಿತು.

ಓಣಿಯ ಸನಿಯದಲ್ಲಿದ್ದ ಹೋಟಲಿನಿಂದ ಚಹ ಬಂದಿತು. ಅಷ್ಟರಲ್ಲಿ ಇನ್ನೂ ನಾಲ್ಕೈದು ಜನ ಹೆಂಗಳೆಯರು ಬಂದು ಸೇರಿದರು. ಚಹ ಕುಡಿದು ಎಲೆ ಅಡಿಕೆ ಹಾಕಿಕೊಂಡು ಮೆಲ್ಲುತ್ತ ಕುಳಿತರು.

"ಹೂಂ, ಹೇಳಲ್ಲ ? ಗಾಡಿಯ ಕೆಳಗ ಬೀಳುವಂಥ ಪ್ರಸಂಗ ಏನು ಬಂತು ನಿನಗ ?" ಎಂದು ಮತ್ತೆ ಕೇಳಿದಳು ಮಲ್ಲಿ.

"ಹೇಳವ್ವ. ಕೇಳೂಣು." ಫಾತಿಮಳೂ ದನಿಗೂಡಿಸಿದಳು.

ಬಾಬುವಿಗೂ ಎಚ್ಚರವಾಗಿದ್ದಿತು. ಆತ ಹಾಸುಗೆಯ ಮೇಲೆ ಒರಗಿ ಕೊಂಡಿದ್ದ ಹಾಗೆ ಒಂದು ಬೀಡಿ ಹೊತ್ತಿಸಿ ಹೊಗೆಯನ್ನೆಳೆಯುತ್ತಲಿದ್ದ.

ಒಳಗಿನ ಕೊಟಡಿಯಲ್ಲಿ ಯಮುನಾ ತನ್ನ ಕತೆ ಹೇಳಲು ಮೊದಲು ಮಾಡಿದ್ದಳು.

"ನನ್ನ ಮದುವೆ ಆದಾಗ ನಾನಿನ್ನೂ ಸಣ್ಣವಳು. ಎಂಟೋ ಒಂಬತ್ತೋ ವಯಸ್ಸು. ಆಗ ನನಗೇನೂ ತಿಳೀತಿರಲಿಲ್ಲ...."

## ತೆರೆ: ಮೂರು.

ಯಮುನಾಗೆ ಮದುವೆಯಾದಾಗ ಆಕೆಯಿನ್ನೂ ಸಣ್ಣವಳು. ಎಂಟೋ ಒಂಭತ್ತೋ ಇರಬಹುದು ವಯಸ್ಸು. ಆಗ ಆಕೆಗೇನೂ ತಿಳಿಯುತ್ತಿರಲಿಲ್ಲ.

ಮದುವೆಯ ಅರ್ಥವೂ ಗೊತ್ತಿರಲಿಲ್ಲ. ಮದುವೆಯೆಂದರೆ ಅದೂ ಒಂದು ಆಟವೆಂದೇ ಆಕೆಯ ತಿಳಿವಳಿಕೆ. ಓಣಿಗೆಯ ಬಾಲ–ಬಾಲಕಿಯರೆಲ್ಲ ಕೂಡಿ ಆಗಾಗ ಮದುವೆಯಾಟ ಆಡುತ್ತಿದ್ದರು. ಅದರಲ್ಲಿ ಯಮುನಳೇ ಮದುವಣ ಗಿತ್ತಿ. ಗೌಡರ ಆಳುಮಗ ರಾಮ ಮದುವಣಿಗ. ದನ ಮೇಯಿಸಲು ಗುಡ್ಡಕ್ಕೆ ಹೋದಾಗಲೂ ಎಷ್ಟೋ ಸಲ ಅವರು ಆ ಆಟವನ್ನಾಡಿದ್ದರು. ರಾಮ ಸುತ್ತಿಕೊಳ್ಳುತ್ತಿದ್ದ ಪಾವುಡಕ್ಕೂ ಯಮುನಳ ದಟ್ಟಿಸೀರೆಯ ಸೆರಗಿಗೂ ಗಂಟು ಹಾಕಿ ಅವರು ಗಂಡಹೆಂಡಿರೆಂದು ಸಾರಿ ಕೈತಟ್ಟಿ ಕೇಕೆ ಹಾಕಿದ್ದರು ದನಗಾಹಿಗಳು. ಗುಡ್ಡದಲ್ಲಿ ದೊರೆಯುವ ಕಾರೆಹಣ್ಣು, ಬೋರೆ ಹಣ್ಣುಗಳ ನ್ನಾಯ್ದು ಮದುವೆಯೂಟ ಏರ್ಪಡಿಸಿದ್ದರು. ಅಂದಿನಿಂದ ರಾಮನೇ ತನ್ನ ಗಂಡ, ತಾನು ಆತನ ಹೆಂಡತಿ ಎಂದು ಯಮುನಾ ಭಾವಿಸಿದ್ದಳು. ರಾಮ ಹಾಗೆ ಭಾವಿಸಿದ್ದನೋ ಇಲ್ಲವೊ ಆತ ಆಕೆಗಿಂತ ಮೂರು ವರ್ಷಗಳಿಗೆ ದೊಡ್ಡವ. ಮದುವೆಯಾಗದಲ್ಲಿ ಗಂಡಹೆಂಡಿರಾದವರು ನಿಜಕ್ಕೂ ಗಂಡ ಹೆಂಡಿರಾಗಬೇಕಾಗಿಲ್ಲವೆಂಬ ತಿಳಿವು ಆತನಿಗಿದ್ದರೂ ಇದ್ದಿರಬಹುದು.

ಮದುವೆಗೆ ಮೊದಲು ಹದಿನೈದು ದಿನಗಳಿಗೆ ಹಿಂದೆ ನಿಶ್ಚಯ ಕಾರಣ ಕ್ಕಾಗಿ ಗಂಡಿನ ಕಡೆಯವರು ಬಂದಾಗಲೇ ಯಮುನಾ ಅತ್ತು ಕರೆದು ರಂಬಾಟ ಮಾಡಿದ್ದಳು. "ನಿನ್ನ ಮದುವೆಯಾಗೂದೈತಿ. ಅದಕ್ಕೇ ಚಿಕ್ಕಳ್ಳಿ ಯಿಂದ ಬೀಗರು ಬಂದಾರ," ಎಂದು ಪಕ್ಕದ ಮನೆಯ ಯಲ್ಲವ್ವ ಹೇಳಿದಾಗ ಯಮುನಳಿಗೆ ವಿಪರೀತ ಸಿಟ್ಟು ಬಂದಿದ್ದಿತು. "ಚಿಕ್ಕಳ್ಳಿಯವರ್ಯಾಕ ಬರು ತಾರ? ನಾ ಯಾರನ್ನೂ ಮಾಡಿಕೊಳ್ಳುವದಿಲ್ಲ," ಎಂದು ಹೇಳಿದ್ದಳು. ಯಲ್ಲವ್ವ ಮೆಲುನಗೆ ಬೀರಿ— "ಹೆಣ್ಣಾಗಿ ಹುಟ್ಟಿದ ಮ್ಯಾಲ ಮದುವೆಯಾ ಗುವದಿಲ್ಲಂದರ ನಡಿದೀತೇನೇ? ಆಗಾಕs ಬೇಕಾಗುತ್ತೈತಿ," ಎಂದು ನುಡಿ ದಾಗ ಯಮುನಾ— "ನನ್ನ ಮದುವಿ ಆಗs ಆಗ್ಯೈತಲ್ಲ ರಾಮನ ಕೂಡ," ಎಂದು ದಿಟ್ಟತನದಿಂದ ಹೇಳಿದ್ದಳು. ಆ ಮಾತು ಕೇಳಿ ಯಲ್ಲವ್ವ ಗಟ್ಟಿಯಾಗಿ ನಕ್ಕು, ಯಮುನಳ ತಾಯಿ ಗಂಗವ್ವನನ್ನು ಕೂಗಿ ಕರೆದು— "ನೋಡೇ ಗಂಗವ್ವ, ನಿನ್ನ ಮಗಳು ಚಿಕ್ಕಳ್ಳಿಯವನ್ನ ಮಾಡಿಕೊಳ್ಳುವದಿಲ್ಲ ಅಂತಾಳ. ಯಾಕೇ ಅಂತ ಕೇಳಿದರ, ರಾಮನ ಸಂಗಡ ಆಗs ಆಗ್ಯೈತೆಲ್ಲ ಮದುವಿ, ಅಂತಾಳ!" ಎಂದು ಹೇಳಿ ಬಿದ್ದುಬಿದ್ದು ನಕ್ಕಿದ್ದಳು. ಗಂಗವ್ವನೂ ನಗುತ್ತ–

"ಇದಕೇನು ತಿಳೀತ್ತೈತಿ ಬಿಡೇ. ಚೋಟುದ್ದ ಹುಡಿಗಿ. ಆಟದಾಗ ಆದ ಮಗುವಿಯೇ ಮದುವಿ ಅಂತ ತಿಳಿದಾಳ," ಎಂದು ನುಡಿದಿದ್ದಳು. ತಾಯಿಯ ಮಾತಿನಿಂದಾಗಿ ಯಮುನಳಿಗೆ ಇನ್ನೂ ಸಿಟ್ಟು ಬಂದಿದ್ದಿತು. ಆಕೆ ನಗುವುದನ್ನು ಕಂಡು ಕಣ್ಣುಗಳಲ್ಲಿ ನೀರೂರಿದ್ದಿತು. "ನಾನು ರಾಮನ್ನ ಬಿಟ್ಟು ಇನ್ಯಾರನ್ನೂ ಮಾಡಿಕೊಳ್ಳುವದಿಲ್ಲ," ಎಂದು ಹೇಳುತ್ತ ಧ್ವನಿ ತೆಗೆದು ಅತ್ತುಬಿಟ್ಟಿದ್ದಳು. ನಿಶ್ಚಯ ಕಾರಣಕ್ಕಾಗಿ ಚಿಕ್ಕಳ್ಳಿಯಿಂದ ಬಂದಿದ್ದ ಬೀಗರೂ ಆ ಹಟವನ್ನು ಕಂಡು ಹೊಟ್ಟೆ ಹಿಡಿದುಕೊಂಡು ನಕ್ಕಿದ್ದರು.

ಅದೇ ರಾತ್ರಿ ನಿಶ್ಚಯಕಾರಣ ನಡೆದುಹೋಗಿದ್ದಿತು. ಹಳ್ಳಿಯವರೆಲ್ಲ ಬೆಲ್ಲ ತಿಂದು, ಬಾಯಿ ಸಿಹಿ ಮಾಡಿಕೊಂಡಿದ್ದರು. ಕಾರಣದ ನಿಮಿತ್ತವಾಗಿ ಮನೆಯಲ್ಲಿ ಸೇವಿಗೆ ಪಾಯಸ ಮಾಡಲಾಗಿದ್ದಿತು. ದುಃಖ-ಕೋಪಗಳಿಂದಾಗಿ ಯಮುನಳಿಗೆ ಪಾಯಸ ರುಚಿಸಿರಲಿಲ್ಲ. ಮಾರನೆಯ ದಿನ ಬೆಳಗ್ಗೆ ಬುತ್ತಿ ಕಟ್ಟಿಕೊಂಡು ದನ ಬಿಟ್ಟುಕೊಂಡು ಗುಡ್ಡಕ್ಕೆ ಹೋದ ಬಳಿಕ ನಡೆದ ವಿಷಯವನ್ನೆಲ್ಲ ರಾಮುನಿಗೆ ವರದಿ ಮಾಡಿ ಮತ್ತೆ ಅತ್ತುಬಿಟ್ಟಿದ್ದಳು.

"ನನ್ನ ಚಿಕ್ಕಳ್ಳಿಯವಗ ಮದುವಿ ಮಾಡತಾರಂತೆ ನೋಡೋ ರಾಮಾ."

ರಾಮುನಿಗೂ ಆ ವಿಷಯ ಗೊತ್ತಾಗಿದ್ದಿತು. ನಿಶ್ಚಯಕಾರಣದ ಬೆಲ್ಲವನ್ನು ಆತನೂ ತಿಂದಿದ್ದನಲ್ಲ?

"ನನಗೂ ನಿನಗೂ ಆಗಲೆ ಮದುವಿ ಆಗಿಲ್ಲೇನು? ನಾವು ಗಂಡ ಹೆಂಡತಿ ಅಲ್ಲೇನು? ಮತ್ತ ಹ್ಯಾಂಗ ನನ್ನ ಬ್ಯಾರೆಯವಗ ಮಾಡಿಕೊಡುತಾರ?" ಎಂದು ಅಳುತ್ತಳುತ್ತ ಪ್ರಶ್ನಿಸಿದ್ದಳು ಯಮುನಾ.

ರಾಮು ಆಕೆಯನ್ನು ಸಂತವಿಸಿ—"ಅದು ಹ್ಯಾಂಗ ಮಾಡಿಕೊಡುತಾರೇಳು. ನನ್ನ ಹೆಂಡತೀನ ಬ್ಯಾರೆಯವರಿಗೆ ಕೊಡಾಕ ಬಿಡತೇನೇನು ನಾ? ನೀ ಏನೂ ಚಿಂತಿ ಮಾಡಬ್ಯಾಡ. ಸುಮ್ಮಗಿರು," ಎಂದು ಹೇಳಿದ್ದ. ಆ ಮಗುವಿನ ದುಃಖವನ್ನು ದೂರಗೊಳಿಸಲೆಂದೇ ಆತ ಹಾಗೆ ಹೇಳಿದ್ದುದು. ಮದುವೆಯನ್ನು ತಡೆಯುವ ಶಕ್ತಿ ತನ್ನಲ್ಲಿಲ್ಲ, ಇನ್ನು ಹದಿನೈದು ದಿನಗಳಲ್ಲಿ ಯಮುನಾ ಚಿಕ್ಕಳ್ಳಿಯ ಭೀಮನ ಹೆಂಡತಿಯಾಗುವಳು—ಎಂಬುದೆಲ್ಲ ಆತನಿಗೆ ಗೊತ್ತಿದ್ದಿತು. ತಾವು ಆಡುತ್ತಿದ್ದ ಆಟವನ್ನೇ ನಿಜವಾದ ಮದುವೆಯೆಂದು

ಭಾವಿಸಿದ್ದ ಆ ಬಾಲಕಿಯ ಅಜ್ಞಾನದ ಬಗೆಗೆ ಆತನಿಗೆ ಒಳಗೊಳಗೇ ನಗೆಯೂ ಬರುತ್ತಿದ್ದಿತು.

"ನನ್ನ ಹೆಂಡತೀನ ಬ್ಯಾರೆಯವರಿಗೆ ಕೊಡಾಕ ಬಿಡತೇನೇನು ನಾ?" ಎಂದು ರಾಮ ಎದೆತಟ್ಟಿಕೊಂಡುಹೇಳಿದ್ದರೂ ಮದುವೆ ನಡೆದುಹೋಗಿದ್ದಿತು. ಮದುವೆಯ ಮಂಟಪದಲ್ಲಿ ಯಮುನಾ ಆಗಾಗ ಅಳುತ್ತಲೇ ಇದ್ದಳು. ಮದುವೆ ಮುಗಿದ ತರುವಾಯ ತಂದೆತಾಯಿಗಳೊಡನೆ ತಮ್ಮ ಹಳ್ಳಿಗೆ ಹಿಂದಿರುಗಿ ಬರುವಾಗಲೂ ಅವಳ ಅಳು ನಿಂತಿರಲಿಲ್ಲ. "ನಿನಗೇನು ಧಾಡಿಯಾಯಿತೇ ಅಳೂದಕ್ಕ? ಯಾರು ಸತ್ತರು?" ಎಂದು ಹೊಳೆಪ್ಪ ಮಗಳಿಗೆ ಸಿಟ್ಟುಮಾಡಿ ಗದರಿಸಿದ್ದ. "ಮದುವಿ ಮಾಡಿಕೊಂಡ ಹೆಣ್ಣು ಹೀಂಗೆಲಾ ಕಣ್ಣೀರು ಹಾಕಬಾರದವ್ವ. ಚಲೋದಲ್ಲ," ಎಂದು ತಾಯಿ ಬುದ್ಧಿ ಹೇಳಿದ್ದಳು. ಯಾವುದರಿಂದಲೂ ಯಮುನಳ ಅಳು ನಿಂತಿರಲಿಲ್ಲ.

ಮಾರನೆಯ ದಿನ ಗುಡ್ಡದಲ್ಲಿ ರಾಮುನ ಭೆಟ್ಟಿಯಾದಾಗ ಆತನನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತುಬಿಟ್ಟಿದ್ದಳು, ಯಮುನಾ.

"ನೀ ಆಗಗೊಡುವದಿಲ್ಲಂತ ಹೇಳಿದರೂ ಆಗಿ ಹೋಯ್ತಲ್ಲ ರಾಮಾ? ನೀ ಯಾಕ ಸುಮ್ಮನಿದ್ದಿ?"

"ನಾಯೇನ ಮಾಡಲಿ ಯಮುನೀ?"

"ನೀ ಗಂಡ ಆಗಿ ನಿನ್ನ ಹೆಂಡತೀನ ಬ್ಯಾರೆಯವರಿಗೆ ಮಾಡಿಕೊಡುವಾಗ ಸುಮ್ಮನಿರಬೇಕೇನು?"

"ನಿನಗ ತಿಳಿಯುವದಿಲ್ಲ ಯಮುನೀ. ನಾವು ಗಂಡಹೆಂಡರಾದದ್ದು ಆಟದಾಗ. ನಮ್ಮ ಮದುವಿ ಏನೂ ನಡದಿಲ್ಲ."

ಯಮುನಳಿಗೆ ಮತ್ತೆ ದುಃಖವುಕ್ಕೇರಿ ಬಂದಿದ್ದಿತು. ಅದರೊಡನೆ ರಾಮುನ ಬಗೆಗೆ ಕೋಪವೂ ಬಂದಿದ್ದಿತು. ಆತನನ್ನು ದೂರ ತಳ್ಳುತ್ತ— "ಆಟ ಅಂತ ಆಟ. ಮದುವಿ ಆಗೇ ಇಲ್ಲಂತೆ. ನೀ ಇಂಥಾವ ಅಂತ ಮೊದಲೇ ಗೊತ್ತಿದ್ದರ ನಿನ್ನ ಎಂದೆಂದೂ ಮಾಡಿಕೊಳ್ಳುತಿರಲಿಲ್ಲ ನಾ. ನಡೀ ಹೋಗು ನನ್ನ ಸಂಗಡ ಮಾತಾಡಬ್ಯಾಡ. ಇಂದಿನಿಂದ ನಿನ್ನ ಪಾಲಾ ಫೂ ಬಿಟ್ಟೇನಿ," ಎಂದು ನುಡಿದು ಆತನಿಂದ ದೂರ ಹೋಗಿದ್ದಳು.

ಮುಂದೆ ಎಂಟು ಹತ್ತು ದಿನ ಆಕೆ ಅವನೊಂದಿಗೆ ಮಾತನಾಡಿರಲಿಲ್ಲ.

ರಾಮನೇ ಮಾತನಾಡಿಸಲು ಬಂದರೆ ಮುಖ ತಿರುವಿಕೊಂಡು ಹೊರಟು ಹೋಗುತ್ತಿದ್ದಳು. ದನಗಳನ್ನು ಮೇಯಲು ಬಿಟ್ಟು ಗಿಡದ ನೆರಳಲ್ಲಿ ಒಬ್ಬಳೇ ಕುಳಿತುಕೊಂಡು ಹರಳುಗಳ ಆಟವಾಡುವಳು. ನಡುಹಗಲಿನ ವೇಳೆಯಲ್ಲಿ ಬುತ್ತಿ ಬಿಚ್ಚಿ ಊಟ ಮಾಡುವಾಗಲೂ ರಾಮನನ್ನು ಕರೆಯುತ್ತಿರಲಿಲ್ಲ. ದನ ಕಾಯುವ ಇತರ ಹುಡುಗ ಹುಡುಗಿಯರೊಂದಿಗೆ ನಗುತ್ತ ಮಾತನಾಡಿದರೂ ರಾಮನನ್ನು ದಿಟ್ಟಿಸಿಯೂ ನೋಡುತ್ತಿರಲಿಲ್ಲ.

ಕೆಲವು ದಿನ ಹೀಗೆ ಕಳೆದ ಬಳಿಕ, ಒಂದು ದಿನ ಗುಡ್ಡದಲ್ಲಿ ಚಿಕ್ಕದೊಂದು ಹಾವು ಕಾಣಿಸಿಕೊಂಡಾಗ ಯಮುನಾ ಹೆದರಿ ಆಕ್ರೋಶ ಮಾಡುವದನ್ನು ಕೇಳಿ ರಾಮ ಧಾವಿಸಿಬಂದು ದೊಡ್ಡದೊಂದು ಕಲ್ಲನ್ನೆತ್ತಿ ಆ ಹಾವನ್ನು ಕೊಂದು ಹಾಕಿದ. ಹೆದರಿಕೆಯಿಂದ ನಡುಗುತ್ತಿದ್ದ ಯಮುನಾ ಆತನ ಬಳಿ ಬಂದು ಆತನನ್ನು ತಬ್ಬಿಕೊಂಡು ನಿಂತಳು ಕೆಲವು ದಿನ ತಡೆದು ನಿಂತ ಮಾತು ಮತ್ತೆ ಪ್ರಾರಂಭವಾಯಿತು.

"ಈ ಕೆಟ್ಟ ಹಾವು ನನ್ನ ಕಡಿದೇ ಬಿಡುತ್ತೈತಂತ ಅಂಜಿಕೆಯಾಗಿತ್ತು. ನೀ ಎಲ್ಲಿದ್ದಿಯೋ ರಾಮು, ಎಷ್ಟು ಲಗೂ ಬಂದಿ?"

"ನೀ ಒದರುವದನ್ನು ಕೇಳಿ ಓಡಿ ಬಂದಿನಿ. ಇಕಾ, ಈ ಹಣ್ಣು ತಿನ್ನು," ಎಂದು ನುಡಿದು ರಾಮ ಬೋರೆಯ ಹಣ್ಣುಗಳನ್ನು ಆಕೆಗೆ ಕೊಟ್ಟ.

"ಇನ್ನುಮ್ಯಾಲ ನನ್ನ ಬಿಟ್ಟು ದೂರ ಹೋಗಬ್ಯಾಡ ರಾಮು. ನನ್ನ ಹತ್ತರಲೇ ಇರು." ಎಂದಳು ಯಮುನಾ.

"ಮೊದಲಿಂದಲೂ ಇಬ್ಬರೂ ಕೂಡೇ ಇರುತ್ತಿದ್ದೆವಲ್ಲ. ನೀನೇ ನನ್ನ ಪಾಲಾ ಪೂ ಬಿಟ್ಟಿ."

"ಇನ್ನುಮ್ಯಾಲ ಹಾಂಗ ಮಾಡುವದಿಲ್ಲ ರಾಮು. ನನ್ನ ಬಿಟ್ಟು ದೂರ ಹೋಗಬ್ಯಾಡ. ಹಾವು ಚೇಳು ಅಂದರೆ ನನಗ ಬಹಾಳ ಅಂಜಿಕಿ."

"ಅವೇನು ಮಾಡುತಾವೇಳು. ಒಂದು ಕಲ್ಲು ಒಗೆದರ ಕಿಸಿದು ಬೀಳತಾವ."

"ಒಗೆಯುವವರ್ಯಾರು? ನೀನೇ. ರಾಮು, ನೀ ಹೀಂಗss ನನ್ನ ಸಂಗಡಲೇ ಇರಬೇಕಪ್ಪ."

ಗಿಡದ ಬೊಡ್ಡಿಗೆ ದೇಹಗಳನ್ನೊರಗಿಸಿ ಇಬ್ಬರೂ ಕುಳಿತುಕೊಂಡರು.

" ಸಂಗಡಲೇ ಇರಬೇಕಂದರ ಹೆಂಗಾದೀತು ಯಮುನೀ ? ಇಂದಿಲ್ಲ ನಾಳೆ ನೀ ಗಂಡನ ಮನಿಗೆ ಹೋಗುವಾಕಿ. ಆಗ ನಾನೂ ನಿನ್ನ ಸಂಗಡ ಬರೂದಕ್ಕಾಗುತ್ತೈತೇನೇ ? "

" ಗಂಡನ ಮನಿಗೆ ? "

" ಹೌದು ಮತ್ತ ! ಬಹಳ ಅಂದರ ಇನ್ನೆರಡು ಮೂರು ವರುಷ ಇಲ್ಲಿ ಇದ್ದೀ. ಆಮ್ಯಾಲ ಹೋಗಾಕs ಬೇಕಲ್ಲ? "

" ನಾಯೇನೂ ಹೋಗುವದಿಲ್ಲ," ಎಂದು ನುಡಿಯುತ್ತಾ ಕೆನ್ನೆಗಳನ್ನು ಬ್ಬಿಸಿದಳಾಕೆ.

" ಹೋಗುವದಿಲ್ಲಂದರೂ ಕೇಳುವವರಾರೇ ಹುಚ್ಚೀ. ಹೋಗಾಕs ಬೇಕಾಗುತ್ತೈತಿ. ಗಂಡ ಬಂದು ಕರಕೊಂಡೇ ಹೋಗುತಾನ. "

" ಅಂದರ ? ಚಿಕ್ಕಳ್ಳಿಯವಗ ನನ್ನ ಮಾಡಿಕೊಟ್ಟದ್ದು ಖರೆ ಏನು ? " ಎಂದು ತಬ್ಬಿಬ್ಬಾಗಿ ಕೇಳಿದಳು ಯಮುನಾ.

" ಖರೆ. ಇನ್ನು ಮ್ಯಾಲ ಅವನೇ ನಿನ್ನ ಗಂಡ. ನೀ ಅವನ ಹೆಂಡತಿ. "

" ಮತ್ತ ನೀ ? "

" ನಾ ಏನೂ ಇಲ್ಲ. ನನಗೂ ನಿನಗೂ ಏನೂ ಸಂಬಂಧ ಇಲ್ಲ. "

" ನಾ ನಿನ್ನ ಬಿಟ್ಟ ಹೋಗುವದಿಲ್ಲ ಎಲ್ಲಿಗೂ, " ಎಂದು ನುಡಿಯುತ್ತ ಯಮುನಾ ಬಿಕ್ಕತೊಡಗಿದಳು.

## ತೆರೆ: ನಾಲ್ಕು.

ಎರಡು ವರುಷ ಕಳೆದಿದ್ದುವು.

ಯಮುನಾ ಹನ್ನೊಂದು ವರುಷದವಳಾಗಿದ್ದಳು.

ರಾಮು ಹದಿನಾಲ್ಕು ವರುಷದವನಾಗಿದ್ದ.

ಎರಡು ವರುಷಗಳ ಅವಧಿ ಯಮುನಳಲ್ಲಿ ಎಷ್ಟೋ ಬದಲಾವಣೆಗಳ ನ್ನುಂಟು ಮಾಡಿದ್ದಿತು. ಪ್ರಪಂಚದ ಬಗೆಗೆ, ಪ್ರಾಪಂಚಿಕ ವಿಷಯಗಳ ಬಗೆಗೆ

ಅವಳಲ್ಲಿ ನಿಧಾನವಾಗಿ ತಿಳಿವು ಮೂಡುತ್ತಿದ್ದಿತು. ಚಿಕ್ಕಳ್ಳಿಯ ಭೀಮಣ್ಣ ನೊಂದಿಗೆ ತನ್ನ ಮದುವೆಯಾದುದು ಸತ್ಯಸಂಗತಿ, ಇನ್ನು ಕೆಲವೇ ವರುಷಗಳ ತರುವಾಯ ತಾನು ಅವನ ಹೆಂಡತಿಯಾಗಿ ಬಾಳುವೆ ನಡೆಸಬೇಕಾಗುವುದು ಎಂಬುದೆಲ್ಲ ಆಕೆಗೆ ಗೊತ್ತಾಗಿದ್ದಿತು. ಚಿಕ್ಕಳ್ಳಿಗೆ ಹೋಗುವ ಇಷ್ಟ ಆಕೆಗೆ ಕೊಂಚವೂ ಇರಲಿಲ್ಲ. "ಇದನ್ನು ಏನಾರೆ ಮಾಡಿ ತಪ್ಪಿಸು ದೇವರೇ! ಎಂದು ಆಕೆ ದಿನವೂ ಭರಮದೇವರನ್ನು ಬೇಡಿಕೊಳ್ಳುತ್ತಿದ್ದಳು.

ಈಚೆಗೆ ಕೆಲ ದಿನಗಳಿಂದ ರಾಮು ತೋಟದ ಕೆಲಸಕ್ಕೆ ತೊಡಗಿದ್ದ. ಆತ ದೊಡ್ಡವನಾದುದನ್ನು ಕಂಡು ಗೌಡರು ದನಕಾಯುವ ಕೆಲಸದಿಂದ ಆತನನ್ನು ತೋಟದ ಕೆಲಸಕ್ಕೆ ವರ್ಗಾಯಿಸಿ ದನಗಳಿಗಾಗಿ ಇನ್ನೊಬ್ಬ ಚಿಕ್ಕ ಹುಡುಗ ನನ್ನು ನಿಯಮಿಸಿದ್ದರು.

ಎಷ್ಟೋ ವರುಷಗಳ ವರೆಗೆ ದಿನವೂ ರಾಮುನೊಂದಿಗೆ ಗುಡ್ಡದಲ್ಲಿ ಅಲೆ ದವಳು ಯಮುನಾ. ಆತ ಗುಡ್ಡಕ್ಕೆ ಬರದೆ ತೋಟದಲ್ಲುಳಿದ ದಿನ ಆತನಿಗೆ ಬದಲಾಗಿ ಬಂದ ಹುಡುಗನನ್ನು ಕಂಡು— "ಯಾಕೋ, ರಾಮುನ್ಯಾಕೆ ಬರ ಲಿಲ್ಲ?" ಎಂದು ಕೇಳಿದಳು. "ಅವನ್ನ ತೋಟದ ಕೆಲಸಕ್ಕ ಹಾಕಿದಾರ," ಎಂದು ಆ ಹುಡುಗ ಹೇಳಿದಾಗ— "ಹಂಗಾದರ ಇನ್ನುಮ್ಯಾಲ ಅವ ದನ ಕಾಯೂದಕ್ಕ ಬರುವದಿಲ್ಲೇನು?" ಎಂದು ಕೇಳಿದಳಾಕೆ. "ಇನ್ನು ಮ್ಯಾಲ ನಾನೇ ಬರುತೀನಿ," ಎಂದು ನುಡಿದು ಆ ಹುಡುಗ ಸುಮ್ಮನಾದ. ಆ ದಿನ ವೆಲ್ಲ ಯಮುನಳಿಗೆ ಹೇಗೆ ಹೇಗೋ ಆಯಿತು. ಏನೋ ಕಳವಳ ಎದೆಯಲ್ಲಿ. ನಡುಹಗಲಿನ ಊಟವೂ ಅಂದು ಅವಳಿಗೆ ರುಚಿಸಲಿಲ್ಲ. ಆ ಮೇಲೆ ಎಂಟು ಹತ್ತು ದಿನಗಳ ವರೆಗೂ ಹಾಗೆಯೇ ಆಗುತ್ತಿತ್ತು. ಸಂಜೆಗತ್ತಲು ಪಸರಿಸುವ ವೇಳೆಗೆ ದನಗಳನ್ನಟ್ಟಿಕೊಂಡು ಗುಡ್ಡದಿಂದ ಹಿಂದಿರುಗಿ ಬರುವಾಗ ಹಳ್ಳದ ಹತ್ತಿರವಿದ್ದ ಗೌಡರ ತೋಟದಲ್ಲಿ ದುಡಿಯುವ ರಾಮುನನ್ನು ದೂರದಿಂದ ನೋಡಿ ಸಮಾಧಾನ ಮಾಡಿಕೊಳ್ಳಲು ಪ್ರಯತ್ನಿಸುವಳು. ಆತನ ಹೆಸರೆತ್ತಿ ಕೂಗಿ ಮಾತನಾಡಿಸಲು ಧೈರ್ಯವಾಗುತ್ತಿರಲಿಲ್ಲ.

ದಿನ ಕಳೆದ ಹಾಗೆಲ್ಲ, ಆತನನ್ನು ಬಿಟ್ಟು ಒಂಟಿಯಾಗಿ ದನ ಕಾಯುವು ದೇನೋ ಅಭ್ಯಾಸವಾಯಿತು ಅವಳಿಗೆ. ಆದರೂ ಆಗಾಗ ಅವನ ಜ್ಞಾಪಕ ಬಂದರೆ ಕರುಳು ಕಲಮಲಗೊಂಡಂತಾಗುವುದು. ತನಗೆ ಹಣ್ಣು ಹಂದು

ಕೊಡಲೆಂದು ಆತ ಏರಿದ ಗಿಡಗಳನ್ನು ದಿಟ್ಟಿಸುತ್ತ ಹಾಗೆಯೆ ನಿಂತುಬಿಡುವಳು. ಆತನೂ ತಾನೂ ಮೈಗೆ ಮೈ ಹಚ್ಚಿ ಕುಳಿತಿದ್ದ ಗಿಡದ ಬೊಡ್ಡೆಗೆ ಆತು ಕುಳಿತಿದ್ದವಳು ಹಾಗೆಯೆ ಎಷ್ಟೋ ಹೊತ್ತು ಕುಳಿತುಬಿಡುವಳು. ದನ ಕಾಯುವ ಇತರ ಹುಡುಗರು ಬಂದು ಕೂಗಿದಾಗಲೇ ಎಚ್ಚರವಾಗುವುದು.

ಈ ಮಧ್ಯೆ ಆಕೆಯ ಗಂಡ ಒಂದೆರಡು ಸಲ ಬಂದು ಹೋಗಿದ್ದ. ಆತನಿಗಾಗ ಇಪ್ಪತ್ತೈದು ವರ್ಷ ವಯಸ್ಸು. ಬಣ್ಣ ಕಪ್ಪು, ಸಿಡುಬಿನ ಕಲೆಗಳಿಂದ ಹುಳುಕಾದ ಮುಖ, ಮೊಂಡ ಮೂಗು, ದಪ್ಪಗಿನ ತುಟಿ, ಕೆಂಪಡರಿದ ಕಣ್ಣು, ಮೊದಲನೆಯ ಸಲ ಆತನನ್ನು ಕಂಡಾಗಲೇ ಯಮುನಾಗೆ ಭೀತಿಯಾಗಿದ್ದಿತು. ಆತ ತನ್ನ ಗಂಡನೆಂದು ಒಪ್ಪಿಕೊಳ್ಳಲು ಮನಸ್ಸು ಸಿದ್ಧವಾಗಿರಲಿಲ್ಲ.

ಆತ ಬಂದಾಗಲೆಲ್ಲ ತನ್ನ ತಾಯಿಗೂ ಅವನಿಗೂ ವಿಪರೀತ ವಾಗ್ವಾದವಾಗುತಿದ್ದುದನ್ನಾಕೆ ಕಂಡಿದ್ದಳು. ವಾದಕ್ಕೆ ಕಾರಣವೇನೆಂಬುದೂ ಅಲ್ಪಸ್ವಲ್ಪ ತಿಳಿದಿದ್ದಿತು. ಮದುವೆಯ ಕಾಲಕ್ಕೆ ಕೊಡಬೇಕಾಗಿದ್ದ 'ತೆರ'ದ ಹಣದಲ್ಲಿ ಅರ್ಧ ಭಾಗವನ್ನು ಆತನಿನ್ನೂ ತಂದುಕೊಟ್ಟಿರಲಿಲ್ಲ. ಅದೇ ಜಗಳಕ್ಕೆ ಮೂಲ ಕಾರಣವಾಗಿದ್ದಿತು.

"ತೆರದ ರೂಪಾಯಿ ಕೊಡಲಿಲ್ಲ. ಮದುವೀ ಕಾಲಕ್ಕ ನನಗೊಂದ್ರು ಸೀರೀನೂ ಕೊಡಲಿಲ್ಲ. ಇಂಥಾ ಭಿಕಾರಿಗಳಿಗೆ ಮಗಳನ್ನು ಕೊಡಬಾರದಾಗಿತ್ತು," ಎಂದು ಗಂಡನೊಂದಿಗೆ ಆಗಾಗ ನುಡಿಯುವಳು ಗಂಗವ್ವ.

ಹೊಳೆಪ್ಪ ಶಾಂತ ಸ್ವಭಾವದವ. ಆತ ಅನಾವಶ್ಯಕವಾಗಿ ಎಂದೂ ಯಾರ ಮೇಲೂ ಕೋಪಿಸಿಕೊಳ್ಳುತ್ತಿರಲಿಲ್ಲ. ಯಾರ ಬಗೆಗೂ ಕೆಟ್ಟ ಮಾತು ಆಡುತ್ತಿರಲಿಲ್ಲ. ಹೆಂಡತಿಯನ್ನು ಸಮಾಧಾನಗೊಳಿಸಲು ಪರಿಪರಿಯಾಗಿ ಪ್ರಯತ್ನಿಸುತ್ತಿದ್ದ. "ಭಿಕಾರಿ ಪಕಾರಿ ಅಂತ ಅನ್ನಬಾರದು ಗಂಗೀ. ನಾವೇನು ಸಾವುಕಾರರೇನು? ಪಾಪ, ಅವರಿಗೂ ನೂರಾಯೆಂಟು ಅಡಚಣಿ ಇದ್ದಾವು. ರೂಪಾಯಿ ಹುಟ್ಟುತಿರಲಿಕ್ಕಿಲ್ಲ. ಎಲ್ಲೆಲ್ಲೋ ಸಾಲ ಮಾಡಿ ಮದುವಿ ಒಂದು ಸಾಗಿಸಿದರು. ಅವರಿಗೇನು ಮನಿಯು ಹೊಲಾ ಆದರೂ ಐತೇನು? ಎಲ್ಲಿಂದ ತಂದಾರು ರೂಪಾಯಿ?"

"ಮದುವಿ ಮಾಡಿಕೊಳ್ಳಾಕ ಬೇಕು. ಹೆಣ್ಣು ಒಯ್ಯಾಕ ಬೇಕು. ತೆರಾ ಕೊಡಾಕ ಬ್ಯಾಡಂದರ ಹೆಂಗಾದೀತು? ತೆರದ ರೂಪಾಯಿ ಇನ್ನೂ

ಕೊಟ್ಟಿಲ್ಲಂದರ ಮಂದಿ ನಗಲಿಕ್ಕಿಲ್ಲೇನು ? ನನಗೊಂದು ಸೀರಿ ಕೂಡಾ ಮಾಡಲಿಲ್ಲ ಅವರು. ಮಂದಿಯೊಳಗ ಮಾರೀ ಎತ್ತಿ ತಿರುಗಾಕಾಗ ಲಿಲ್ಲ ನನಗ."

"ತಾಳಬೇಕು ಗಂಗೀ, ತಾಳಬೇಕು. ನಮ್ಮ ಹಾಂಗs ಅವರಿಗೂ ಕಷ್ಟ ದುಕ್ಕ ಇರತಾವ. ಅದರಾಗ ಭೀಮಣ್ಣಾ ಪರದೇಶಿ. ಅಪ್ಪ ಇಲ್ಲ, ಅವ್ವ ಇಲ್ಲ. ಏನೇನೋ ಮಾಡಿ ಒಂದು ಮದುವಿ ಮಾಡಿಕೊಂಡ. ನಮ್ಮನ್ನೇ ಅಪ್ಪ ಅವ್ವ ಅಂತ ತಿಳಿದಾನ. ನಮಗೂ ಯಮುನೀನ್ನ ಬಿಟ್ಟರ ಬ್ಯಾರೆ ಯಾರಿದಾರ? ಭೀಮಣ್ಣನೇ ಅಳಿಯ, ಅವನೇ ಮಗ ಅಂತ ತಿಳಿದು ಸಮಾಧಾನದಿಂದ ಇರಬೇಕು. ರೂಪಾಯಿಗಾಗಿ ಅವನ್ನ ಕಾಡಿಸಬ್ಯಾಡ. ತಾನಾಗಿ ತಂದು ಕೊಟ್ಟರ ತಕ್ಕೊ. ಇಲ್ಲದಿದ್ದರ ಸುಮ್ಮಗಿರು. ಸಂಬಂಧ ಕೆಡಿಸಬ್ಯಾಡ."

ಈ ರೀತಿಯಾಗಿ ಹೊಳೆಪ್ಪ ಬುದ್ಧಿವಾದ ಹೇಳಿದರೂ ಅಭಿಮಾನಿಯೂ ಹಟದ ಸ್ವಭಾವದವಳೂ ಆದ ಗಂಗವ್ವನಿಗೆ ಅದಾವುದೂ ಹಿಡಿಸಲಿಲ್ಲ. ಆ ವರ್ಷ ಅಳಿಯ ಕೊಬ್ಬರಿ ತೆಗೆದುಕೊಂಡು ಬಂದಾಗ ಆಕೆ ಅದನ್ನೂ ಸ್ವೀಕರಿಸಲಿಲ್ಲ. "ರೂಪಾಯಿ ಎಲ್ಲಿದಾವ? ಬರಿಗೈಯಾಗ ಯಾಕ ಬಂದಿ? ನಿನಗೇನು ನಾಚಿಕೆ ಐತ್ಯೋ ಇಲ್ಲೋ? ರೂಪಾಯಿ ತಗೊಂಡು ಬಂದು ಈ ಮನ್ಯಾಗ ಕಾಲು ಹಾಕು. ಇಲ್ಲದಿದ್ದರ ನಿನಗೂ ನಮಗೂ ಸಂಬಂಧ ಇಲ್ಲ ನನ್ನ ಮಗಳನ್ನ ನಿನಗ ಕೊಟ್ಟೇ ಇಲ್ಲಂತ ತಿಳಕೋತೀನಿ" ಎಂದು ಫಡಫಡ ಆಡಿಬಿಟ್ಟಳು. ಭೀಮಣ್ಣಾ ಅಭಿಮಾನಿ ಸ್ವಭಾವದ ರೈತ ಯುವಕ. ಅತ್ತೆಯಿಂದ ಇಂಥ ಅವಹೇಳಣಕಾರಕ ಮಾತುಗಳನ್ನು ಕೇಳಿ ಸಹಿಸಿಕೊಳ್ಳಲಾಗಲಿಲ್ಲ. "ಏನು ಜಗತ್ತಿನ್ಯಾಗ ಬ್ಯಾರೆ ಹೆಣ್ಣುಗಳೇ ಇಲ್ಲೇನು ನಿನ್ನ ಮಗಳನ್ನು ಬಿಟ್ಟರ? ನೀ ಅನ್ನುವ ಹಾಂಗೇ ಆಗಲಿ.. ಇಂದಿನಿಂದ ನಿಮಗೂ ನನಗೂ ಏನೂ ಸಂಬಂಧವಿಲ್ಲ" ಎಂದು ಉತ್ತರವಿತ್ತು ಅಲ್ಲಿ ನಿಲ್ಲದೆ ಹೊರಟು ಹೋದ.

ಕೂಲಿ ಕೆಲಸಕ್ಕೆ ಹೋಗಿದ್ದ ಹೊಳೆಪ್ಪ ಸಾಯಂಕಾಲ ಮನೆಗೆ ಬಂದಾಗ ಆತನಿಗೆ ಅಳಿಯ ಬಂದುಹೋದ ವಿಷಯ ತಿಳಿಯಿತು. "ಏನಾಯಿತು? ಭೀಮಣ್ಣಾ ಯಾಕ ನಿಲ್ಲಲಿಲ್ಲ.?" ಎಂದು ಕೇಳಿದಾಗ ಗಂಗವ್ವ—"ಅಯ್ಯ!

ಏನು ಸೊಕ್ಕು ಅಂತೀ ಆ ಮೂಳಗ! ನನ್ನ ಎದುರಿಗೇ ಉದ್ದುದ್ದ ಮಾತಾಡಿ ಹೊರಟು ಹೋದ. ಹೋದರೆ ಹೋಗಲಿ ಬಿಡು." ಎಂದು ಹೇಳಿ ಮೂಗು ಮುರಿದಳು. "ಆದದ್ದಾದರೂ ಏನು ? ನೀನು ಏನಂದೆ ಅವಗ ?" ಎಂದು ಆತ ಕೇಳಿದ. "ನಾ ಏನ ಅನ್ನಲಿ ಮಾರಾಯಾ ! ರೂಪಾಯಿ ತರಲಿಲ್ಲೇನಪಾ ಈಗಲೂ ಅಂದದ್ದs ತಡ, ನಾಗರಹಾವಿನ ಹಂಗ ಸಿಟ್ಟಿಗೆದ್ದು ಸಿಕ್ಕಸಿಕ್ಕಂಗ ಒದರಾಡಿ ಹೊರಟು ಹೋದ" ಎಂದಳು ಗಂಗವ್ವ. ಹೊಳೆಪ್ಪ ಹೆಚ್ಚು ಮಾತು ಬೆಳೆಸಲಿಲ್ಲ. ಹಣೆಗೆ ಕೈಯಿಟ್ಟುಕೊಂಡು ಕುಳಿತುಕೊಂಡ.

ಅತ್ತೆಯಿಂದ ಅವಮಾನಿತನಾಗಿ ಹೋದ ಭೀಮಣ್ಣ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಮತ್ತೊಂದು ಹೆಣ್ಣನ್ನು 'ಉಡಿಕೆ' ಮಾಡಿಕೊಂಡು ಅತ್ತೆಯ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದ. ಆತನ ಮನೆಯಲ್ಲಿ ಅಡುಗೆ ಮಾಡುತ್ತ ಅಲ್ಲಿಯೆ ಇದ್ದ ದೂರದ ಸಂಬಂಧಿಕಳಾದ ನಾಗವ್ವ ಆತನ ನಿರ್ಧಾರಕ್ಕೆ ಸೈ ಎಂದಳು. "ನಿನಗ ಹಾಂಗೆಲ್ಲ ಅಂದಳೇನು ಆ ಹೊಯ್ಮಾಲಿ ಗಂಗಿ! ಆಕೀಗೆ, ನಿನಗಿಂತ ರೊಕ್ಕನೇ ಹೆಚ್ಚೆಂದಾಯ್ತು. ಬಿಡು ಬಿಡು, ಹೆಣ್ಣಿಗೇನು ಕಡಿಮಿ ? ಆ ಮಲ್ಲಪ್ಪಗೋಳ ನಿಂಗಿ ಗಂಡನ್ನ ಬಿಟ್ಟು ಕುಂತಾಳ ಮನ್ಯಾಗ. ಮನ್ನೆ ಮನ್ನೆ ಸೋಡಚೀಟೀನೂ ಸಿಕ್ಕೈತಂತೆ. ನಾ ಒಂದು ಮಾತು ಕೇಳಿದರ ಅವರವ್ವ ಹೂಂ ಅಂದಾಳು. ನಿಂಗೀನ್ನ ಆಗುತಿಯೇನು ?" ಎಂದು ಕೇಳಿದಳು.

ಅತ್ತೆಯ ಬಗೆಗೆ ಕೋಪದಿಂದ ಉರಿಯುತ್ತಿದ್ದ ಭೀಮಣ್ಣ ಸುಲಭವಾಗಿಯೆ 'ಹೂಂ' ಎಂದುಬಿಟ್ಟ. ಗಂಗವ್ವನ ಬಗೆಗೆ ಆತನಲ್ಲಿ ಭೀಕರ ತಿರಸ್ಕಾರ ಹುಟ್ಟಿದ್ದಿತು. ಇನ್ನೆಂದೂ ಅವಳ ಮುಖ ನೋಡುವುದಿಲ್ಲವಾಗಿ ಶಪಥ ತೊಟ್ಟು ಆತ ಚಿಕ್ಕಳ್ಳಿಗೆ ಬಂದಿದ್ದ. ಸಾಧ್ಯವಾದಷ್ಟು ಬೇಗ ಇನ್ನೊಂದು ಹೆಣ್ಣನ್ನು ಮನೆಗೆ ತಂದು ಅವಳೊಡನೆ ಸಂಸಾರ ಹೂಡಿ ಅತ್ತೆಗೆ ಬುದ್ಧಿಕಲಿಸಬೇಕೆಂದು ಆತ ಲೆಕ್ಕಹಾಕುತ್ತಿದ್ದ. ಪ್ರಾಯಕ್ಕೆ ಬಂದ ದೇಹ ಹೆಣ್ಣಿನ ಸಹವಾಸವನ್ನೂ ಬಯಸುತ್ತಿತ್ತು. ನಿಂಗಿ ಹದಿನೇಳು ವರ್ಷದ ಹೆಣ್ಣು. ಮೈಕೈ ತುಂಬಿಕೊಂಡು ಆಕರ್ಷಕವಾಗಿ ಬೆಳೆದು ನಿಂತಿದ್ದಳು. ಯಾವುದೋ ಒಂದು ಕ್ಷುಲ್ಲಕ ಕಾರಣದಿಂದಾಗಿ ಆಕೆಯ ತಂದೆ ತಾಯಿಗಳಿಗೂ ಗಂಡನಿಗೂ ವ್ಯಾಜ್ಯ ಬಂದುದರಿಂದ ಮದುವೆ ರದ್ದುಗೊಳಿಸಲ್ಪಟ್ಟು ಬಿಡುಗಡೆಯ ಚೀಟಿಯೂ ದೊರೆ

ತಿದ್ದಿತು. ಆಕೆಯ ತಂದೆತಾಯಿಗಳೂ ಇನ್ನೊಬ್ಬ ಅಳಿಯನನ್ನು ಹುಡುಕುತ್ತಿದ್ದರು. ಹೊಸ ಹರೆಯದ ನಿಂಗಿಯೂ ಗಂಡನೊಂದಿಗೆ ಬಾಳುವೆ ನಡೆಸಲು ಹಾತೊರೆಯುತ್ತಿದ್ದಳು.

ಅವರೆದುರಿಗೆ ನಾಗವ್ವ ಮಾತು ತೆಗೆದಾಗ ಮೊದಮೊದಲು ನಿಂಗಿಯ ತಂದೆತಾಯಿಗಳು ಅದಕ್ಕೊಪ್ಪಲಿಲ್ಲ. "ಒಂದು ಹೆಣ್ಣಿನ ಮ್ಯಾಲ ಇನ್ನೊಂದು ಹೆಣ್ಣು ಕೊಡೂದಂದರ ಹೆಂಗವ್ವ? ಭೀಮಣ್ಣ ಸಾವುಕಾರನಾದರೂ ಆಗಿದ್ದರ ಆ ಮಾತು ಬ್ಯಾರೆ ಆಗುತ್ತಿತ್ತು. ಅವಗ ಒಂದು ತುಂಡು ಹೊಲಾನೂ ಇಲ್ಲ. ಗಟ್ಟಿಮುಟ್ಟಾದ ಒಂದು ಮನೀನೂ ಇಲ್ಲ. ಇಂಥಾವ ಇಬ್ಬರು ಹೆಂಡರನ್ನ ಕಟ್ಟಿಕೊಂಡು ಹೆಂಗ ಬಾಳ್ಯಾನು?" ಎಂದು ನಿಂಗಿಯ ತಾಯಿ ವಾದಿಸಿದಳು. ಅದಕ್ಕೆ ಉತ್ತರವಾಗಿ ನಾಗವ್ವ— "ಅದರದೇನು ಚಿಂತಿ ಬ್ಯಾಡ ನಿಮಗ. ಆ ಗಂಗಿಯ ಮಗಳನ್ನ ನಾವಿಲ್ಲಿಗೆ ಕರೆದುತರೂದೇ ಇಲ್ಲ. ಅವಳದೂ ನಮ್ಮದೂ ಸಂಬಂಧ ಇಲ್ಲಿಗೇ ಮುಗಿದಂಗಾತು. ಇನ್ನೇನು ಅವರೆ ಬಂದು ಸೋಡಚೀಟಿ ಒಯ್ಯತಾರ. ನಿಂಗಿ ಒಬ್ಬಳೇ ಮನ್ಯಾಗ ರಾಣೀಹಂಗ ಇರುತಾಳ," ಎಂದಳು.

"ನೋಡವ್ವ. ಇಂದೇನೋ ಹೀಂಗ ಮಾತಾಡುತೀ. ನಾಳೆ ಗಂಗವ್ವ ಬಂದು ತನ್ನ ಮಗಳನ್ನ ಭೀಮಣ್ಣನ ಮನ್ಯಾಗ ಬಿಟ್ಟು ಹೋದಳು ಅಂತ ತಿಳಿ. ಆಗ ಏನು ಮಾಡುವಾಕಿ? ಆ ಹುಡುಗೀನ್ನ ಹೊಡಿದು ಹೊರಗ ಹಾಕಾಕ ಬರುತೈತೇನ?"

"ಯಾಕೆ ಬರೂದಿಲ್ಲ? ಎಲ್ಲಾ ಬರತೈತಿ. ಗಂಗಿ ಹಂಗೇನಾದರೂ ಹಟಾ ಹಿಡಿದು ಬಂದಳಂದರ ಕಸಬರಗೀ ತಗೊಂಡು ಅವಳನ್ನೂ ಅವಳ ಮಗಳನ್ನೂ ಹೊರಗ ಹಾಕುತೀನಿ. ಹೂಂ, ನಾನಾದರೂ ಯಾಕ ಮಾಡಬೇಕು ಈ ಕೆಲಸಾ? ನಿನ್ನ ಮಗಳೇ ಇರುತಾಳಲ್ಲ ಅವರಿಬ್ಬರನ್ನೂ ಬಡಿಯಾಕ?" ಎಂದು ನಗುತ್ತ ನುಡಿದಳು ನಾಗವ್ವ.

"ಅದೆಲ್ಲಾ ಆಗಾಕಿಲ್ಲವ್ವ," ಎಂದು ಮೊದಮೊದಲು ಹಿಂದೆಗೆದರೂ ನಿಂಗಿಯ ತಂದೆತಾಯಿಗಳು ಕೊನೆಗೆ ಆ ವಿಷಯವನ್ನೊಪ್ಪಿಕೊಳ್ಳಬೇಕಾಯಿತು. ಬೆಳೆದುನಿಂತ ಹುಡುಗಿಯನ್ನು ಹಾಗೆಯೇ ಮನೆಯಲ್ಲಿಟ್ಟುಕೊಳ್ಳಲು ಅವರಿಗೂ ಭೀತಿಯಾಗಿದ್ದಿತು. ಬೇರೆ ಕಡೆಗಳಿಂದ ಆಕೆಗೆ ಕೇಳಲು ಜನವೂ ಬರುತ್ತಿರ

ಲಿಲ್ಲ. “ ಭೀಮಣ್ಣ ಗಟ್ಟಿಮುಟ್ಟಾದ ಆಳು. ಇದೇ ಊರಲ್ಲೂ ಇರತಾನ. ನಮ್ಮ ಮಗಳು ನಮ್ಮ ಕಣ್ಮುಂದೇ ಇರುವಂಗೂ ಆಗುತೈತಿ. ಇನ್ನವಳ ಸನತಿಯ ಮಾತು ಅವಳ ಹಣ್ಯಾಗ ಬರದಾಂಗ ಆಗುತೈತಿ. ಅದಕ್ಕ ನಾವೇನ ಮಾಡೂಣು?” ಎಂದು ಹೇಳಿಕೊಂಡು ಅವಳ ‘ಉಡಿಕಿ’ ಗೆ ಸಮ್ಮತಿ ಸೂಚಿಸಿದರು.

ಒಂದು ವಾರದೊಳಗಾಗಿ ‘ಉಡಿಕಿ’ ಯ ಶಾಸ್ತ್ರವೂ ನಡೆದುಹೋಯಿತು ನಿಂಗವ್ವ ಭೀಮಣ್ಣನ ವಧುವಾಗಿ ಆತನ ಮನೆಗೆ ಬಂದಳು.

ಈ ಸಮಾಚಾರ ತಿಳಿಯುತ್ತಲೂ ಹೊಳೆಪ್ಪ ಹಣೆ ಗಿಟ್ಟಿಸಿಕೊಂಡು ತನ್ನ ದೈವವನ್ನು ಹಳಿದುಕೊಂಡ. ದನಿಯೆತ್ತಿ ಹೆಂಡತಿಯನ್ನು ದೂಷಿಸಲಿಲ್ಲ. “ಇದ್ದೊಬ್ಬ ಮಗಳು ಸುಕದಿಂದ ಬಾಳ್ವೆ ಮಾಡೂದು ನೋಡಿ ಕಣ್ಮುಚ್ಚ ಬೇಕಂದರ ಇದಕ್ಕೂ ಅಡ್ಡ ಬಂದಿಯಾ ದೈವವೇ!” ಎಂದು ನರಳಿದ.

ಆ ಸುದ್ದಿಯಿಂದಾಗಿ ಗಂಗವ್ವನಿಗೆ ಮಾತ್ರ ಕೊಂಚವೂ ದುಃಖವಾಗ ಲಿಲ್ಲ. ಅಳಿಯನ ಬಗೆಗೆ ಆಕೆಯಲ್ಲಿದ್ದ ಕೋಪ, ತಿರಸ್ಕಾರ ಇನ್ನೂ ಹೆಚ್ಚಿತು. “ ಮದುವಿ ಮಾಡಿಕೊಂಡ ಹೆಣ್ಣಿನ ತೆರ ಕೊಡೂದಕ್ಕಾಗದೆ ಅಳುತ್ತಿದ್ದ ಮೂಳ ಉಡಿಕಿ ಮಾಡಿಕೊಂಡಿತಂತೆ. ಮಂದಿಯೊಳಗ ಮಾನ ಅದ್ರೂ ಏನುಳಿದಂ ಗಾತು ? ಇನ್ನು ಅದು ಆ ಉಡಿಕ್ಯಾಕೀನ್ನ ಕಟ್ಟಿಕೊಂಡು ಹೆಂಗ ಬಾಳೀವು ಮಾಡುತೈತ್ಯೋ ನಾನs ನೋಡುತೇನಲ್ಲ!” ಎಂದು ನುಡಿದು ತಾತ್ಸಾರದ ನಗೆ ನಕ್ಕಳು.

ಆಗ ಮಾತ್ರ ಹೊಳೆಪ್ಪನಿಗೆ ಸುಮ್ಮನಿರಲಾಗಲಿಲ್ಲ. “ ಅದೆಲ್ಲಾ ಆತು, ಆದರ ಯಮುನಿಯ ಗತಿ ಏನು ಅನ್ನೂದನ್ನ ಎಣಿಸಿ ನೋಡಬಾರದೇನೇ ? ”

“ ಯಮುನಾಗೇನಾಗುತೈತಿ ? ಅವನ್ನ ಬಿಟ್ಟರ ಬ್ಯಾರೇ ಗಂಡ ಸಿಗುದೇ ಇಲ್ಲೇನ ಆಕಿಗೆ ? ರೂಪದಾಗ ಯಾರಿಗೆ ಏನು ಕಡಿಮೆ ಆಗಿದಾಳ ನನ ಮಗಳು ? ಇಂಥಾಕೀನ್ನ ಮಾಡಿಕೊಳ್ಳಾಕ ನಾ ಮುಂದ ನೀ ಮುಂದ ಅಂತ ಬಿದ್ದು ಬಂದಾರು ಯಾರಾದರೂ.... ?”

“ ಆಕಿಯ ರೂಪಾ ಯಾರು ನೋಡುತಾರೇ ? ಕೂಲೀ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವವರ ಕುಲದಾಗ ರೂಪ ಬಣ್ಣಕ್ಕ ಏನು ಬೆಲಿ ಐತಿ ? ಸುಮ್ಮನ ಮಗಳ ಬಾಳೀವು ಹಾಳಾಗಬಾರದು. ಭೀಮಣ್ಣನ ಸಂಗಡ ಕೆಡಿಸಿ

ಕೊಂಡದ್ದು ನೆಟ್ಟಗಾಗಲಿಲ್ಲ."

"ನಿನಗ ಅವ ಏನೋ ಮಾಟಾ ಮಾಡಿದಂಗ ಕಾಣುತ್ತೈತಿ. ಯಾವಾಗ ನೋಡಿದರೂ ಅವನ್ನ ಎತ್ತಿ ಮಾತಾಡುತೀ. ನನಗಿಂತ ಆ ಅಳ್ಯಾನೇ ಹೆಚ್ಚು ಆಗೈತಿ ನಿನಗ," ಎಂದು ನುಡಿದು ಗಂಗವ್ವ ಗಂಡನ ಬಾಯಿ ಮುಚ್ಚಿಸಿದಳು.

ತನ್ನ ಗಂಡ ಇನ್ನೊಬ್ಬಳನ್ನು 'ಉಡಿಕಿ' ಯಾದ ಸುದ್ದಿ ಕೇಳಿದಾಗ ಯಮುನಳಿಗೆ ಎಷ್ಟೋ ಸಮಾಧಾನವಾದಂತಾಯಿತು. ಭರಮದೇವನೇ ತನ್ನ ಬೇಡಿಕೆಯನ್ನು ನಡಸಿಕೊಟ್ಟನೆಂದು ಬಗೆದು ಆಕೆ ಗುಡಿಗೆ ಹೋಗಿ ತನ್ನ ಕೃತಜ್ಞತೆಯನ್ನರ್ಪಿಸಿ, "ಇನ್ನೆಂದೂ ಅವ ಇಲ್ಲಿಗೆ ಬರದಿರಲಿ ದೇವರೇ. ನನ್ನ ಕರಕೊಂಡು ಹೋಗುವ ಬುದ್ಧಿಯೂ ಅವಗ ಬರದಿರಲಿ," ಎಂದು ಬೇಡಿ ಕೊಂಡು ಬಂದಳು. ಮುಂದೆ ತನ್ನ ಗತಿಯೇನು, ತನ್ನ ಬಾಳುವೆ ಹೇಗಾಗು ವುದು ಎಂಬ ವಿಚಾರವಾವುದೂ ಆಗ ಅವಳನ್ನು ಬಾಧಿಸಲಿಲ್ಲ. ತನ್ನ ಗಂಡ ಇನ್ನೊಂದು ಹೆಣ್ಣನ್ನು ಮಾಡಿಕೊಂಡುದರಿಂದ ತನಗೂ ಅವನಿಗೂ ಸಂಬಂಧ ಬರುವುದು ತಪ್ಪಿದಂತಾಯಿತೆಂದೇ ಆಕೆ ತಿಳಿದಿದ್ದಳು. ಮದುವೆಯ ಸಂಬಂಧ ತಪ್ಪುವುದು ಅಷ್ಟೊಂದು ಸುಲಭವಲ್ಲ— ಎಂಬ ವಿಷಯವನ್ನಾಕೆ ಅರಿತಿರ ಲಿಲ್ಲ.

ಆ ಸುದ್ದಿ ತಿಳಿದ ದಿನ ಆಕೆ ಸೀರೆ ಒಗೆದುಕೊಂಡು ಬರುವ ನೆವದಿಂದ ಹಳ್ಳಕ್ಕೆ ಹೋಗಿ, ಹತ್ತಿರದ ತೋಟದಲ್ಲಿದ್ದ ರಾಮುನನ್ನು ಗುಟ್ಟಾಗಿ ಕಂಡು ಅತ್ಯಂತ ಆನಂದದಿಂದ ಆ ವಿಷಯವನ್ನಾತನಿಗೆ ತಿಳಿಸಿದಳು. ಯಾತದ ಮೊಟ್ಟೆ ಹೊಡೆದು ದಣಿದಿದ್ದ ಆತನಿಗೆ ಅದರಿಂದಾಗಿ ಯಾವ ಸಂತೋಷವೂ ಉಂಟಾಗಲಿಲ್ಲ.

"ಬ್ಯಾರೆ ಮದುವಿ ಆದಷ್ಟಕ್ಕೆ ಏನಾದಾಂಗಾಯ್ತು ಯಮುನೀ? ಅವಗೂ ನಿನಗೂ ಬಿದ್ದ ಗಂಟು ಏನೂ ಹರಿಯುವದಿಲ್ಲ."

ಯಮುನಳ ಉತ್ಸಾಹವೆಲ್ಲ ಇಳಿದು ಹೋಯಿತು. ಆಕೆ ಕುಗ್ಗಿದ ದನಿ ಯಲ್ಲಿ ಕೇಳಿದಳು: "ಅದೇನು, ಹಾಂಗಂತೀs? ಅವ ಇನ್ನೊಬ್ಬಾಕೀನ ಮಾಡಿಕೊಂಡರ ನಾನೂ ಇನ್ನೊಬ್ಬನ್ನ ಮಾಡಿಕೊಳ್ಳಾಕ ಬರೂದಿಲ್ಲೇನು?"

"ಬಂದೀತು. ಅದಕ್ಕ ಮೊದಲು ಅವ ನಿನಗ ಸೋಡಚೀಟಿ ಕೊಡ ಬೇಕಲ್ಲ?"

"ಸೋಡಚೀಟೀ?"

"ಹೂಂ. ಸೋಡಚೀಟೀ. ಭೀಮಣ್ಣನಿಂದ ನಿನಗ ಸೋಡಚೀಟಿ ಸಿಗದಿದ್ದರ ನೀ ಯಾರನ್ನೂ ಮಾಡಿಕೊಳ್ಳಾಕ ಬರೂದಿಲ್ಲ."

"ಮತ್ತೆ? ಅವ ಹ್ಯಾಂಗ ಮಾಡಿಕೊಂಡ? ನಾನೇನು ಅವಗ ಸೋಡಚೀಟೀ ಕೊಟ್ಟಿದ್ದಿನೇನು?"

"ಅವ ಗಂಡಸು. ಅವ ಎಷ್ಟೊ ಮಂದೀನ್ನ ಬೇಕಾದರೂ ಮಾಡಿಕೊಳ್ಳಾಕ ಬರತೈತಿ. ನೀನು ಹೆಂಗಸು. ಅವನ ಹಾಂಗ ನಿನಗ ಮಾಡಿಕೊಳ್ಳಾಕ ಬರುವದಿಲ್ಲ, ಅವನಿಂದ ಸೋಡಚೀಟಿ ಸಿಕ್ಕಿದ ಮ್ಯಾಲs ನೀ ಬ್ಯಾರೆಯವನ್ನ ಮಾಡಿಕೊಳ್ಳೂದು."

"ಅಲ್ಲೀತನಕ?"

"ಅಲ್ಲೀತನಕ ಹಿಂಗs."

## ತೆರೆ: ಐದು.

ಕೆಲವು ದಿನಗಳಿಂದ ಹೊಳೆಪ್ಪನಿಗೆ ದೇಹಸ್ವಾಸ್ಥ್ಯವಿರಲಿಲ್ಲ. ಎದೆನೋವಿನಿಂದ ನರಳುತ್ತ ಹಾಸುಗೆ ಹಿಡಿದು ಬಿದ್ದುಕೊಂಡಿದ್ದ. ಸಣ್ಣಗೆ ಜ್ವರವೂ ಬರುತ್ತಿದ್ದಿತು. ರಾತ್ರಿಯೆಲ್ಲ ನಿದ್ದೆ ಬರುತ್ತಿರಲಿಲ್ಲ. ಕೆಮ್ಮಿದಾಗ ರಕ್ತ ಬೀಳುತ್ತಿತ್ತು.

"ಎದಿಗೆ ಕಾವು ಆದಂಗ ಕಾಣುತೈತಿ. ಏಳೆಂಟು ದಿನದ ಮ್ಯಾಲ ತಾನೇ ಕಡಮಿಯಾದೀತು" ಎಂದುಕೊಂಡು ಆತ ಹಾಗೆಯೆ ಬಿದ್ದುಕೊಂಡಿದ್ದ. ತೀರ ಸಣ್ಣ ಹಳ್ಳಿ ಅದು. ಡಾಕ್ಟರರಾಗಲಿ, ವೈದ್ಯರಾಗಲಿ ಯಾರೂ ಅಲ್ಲಿರಲಿಲ್ಲ. ಡಾಕ್ಟರರನ್ನು ಕಾಣಬೇಕಾದರೆ ಮೂವತ್ತು ಮೈಲು ದೂರದಲ್ಲಿದ್ದ ಗೋಕಾಕಕ್ಕೆ ಹೋಗಬೇಕಾಗುತ್ತಿತ್ತು. ಅಲ್ಲಿಯ ವರೆಗೆ ಹೋಗಬರುವುದಕ್ಕೂ ಸಹ ಹಣವಿರುತ್ತಿರಲಿಲ್ಲ ಹಳ್ಳಿಗರ ಹತ್ತಿರ. ಇನ್ನು ಡಾಕ್ಟರರಿಗೆ ಹಣ ಸುರಿಯುವ ಶಕ್ತಿ ಎಲ್ಲಿಂದ ಬರಬೇಕು ಅವರಿಗೆ? ಯಾರಿಗಾದರೂ ಏನಾದರೂ ಕಾಯಿಲೆಯಾದರೆ ದೇವರ ಮೇಲೆ ಭಾರ ಹಾಕಿ ಸುಮ್ಮನೆ ಬಿದ್ದುಕೊಳ್ಳುವುದೊಂದೇ ದಾರಿ. "ಇದಕ್ಕೇನಾಗುತೈತಿ ಬಿಡು. ತಂತಾನೇ ಹೋಗು

ಎಂದುಕೊಂಡು ಸಮಾಧಾನ ಮಾಡಿಕೊಳ್ಳುವರು. ಹೊಳಿಪ್ಪನೂ ಅಂತೆಯೆ ಸಮಾಧಾನ ತಂದುಕೊಂಡು ದಿನ ತಳ್ಳುತ್ತಿದ್ದ. ತನಗೆ ಗೊತ್ತಿದ್ದ ಒಂದೆರಡು ಉಪಾಯಗಳನ್ನು ಮಾಡಿನೋಡಿದ. ಎದೆನೋವು ಬಂದಾಗಲೆಲ್ಲ ಬೇವಿನ ರಸ ಕುಡಿಯುವುದು ಆತನ ಪದ್ಧತಿಯಾಗಿದ್ದಿತು. ಆಗಲೂ ಅದೇ ಔಷಧ ಸೇವನೆಗಾರಂಭಿಸಿದ್ದ. ನೋವು ಕಡಿಮೆಯಾಗಲಿಲ್ಲ, ಜ್ವರವೂ ಇಳಿಯಲಿಲ್ಲ, ರಕ್ತ ಬೀಳುವುದೂ ನಿಲ್ಲಲಿಲ್ಲ. ಮೊದಲು ಒಂದು ವಾರ ಸಣ್ಣಗೆ ಬರುತ್ತಿದ್ದ ಜ್ವರ ದಿನ ಕಳೆದ ಹಾಗೆ ಉಗ್ರವಾಗುತ್ತ ಬಂದಿತು. ಮಾತನಾಡಲು ಬಾಯಿ ತೆರೆದರೆ ರಕ್ತ ಸಿಡಿಯತೊಡಗಿತು. ಎದೆನೋವಿನಿಂದಾಗಿ ಉಸಿರಾಡಿಸುವದೂ ಕಷ್ಟಕ್ಕಿಟ್ಟುಕೊಂಡಿತು. ಅದಾವ ರೋಗವೆಂಬುದು ಯಾರಿಗೂ ತಿಳಿಯಲಿಲ್ಲ. "ಹೊಳಿಪ್ಪ ಉಳಿಯುವದಿಲ್ಲ" ಎಂದು ಅಕ್ಕಪಕ್ಕದ ಜನರು ಆಡಿಕೊಳ್ಳ ತೊಡಗಿದರು.

ಗಂಗವ್ವನಿಗೆ ಗಾಬರಿಗಿಟ್ಟುಕೊಂಡಿತು. "ದಾಕತಾರನ್ನ ಕರಕೊಂಡು ಬರೂಣೇನು ?" ಎಂದಾಕೆ ಗಂಡನನ್ನು ಕೇಳಿದಳು.

ಆತ ಘೋತರದಿಂದ ಬಾಯಿ ಮುಚ್ಚಿಕೊಂಡು ತೀರ ಕಷ್ಟದಿಂದ ಮಾತನಾಡಿದ:

"ನಮಗೆಲ್ಲಾ ಯಾಕೆ ದಾಕತಾರು ? ನೀ ಏನೂ ಗಾಬರಿಯಾಗ ಬ್ಯಾಡ ಗಂಗೀ. ಇನ್ನೊಂದು ವಾರದಾಗ ನೆಟ್ಟಗಾದೀತು ನನಗ."

"ಹಾಂಗೀ ನೆಟ್ಟಗಾಗೂದಿಲ್ಲಂತ ಮಂದಿ ಹೇಳುತಾರ. ದಾಕತಾರನ್ನ ಕರಕೊಂಡು ಬಂದು ತೋರಿಸಬೇಕಂತ ಗೌಡರೂ ಹೇಳಾಕ ಹತ್ತಿದ್ದರು ನಿನ್ನೆ."

"ಹೇಳುವವರು ಹೇಳತಾರ. ಅವರ ಮಾತು ಕೇಳಕೊಂಡು ನಾವು ಸಿಕ್ಕಾಂಗ ಕುಣಿದಾಡಾಕ ಬರುತ್ತೈತೇನ ? ದಾಕತಾರನ್ನ ಕರತರೂದಂದರ ಹುಡುಗಾಟಲ್ಲ. ಆರಿಪ್ಪತ್ತು ಎಂಟಿಪ್ಪತ್ತು ರೂಪಾಯಿ ಕೊಡಬೇಕಾಗುತ್ತೈತಿ ಅವಗ. ಎಲ್ಲಿಂದ ತರುತೀ ಅಷ್ಟೊಂಕು ರೂಪಾಯಿ ?"

"ಗೌಡರಿಗೆ ಕೇಳಿದರ ಕೊಟ್ಟಾರೋ ಏನೋ."

"ಮತ್ತೇನ ಕೊಡುತಾರ ? ಅದೆಲ್ಲಾ ಆಗುವ ಮಾತಲ್ಲ ಬಿಡು ಗಂಗೀ."

" ದಾಕತಾರನ್ನ ಕರಕೊಂಡು ಬರಬೇಕಂತ ನಿನ್ನೆ ಅವರೇ ಹೇಳಿದಾಗ ಅವರಿಂದ ರೂಪಾಯಿ ಸಿಕ್ಕರೂ ಸಿಕ್ಕಾವು ಅಂತನ್ನಿಸಿತು ನನಗ. ಕೇಳಿ ನೋಡಲೇನು ? "

" ಬ್ಯಾಡ ಗಂಗೀ. ಅವರು ಕೊಡೂದಿಲ್ಲ. ಸುಮ್ಮನ ಬಾಯಿತೆಗೆದು ಅಬ್ರೂ ಕಳಕೊಳ್ಳಬಾರದು. "

ಗಂಡ ಆರೀತಿ ಸ್ಪಷ್ಟವಾಗಿ ಹೇಳಿದರೂ ಗಂಗವ್ವನ ಜೀವ ತಡೆಯಲಿಲ್ಲ. " ಕೇಳಿಯಾದರೂ ನೋಡೋಣಲ್ಲ. ಕೊಟ್ಟರ ಕೊಟ್ಟರು, ಇಲ್ಲದಿದ್ದರ ಇಲ್ಲ. " ಎಂದುಕೊಂಡು ಅದೇ ದಿನ ಸಾಯಂಕಾಲ ಗೌಡರ ಮನೆಗೆ ಹೋದಳು.

## ತೆರೆ: ಆರು.

ಎರಡು ನೂರು ಮನೆಗಳ ಆ ಹಳ್ಳಿಯಲ್ಲಿ ಮಹಡಿಯಿದ್ದ ಮನೆಯೆಂದರೆ ಒಂದೇ ಒಂದು ಅದೇ ಗೌಡರ ಮನೆ. ಇನ್ನುಳಿದವುಗಳೆಲ್ಲ ತೀರ ಸಣ್ಣವು ಮಣ್ಣಿನ ಗೋಡೆಗಳು, ಚಿಕ್ಕ ಬಾಗಿಲುಗಳು. ಮುಕ್ಕಾಲುಪಾಲು ಮನೆಗಳಿಗೆ ಬಚ್ಚಲುಗಳೇ ಇಲ್ಲ. ಅಂಗಳದಲ್ಲಿನ ಕಲ್ಲುಗಳ ಮೇಲೆ ವಾರಕ್ಕೊಂದು ಬಾರಿ ಸ್ನಾನವಾದರಾಯಿತು.

ಗೌಡರ ಮನೆ ಮಾತ್ರ ಎತ್ತರವಾಗಿ ವಿಶಾಲವಾಗಿದ್ದಿತು. ಕಲ್ಲು—ಗಾರೆ ಗಳಿಂದ ಕಟ್ಟಲ್ಪಟ್ಟ ಗಟ್ಟಿಮುಟ್ಟಾದ ಗೋಡೆಗಳು ದೊಡ್ಡ ದೊಡ್ಡ ತೊಲೆ ಗಳು, ಕಂಬಗಳು. ಪಡಸಾಲೆ, ದೇವರ ಮನೆ, ಬಚ್ಚಲು ಮನೆ, ಅಡುಗೆಯ ಮನೆ, ಮಲಗುವ ಮನೆ, ಉಗ್ರಾಣ ಎಲ್ಲವೂ ಬೇರೆಬೇರೆಯಾಗಿದ್ದುವು. ಪಡ ಸಾಲೆಯಂತೂ ಬಹಳ ವಿಶಾಲವಾದುದು. ಮನೆಗೆ ನೂರಾರು ಅತಿಥಿಗಳು ಬಂದರೂ ಅವರಿಗೆಲ್ಲ ಅನುಕೂಲವಾಗುವಷ್ಟು ಪ್ರಶಸ್ತವಾಗಿದ್ದಿತು. ವರ್ಷ ಕ್ಕೊಮ್ಮೆ ಸುಗ್ಗಿ ಕಳೆದ ಬಳಿಕ ರೈತರಿಂದ ಭಿಕ್ಷವನ್ನೆತ್ತಲು ಬರುತ್ತಿದ್ದ ಸ್ವಾಮಿ ಗಳು, ಸರಕಾರಿ ಕೆಲಸಕ್ಕಾಗಿ ಬರುತ್ತಿದ್ದ ಅಧಿಕಾರಿಗಳು ಎಲ್ಲರೂ ಇಳಿದು ಕೊಳ್ಳುತ್ತಿದ್ದುದು ಅಲ್ಲಿಯೆ. ಸುತ್ತುಮುತ್ತಲಿನ ಹತ್ತಿಪ್ಪತ್ತು ಹಳ್ಳಿಗಳಲ್ಲೆಲ್ಲ ರುದ್ರಪ್ಪಗೌಡರ ಹೆಸರು ಪ್ರಸಿದ್ಧವಾದುದಾಗಿತ್ತು. ಊರಿನ ಗೌಡಿಕೆಯು

ಜೊತೆಗೆ ಅವರ ತಂದೆ ಫಕೀರಗೌಡರು ಸಾಹುಕಾರಿಕೆಯನ್ನೂ ನಡಿಸುತ್ತ ಬಂದಿದ್ದರು. ಆ ವ್ಯವಹಾರದಲ್ಲಿಯೇ ಅವರು ನೂರಾರು ಎಕರೆ ಹೊಲಗಳನ್ನೂ ಸಾಕಷ್ಟು ಹಣವನ್ನೂ ಸಂಪಾದಿಸಿದ್ದರು.

ಫಕೀರಗೌಡರಿಗೆ ಎಂಭತ್ತುವರ್ಷ ವಯಸ್ಸಾಗುತ್ತ ಬಂದಿದ್ದಿತು. ಈಚೆಗೆ ಕೆಲವು ವರ್ಷಗಳಿಂದ ಎಲ್ಲ ವ್ಯವಹಾರವನ್ನೂ ರುದ್ರಗೌಡರೇ ನೋಡಿಕೊಳ್ಳುತ್ತಿದ್ದರು. ಅವರಿಗಾಗ ನಲವತ್ತು ವರ್ಷ ವಯಸ್ಸು. ಗೌಡಿಕೆ ಹಾಗು ಸಾಹುಕಾರಿಕೆಗಳಿಗೆ ತಕ್ಕ ಹಾಗೆ ದೇಹದಾರ್ಢ್ಯವೂ ಇದ್ದಿತು. ವಿಶಾಲವಾದ ಎದೆ, ಹುರಿಗೊಂಡ ತೋಳು ತೊಡೆ, ಎಣ್ಣೆಹಚ್ಚಿ ತಿರುವಿದ ಮೀಸೆ. ತೆಳುವಾದ ಬಟ್ಟೆಯ ಅಂಗಿಯನ್ನು ತೊಟ್ಟು, ನೀಲವರ್ಣದ ಜರತಾರಿ ರುಮಾಲು ಸುತ್ತಿ, ಕಾಲುಗಳಲ್ಲಿ ಜರಿ ಕಟ್ಟಿದ ಚಡಾವು ಹಾಕಿ, ಕೈಯಲ್ಲಿ ದಪ್ಪಗಿನ ದೊಣ್ಣೆ ಹಿಡಿದು ರುದ್ರಗೌಡರು ಹೊರಗಡೆ ಹೊರಟರೆಂದರೆ ಬಡ ರೈತರು ಪಿಳಿಪಿಳಿ ಕಣ್ಣು ಬಿಡುತ್ತ ಅವರನ್ನೇ ದಿಟ್ಟಿಸುತ್ತಿದ್ದರು. ಅವರ ಹಿಂದೆ ಮುಂದೆ ತೋಳದಂಥ ನಾಯಿಗಳೆರಡು ಬಾಲಗಳನ್ನು ಡೌಲಿನಿಂದ ಸೆಟೆಯಿಸಿಕೊಂಡು ಸಾಗುವವು. ಗೌಡರ ಅಂತರಂಗದ ಮಿತ್ರನೂ ಹಿಂಬಾಲಕನೂ ಆಗಿದ್ದ ಕಾಡೇಶಿ ಬಿಂಕದಿಂದ ಹೆಜ್ಜೆಯಿಡುತ್ತ ಅವರ ಹಿಂದೆಹಿಂದೆ ನಡೆಯುವನು.

ಕಾಡೇಶಿ ಆ ಹಳ್ಳಿಯವನಲ್ಲ. ಗೋಕಾಕದ ಆಚೆಗಿದ್ದ ಯಾವುದೋ ಒಂದು ಹಳ್ಳಿಯವನು. ರುದ್ರಗೌಡರು ಒಮ್ಮೆ ಮರಡೀಮಠದ ಜಾತ್ರೆಗೆ ಹೋಗಿದ್ದಾಗ ಅಲ್ಲಿ ಕುಸ್ತಿ ಆಡಿ ಗೆದ್ದು ವಿಜೃಂಭಿಸಿದ ಕಾಡೇಶಿಯನ್ನು ಕಂಡು ಮೆಚ್ಚಿಕೊಂಡು ಅವನಿಗೆ ಬೆಳ್ಳಿಯ ಕಡಗವೊಂದನ್ನು ಬಹುಮಾನವಾಗಿ ಕೊಟ್ಟು ಸನ್ಮಾನಿಸಿದ್ದರು. ಕಾಡೇಶಿ ಅವಿವಾಹಿತ ಯುವಕ. ಆತನಿಗೆ ತಂದೆ ತಾಯಿ, ಅಣ್ಣತಮ್ಮಂದಿರು ಯಾರೂ ಇರಲಿಲ್ಲ. ಊರಲ್ಲಿ ಹೊಲವೂ ಇರಲಿಲ್ಲ. ರುದ್ರಗೌಡರಂಥ ಆಶ್ರಯದಾತರೊಬ್ಬರನ್ನು ಆತನೂ ಅರಸುತ್ತಿದ್ದ. ಗೌಡರಿಗೂ ಅಂಥ ಜಟ್ಟಿಯೊಬ್ಬನ ಅವಶ್ಯಕತೆಯಿದ್ದಿತು. "ನಮ್ಮೂರಿಗೆ ಬಂದು ನಮ್ಮಲ್ಲೇ ಇರುತೀಯಾ?" ಎಂದು ಕೇಳಿದ್ದರು. ಕಾಡೇಶಿ ಆನಂದದಿಂದ ಒಪ್ಪಿ ಆಗಲೇ ಹೊರಟು ಬಂದಿದ್ದ. ತಮ್ಮ ಮನೆಯ ಹತ್ತಿರವೇ ಅವನಿಗೊಂದು ಸಣ್ಣ ಮನೆಯನ್ನು ಬಿಡಿಸಿಕೊಟ್ಟು ಗೌಡರು ಅವನ ಜೀವನಕ್ಕೆ ಅಗತ್ಯವಿರುವ ವ್ಯವಸ್ಥೆಯನ್ನೆಲ್ಲ ಮಾಡಿಕೊಟ್ಟಿದ್ದರು. "ನಿನಗೆ

ಮನಸ್ಸಿದ್ದರೆ ಒಂದು ಮದುವೆಯನ್ನೂ ಮಾಡೋಣ, ಹೇಳು." ಎಂದು ಗೌಡರು ಕೇಳಿದಾಗ ಆತ— "ಈಗಲೇ ಆ ಸಂಸಾರದ ನಿಗ್ಗರ ಬ್ಯಾಡ ಮಾರಾಯರೆ. ಇನ್ನೂ ಎಂಟು ಹತ್ತು ವರುಷ ಕುಸ್ತಿ ಆಡಿಕೊಂಡು ಚಂದಾಗಿ ಇರುತೇನೆ," ಎಂದು ಉತ್ತರವಿತ್ತಿದ್ದ. ಆತನಿಗೆ ಹಾಲು, ಸಕ್ಕರೆ, ಬಾದಾಮಿ ಗೋದಿರೊಟ್ಟಿ ಯಾವುದಕ್ಕೂ ಏನೂ ಕೊರತೆ ಬರದಂತೆ ನೋಡಿಕೊಂಡಿದ್ದರು ಗೌಡರು. ಆತ ಮನಸ್ವಿಯಾಗಿ ತಿಂದು, ವ್ಯಾಯಾಮ ಮಾಡುತ್ತ ಗೂಳಿಯ ಹಾಗೆ ಬೆಳೆದಿದ್ದ. ಸುತ್ತುಮುತ್ತಲಿನ ನೂರು ಹಳ್ಳಿಗಳ ಜಟ್ಟಿಗಳನ್ನೆಲ್ಲ ಕುಸ್ತಿಯಲ್ಲಿ ಸೋಲಿಸಿ ಹೆಸರು ಪಡೆದಿದ್ದ. ಆತನ ಕುಸ್ತಿ ನಡೆಯುವ ಸ್ಥಳಗಳಿಗೆಲ್ಲ ತಾವೂ ಹೋಗಿ ಗೌಡರು ಆತನ ವಿಜಯವನ್ನು ಕಂಡು ಹೆಮ್ಮೆಪಟ್ಟುಕೊಂಡು ಮೀಸೆ ತಿರುವಿ ಸಂತೋಷಿಸಿದ್ದರು.

ಗೌಡರ ಸಿರಿವಂತಿಕೆಯಿಂದಾಗಿ ಮೊದಲೇ ಅವರ ಬಗೆಗೆ ಭಯಪಟ್ಟುಕೊಳ್ಳುತಿದ್ದ ಜನರು ಅವರಿಗೆ ಕಾಡೇಶಿಯ ಜೊತೆ ದೊರೆತಂದಿನಿಂದ ಇನ್ನೂ ಹೆದರತೊಡಗಿದ್ದರು. ಇಡಿಯ ಹಳ್ಳಿಯಲ್ಲೆಲ್ಲ ಗೌಡರ ವಿರುದ್ಧ ಹೋಗುವ ಧೈರ್ಯ ಯಾರಿಗೂ ಇರಲಿಲ್ಲ. ಅವರ ಬಗೆಗೆ ಮಾತು ಹೊರಟಾಗಲೂ ಸಹ ಎಲ್ಲರೂ ಬಹಳ ಎಚ್ಚರಿಕೆಯಿಂದಿರುತ್ತಿದ್ದರು.

ಹಣ ಕೇಳಲೆಂದು ಗಂಗವ್ವ ಗೌಡರ ಮನೆಗೆ ಬಂದಾಗ ಅವರು ಪಡಸಾಲೆಯಲ್ಲಿದ್ದ ತೂಗುಮಣೆಯ ಮೇಲೆ ಕುಳಿತುಕೊಂಡು ನಿಧಾನವಾಗಿ ತೂಗಿಕೊಳ್ಳುತ್ತ, ಹತ್ತಿರದಲ್ಲಿಯೇ ಗೋಡೆಗೊರಗಿ ಕುಳಿತಿದ್ದ ಕಾಡೇಶಿಯೊಂದಿಗೆ ಮಾತನಾಡುತ್ತಿದ್ದರು. ಗಂಗವ್ವ ಬಂದು ನಾಲ್ಕೈದು ನಿಮಿಷಗಳ ವರೆಗೆ ಅಂಗಳದಲ್ಲಿಯೇ ನಿಂತುಕೊಂಡು ಗೌಡರ ದೃಷ್ಟಿ ತನ್ನ ಕಡೆಗೆ ಹೊರಳುವುದನ್ನು ಕಾಯುತ್ತಿದ್ದಳು. ಕಾಡೇಶಿಯ ಕಡೆ ಹೊರಳಿ ಮಾತಾಡುತ್ತಿದ್ದ ಗೌಡರಿಗೆ ಗಂಗವ್ವ ಬಂದುದು ಗೊತ್ತಾಗಿರಲಿಲ್ಲ. "ಗೌಡರೇ," ಎಂದು ಕೂಗಿ ಕರೆಯುವ ಧೈರ್ಯ ಗಂಗವ್ವನಲ್ಲಿರಲಿಲ್ಲ. ಆಕೆಯಲ್ಲಿ ಮಾತ್ರವಲ್ಲ, ಅಂಥ ಧೈರ್ಯ ಆ ಹಳ್ಳಿಯಲ್ಲಿ ಯಾರಲ್ಲೂ ಇರಲಿಲ್ಲ.

ಕಾಡೇಶಿಯ ದೃಷ್ಟಿಯೆ ಮೊದಲು ಅವಳನ್ನು ಗುರುತಿಸಿತು. "ಓಹೊ, ಗಂಗವ್ವ ಬಂದಾಳ. ಏನು ಗಂಗವ್ವ, ಇಂಥಾ ಹೊತ್ತಿನಾಗ ಬಂದಿ ?" ಎಂದಾತ ಪ್ರಶ್ನಿಸುತ್ತಲೂ ಗೌಡರೂ ಅವಳ ಕಡೆಗೆ ಹೊರಳಿ— "ಬಾ ಗಂಗವ್ವ

ಕೊಡ್ರಿ" ಎಂದರು.

ಗಂಗವ್ವ ಕಟ್ಟೆಯ ಮೇಲೆ ಕುಳಿತುಕೊಂಡಳು.

"ಏನು ಗಂಗವ್ವ, ಈಗ ಹ್ಯಾಂಗೈತಿ ಹೊಳೆಪ್ಪಗ?"

"ಏನ ಹೇಳ್ಲಿ ಧಣೇರs! ನಿನ್ನಿನಿಂದ ಜೋರಾಗೈತಿ ಜಡ್ಡು. ಎಂಟು ದಿನದಿಂದ ಬಾಯಾಗ ನೀರು ಕೂಡ ಹಾಕಿಲ್ಲ."

"ದಾಕತಾರನ್ನ ಕರಕೊಂಡು ಬಂದು ತೋರಿಸಬೇಕಂತ ಹೇಳಿದರ ನಿಮಗ ತಿಳಿಯೂದಿಲ್ಲ. ನಾವರೆ ಏನ ಮಾಡೂಣು? ಯಾಕೋ ಕಾಡೇಶಿ?" ಎಂದರು ಗೌಡರು.

"ಹೌದ್ರಿ. ಇವರಿಗೆ ದಾಕತಾರಂದರ ವೈವ್ಯಾಲ ಮುಳ್ಳೇಳುತಾವ. ಹಾಂಗs ಬಿದ್ದು ಸಾಯತಾರ."

"ದಾಕತಾರನ್ನ ಕರತರಬೇಕಂದರ ನೂರಿನ್ನೂರು ರೂಪಾಯಿ ಬೇಕಪ್ಪ ಕಾಡೇಶಿ. ನಾವು ಬಡವರು. ನಮಗ ಎಲ್ಲಿಂದ ಬರಬೇಕು ಅಷ್ಟೊಂದು ರೊಕ್ಕ?"

"ಇರದಿದ್ದರ ಸಾಲ ಮಾಡಿ ಆದರೂ ತರಬೇಕು. ಅದೂ ಆಗುವ ದಿಲ್ಲೇನು?" ಎಂದ ಕಾಡೇಶಿ.

"ಸಾಲ ಆದರೂ ಯಾರ ಕೊಡತಾರಪ್ಪ ಹಂಗs? ಏನಾರೆ ಅಡುವು ಇರಬೇಕಲ್ಲ. ಒಂದು ಹೊಲಾ ಇತ್ತು. ಅದೂ ಹೀಂಗs ಸಾಲದಾಗ ಅಡ ವಾಯ್ತು. ಈಗ ಏನುಳದೈತಿ ನಮ್ಮ ಹತ್ತರ?"

ಏನೇನೊ ಮಾತಾಡಬೇಕೆಂದು ತುಟಿ ಬಿಚ್ಚಿದ್ದ ಗೌಡರು, ಗಂಗವ್ವ ಹೊಲದ ಮಾತು ತೆಗೆಯುತ್ತಲೂ ಸುಮ್ಮನಾಗಿ ಬಿಟ್ಟರು. ಆ ಹೊಲವನ್ನು ಅವರು ಆಧಾರವಾಗಿರಿಸಿ ಸಾಲ ಒಯ್ದುದೂ ತಮ್ಮ ಹತ್ತರವೇ. ಅರ್ಥಾತ್ ಆ ಸಾಲವನ್ನೂ ಅದರ ಬಡ್ಡಿಯನ್ನೂ ಮುಟ್ಟಿಸುವುದು ಅವರಿಂದ ಸಾಧ್ಯ ವಾಗಿರಲಿಲ್ಲ. ಹೊಲವನ್ನು ತಮಗೇ ಬರೆದುಕೊಟ್ಟು ಸಾಲದಿಂದ ಬಿಡುಗಡೆ ಹೊಂದಿದ್ದ ಹೊಳೆಪ್ಪ.

"ಕೊಟ್ಟರೆ ಸಾಹುಕಾರರೇ ಕೊಡಬೇಕು ಸಾಲಾ. ಅವರನ್ನು ಬಿಟ್ಟರ ಯಾರಿದಾರ ನಮ್ಮನ್ನು ಕಾಯುವವರು?" ಎಂದಳು ಗಂಗವ್ವ.

ಆ ಪ್ರಶಂಸಾಪೂರ್ಣ ಮಾತುಗಳಿಂದಾಗಿ ಗೌಡರ ಮನಸ್ಸು ಪ್ರಸನ್ನ

ವಾಯಿತು.

"ಕೊಟ್ಟೀವು ಅನ್ನು ಗಂಗವ್ವ. ನಮ್ಮೂರ ರೈತನೊಬ್ಬ ಸಾಯುತಾ ಬಿದ್ದಿರುವಾಗ ಅವನ್ನ ಉಳಿಸೂದಕ್ಕ ಸಾಲಾ ಕೊಡದಿದ್ದರ ಇನ್ಯಾತಕ್ಕ ಕೊಡಬೇಕು ನಾವು? ನಮ್ಮ ಹತ್ತಿರ ರೊಕ್ಕ ಇರೂದಾದರೂ ಯಾತಕ್ಕ?"

ಕೈಗಳೆರಡನ್ನೂ ನೆಲಕ್ಕೆ ಮುಟ್ಟಿಸಿ ಗೌಡರಿಗೆ ನಮಸ್ಕರಿಸುತ್ತ ಗಂಗವ್ವ ಹೇಳಿದಳು. "ಅಷ್ಟು ಮಾಡ್ರಿ ಧಣೇರs. ನಮ್ಮವನ ಜೀವಾ ಉಳಿಸಿರಿ. ನಿಮ್ಮ ಉಪಕಾರ ಜನುಮ ಜನುಮಕ್ಕೂ ಮರಿಯೂದಿಲ್ಲ."

ಎಡಗಡೆಯ ಮೀಶೆಯನ್ನು ಹುರಿಗೊಳಿಸುತ್ತ ಗೌಡರು ನಿರ್ಲಕ್ಷ್ಯದ ಧ್ವನಿಯಲ್ಲಿ ಕೇಳಿದರು:

"ಎಷ್ಟು ಬೇಕು ರೂಪಾಯಿ?"

"ನನಗೇನು ಗೊತ್ತಾಗುತ್ತೈತ್ರಿ ಯಪ್ಪಾ ಏನೂ ಅರೀದ ಮೂಳಿಗೆ. ದಾಕತಾರನ್ನು ಕರೆದು ತರಾಕ ಎಷ್ಟು ಬೇಕೋ ಅಷ್ಟು ಕೊಡಿರಿ."

"ಎಷ್ಟು ಖರ್ಚು ಬಂದೀತೋ ಕಾಡೇಶಿ?"

ಕಾಡೇಶಿ ಒಂದು ಕ್ಷಣ ವಿಚಾರ ಮಾಡುತ್ತಿದ್ದು ಆನಂತರ— "ಗೋಕಾವಿಗೆ ಹೋಗಿ ಅವರನ್ನು ಕರದು ತರಬೇಕಾಗುತ್ತೈತಿ. ಗಾಡೀಖರ್ಚು, ಅವರ ಪೀ, ಅಗಸುದ್ದೀದ ಖರ್ಚು ಎಲ್ಲಾ ಕೂಡಿ ಎರಡು ನೂರು ರೂಪಾಯಿ ಆದರು ಬೇಕಾದೀತು." ಎಂದು ನುಡಿದ.

ಅಷ್ಟು ಹಣ ಬೇಕಾಗಬಹುದೆಂದು ಗಂಗವ್ವನೂ ಮೊದಲೇ ತರ್ಕಿಸಿದ್ದಳು. "ಆತು ಧಣೇರs. ಅಷ್ಟು ಕೊಟ್ಟು ಪುಣ್ಣೇವು ಕಟ್ಟಿಕೊಳ್ಳಿರಿ."

"ನಾಳೆ ಹರೀವತ್ತಿಗೆ ಬಾ. ಕುಲಕರ್ಣಿನ್ನ ಕರೆಸಿರತೀವಿ. ಪರಮೇಸೂರ ನೋಟು ಬರಕೊಟ್ಟು ತಗೊಂಡು ಹೋಗು. ದಾಕತಾರನ್ನ ಕರಕೊಂಡು ಬರೂದಕ್ಕೆ ಯಾರನ್ನ ಕಳಿಸುತೀ?"

"ನಮ್ಮ ಮನ್ಯಾಗ ಬೇರೆ ಯಾರು ಅದಾರ್ರೀ? ಇದ್ದಾಂವ ಒಬ್ಬ ಗಂಡುಸ ಹಾಸಿಗೀ ಹಿಡಿದು ಬಿದ್ದಾನ. ಅದೊಂದು ಸಣ್ಣ ಹುಡುಗಿ. ನೀವೇ ಯಾರನ್ನಾದರೂ ಕಳಿಸಿರಪ್ಪ."

"ಆತೇಳು. ಕಾಡೇಶಿಯೆ ಹೋಗಿ ಕರಕೊಂಡು ಬರ್ತಾನಂತ. ಹೂಂ ನಿನ್ನ ಮಗಳಿಗೆ ಎಷ್ಟು ವರ್ಷ ಈಗ?"

" ಹದಿಮೂರು ತುಂಬಿ ಹದಿನಾಲ್ಕರಾಗ ಬಿದ್ದೈತಿರಿ. "

" ದೊಡ್ಡಾಕಿ ಆಗಿರಬೇಕಲ್ಲ ? ಗಂಡನ ಮನಿಗೆ ಯಾವಾಗ ಕಳಿಸುವಾಕಿ ? "

"ಇನ್ನೆಲ್ಲಿ ಗಂಡನ ಮನೀರೀ?" ಎಂದು ಪ್ರಾರಂಭಿಸಿ ಗಂಗವ್ವ ಭೀಮಣ್ಣ ಇನ್ನೊಬ್ಬಳನ್ನು ' ಉಡಿಕಿ ' ಮಾಡಿಕೊಂಡ ವಿಷಯವೆಲ್ಲವನ್ನೂ ಸಾದ್ಯಂತವಾಗಿ ವಿವರಿಸಿದಳು

" ಹೀಗೇನು ? ನನಗೊಂದೂ ಗೊತ್ತೇ ಇರಲಿಲ್ಲಲ್ಲ ? ಆಗಲೇ ಬಂದು ನನಗ್ಯಾಕ ತಿಳಿಸಲಿಲ್ಲ ನೀ ? "

" ಉಡಿಕಿ ಆದ ಮ್ಯಾಲs ನನಗೂ ಸುದ್ದಿ ತಿಳೀತ್ರಿ. ಅಲ್ಲಿಯ ತನಕ ಯಾರಿಗೂ ಗೊತ್ತಿರಾಕಿಲ್ಲ. "

" ಮುಂದೇನ ಮಾಡಬೇಕಂತ ಮಾಡಿದ್ದೀ ? "

" ನೀವೇ ಏನಾರ ಒಂದು ಹಾದೀ ತೋರಿಸಬೇಕು ಧಣೀರs. ಆ ಭೀಮ್ಯಾನ ಮೂಗು ಕೊಯ್ಯುವ ಹೆಂಗಾಗಬೇಕು. "

" ಹೂಂ. ನೋಡೂಣು. ನಾಳೆ ಬಾ. " ಎಂದು ನುಡಿದು ಗೌಡರು ಮತ್ತೆ ತೂಗಿಕೊಳ್ಳತೊಡಗಿದರು. ಅವರ ತುಟಿಗಳ ಮೂಲೆಯಲ್ಲಿ ವಿಚಿತ್ರ ಹಾಸ್ಯಲಹರಿ ಮೂಡಿದ್ದಿತು.

## ತೆರೆ: ಏಳು.

ಮಾರನೆಯ ದಿನ ಪ್ರಾಮಿಸರಿ ನೋಟಿನ ಮೇಲೆ ಹೆಬ್ಬೆರಳಿನ ಗುರುತು ಹಾಕಿ, ಎರಡು ನೂರು ರೂಪಾಯಿ ಪಡೆದುಕೊಂಡು ಕಾಡೇಶಿಯ ಕೈಯಲ್ಲಿ ಅವುಗಳನ್ನು ಕೊಟ್ಟು ಗಂಗವ್ವ ಮನೆಗೆ ಬಂದಳು. ಸಾಲ ತೆಗೆಯುವ ವಿಷಯವನ್ನು ತನ್ನ ಗಂಡ ಒಪ್ಪುವುದಿಲ್ಲವೆಂಬುದು ಅವಳಿಗೆ ಗೊತ್ತಿದ್ದಿತು. ಅಂತೆಯೆ ಆತನೆದುರಿಗೆ ಈ ಮಾತನ್ನೇ ಎತ್ತಿರಲಿಲ್ಲ. ಡಾಕ್ಟರು ಬಂದ ಬಳಿಕ ಆತನಿಗೆ ಎಲ್ಲವೂ ತಾನಾಗಿಯೆ ತಿಳಿಯುವುದೆಂದು ಬಗೆದು ಸುಮ್ಮನಿದ್ದುಬಿಟ್ಟಳು.

ಅದೇ ದಿನ ಮಧ್ಯಾಹ್ನದ ರೈಲಿಗೆ ಕಾಡೇಶಿ ಗೋಕಾಕಕ್ಕೆ ಹೋಗಿ ರಾತ್ರಿಯ ಗಾಡಿಗೆ ಡಾಕ್ಟರನ್ನು ಕರೆದುಕೊಂಡು ಬಂದ. ಆ ಸಮಯದಲ್ಲಿ

ಹೊಳೆಪ್ಪನ ಮೈಮೇಲೆ ಪ್ರಜ್ಞೆಯಿರಲಿಲ್ಲ. ಡಾಕ್ಟರು ಆತನನ್ನು ಪರೀಕ್ಷಿಸಿ ನೋಡಿ, ಭುಜಗಳನ್ನು ಕುಣಿಸಿದರು.

"ಏನು ದಾಕತಾರಸಾಬರೆ, ಏನಾರೆ ಆಸೆ ಐತ್ಯೋ ಇಲ್ಲೋ?" ಎಂದು ಕೇಳಿದ ಕಾಡೇಶಿ.

"ಪ್ರಯತ್ನ ಅಂತೂ ಮಾಡೋಣ. ಕೇಸು ಬಹಳ ಸೀರಿಯಸ್ ಆದೆ. ಇಲ್ಲಿ ಇಟ್ಟು ಉಪಯೋಗವಿಲ್ಲ."

"ಮತ್ತೆ?"

"ಈಗಿಂದೀಗ ದವಾಖಾನೆಗೆ ಸಾಗಿಸಬೇಕು. ಈ ಹೊಲಸಿನಾಗ ಜಡ್ಡು ಇನ್ನೂ ಹೆಚ್ಚುತದೆ."

ಮೂಲೆಯೊಂದರಲ್ಲಿ ಕುಳಿತುಕೊಂಡು ಯಮುನಾ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಗಂಗವ್ವನಿಗೆ ಮಾತ್ರ ಅಳು ಬಂದಿರಲಿಲ್ಲ. ಆಕೆ ಹಣೆಗೆ ಕೈಯಿಟ್ಟುಕೊಂಡು ಗಂಡನ ಕಾಲುಗಳ ಬಳಿ ಕುಳಿತಿದ್ದಳು.

"ಎಷ್ಟು ದಿನ ಆಯಿತು ಇವನಿಗೆ ಜಡ್ಡಾಗಿ?"

"ಹದಿನೈದು ಇಪ್ಪತ್ತು ದಿನ ಆಗಿರಬಹುದು ಸಾಹೇಬರೆ."

"ಅದಕ್ಕೆ ಮೊದಲು ಎಂದಾದರೂ ಎದೆನೋವು ಬಂದಿದ್ದಿತೇನು?"

"ಆವಾಗ ಆವಾಗ ಬರುತ್ತಿತ್ತುರಿ. ಒಂದೆರಡು ದಿನ ಇದ್ದು ಹೋಗುತಿತ್ತು."

"ಹಿಂದೆ ಯಾವಾಗಲಾದರೂ ಇವ ಮಳೆಗಾಳಿಯೊಳಗ ಮಲಗಿ ನರಳಿದ್ದನೇನು?"

"ಹೌದ್ರಿ. ನಮ್ಮ ಯಮುನಿ ಹುಟ್ಟುವಾಗ ನಮ್ಮ ಸೀಮಿಯೊಳಗ ಬರಗಾಲ ಬಂದಿತ್ತಲ್ಲರಿ. ಆಗ ಐದಾರು ತಿಂಗಳು ಮನೀ ಬಿಟ್ಟು ಗುಳೇ ಹೋಗಿದ್ದಿವರಿ. ಗಿಡದ ಕೆಳಗ ಸಂಸಾರ ಹೂಡಿ ಇರುವಾಗ ಒಮ್ಮಿಂದೊಮ್ಮೆ ಮಳಿ ಬಂದಿತ್ತು. ಇವ ಸಿಕ್ಕಿದ್ದ. ಆಗೂ ಎಂಟು ಹತ್ತು ದಿನಾ ಮೈಯಾಗ ಉರಿ ಬಂದಿದ್ದವು. ಎದಿನೋವು ಸುರುವಾದದ್ದು ಆವಾಗಲೇ."

"ಅದೇ ಸ್ಥಿತಿಯೊಳಗೆ ಬಂದು ಹೊಲದಾಗ ಕೆಲಸ ಮಾಡಹತ್ತಿದನೋ ಹೇಗೆ?"

"ಮಾಡಾಕಬೇಕಲ್ಲರಿ. ಎರಡು ವರ್ಷ ತಪ್ಪಿಸಿದ್ದ ಮಳಿ ಬಂದಿತ್ತಲ್ಲ.

ಭೂಮಿ ಹದಮಾಡಿ ಬಿತ್ತಬೇಕಾಗಿತ್ತಲ್ಲ. ದುಡೀದಿದ್ದರ ನಡದೀತೇನ್ರೀ ?"

"ಅಂದಿನಿಂದಲೇ ಸುರುವಾಗಿರಬೇಕು ಈ ರೋಗ ಇವನಿಗೆ," ಎಂದು ನುಡಿದು ಡಾಕ್ಟರು ಎದ್ದುನಿಂತರು. "ಆಗಲೇ ಉಪಚಾರ ಮಾಡಬೇಕಾಗಿತ್ತು. ಅಂದರೆ ಇಷ್ಟು ಸೀರಿಯಸ್ ಆಗುತ್ತಿರಲಿಲ್ಲ. ಹಳ್ಳಿಯ ಮಂದಿಯ ಹಣೆಬರಹವೇ ಇಷ್ಟು. ರೋಗ ಕೈಮೀರಿ ಹೋದಬಳಿಕ, ರೋಗಿ ಗೊಟಕ್ ಎನ್ನುವ ವೇಳೆಗೆ ನಮ್ಮನ್ನು ಹುಡುಕಿಕೊಂಡು ಬರುತಾರೆ" ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಳ್ಳುತ್ತ ಬ್ಯಾಗು ತೆಗೆದು ಸೂಜಿ ಮದ್ದಿನ ಏರ್ಪಾಡಿಗೆ ತೊಡಗಿದರು.

ಆ ರಾತ್ರಿ ಗೌಡರ ಮನೆಯಲ್ಲಿಯೆ ಡಾಕ್ಟರರ ಊಟ ವಸತಿಗಳಿಗೆ ಏರ್ಪಾಡಾಗಿದ್ದಿತು.

ಊಟ ಮುಗಿಸಿ ಡಾಕ್ಟರರೂ ಗೌಡರೂ ಪಡಸಾಲೆಯಲ್ಲಿ ಮಾತನಾಡುತ್ತ ಕುಳಿತರು.

"ಹೊಳೆಪ್ಪಗ ನೆಟ್ಟಗಾಗಬಹುದೇನ್ರೀ ಡಾಕತಾರ ಸಾಹೇಬರೇ ?"

"ಇಲ್ಲಿಯೇ ಇಟ್ಟರೆ ಏನೂ ಆಸೆಯಿಲ್ಲ ಗೌಡರೇ. ಈ ಊರಿನ ಹವೆಯೊಳಗೆ ಈ ರೋಗ ಹೆಚ್ಚಾಗುತದೆ. ಒಣ ಹವೆಯ ಜಾಗಕ್ಕೆ ಸಾಗಿಸಿದರೆ ಬದುಕಿಕೊಂಡಾನು."

"ಅದೆಲ್ಲಾ ಅವರಿಗೆ ಹೆಂಗ ಸಾಧಿಸೀತರಿ ? ಕೂಲಿ ಮಾಡಿ ದುಡಿದು ತಿನ್ನುವ ಮಂದಿ. ಬ್ಯಾರೆ ಊರಾಗ ಹೋಗಿ ಇರುವ ಖರ್ಚು ಹೆಂಗ ಪೂರೈಸಬೇಕು ?"

"ಹಾಗಿದ್ದರ ಅವನ ಆಸೆ ಬಿಟ್ಟ ಹಾಗೇ ಅನ್ನಬಹುದು."

"ಏನು, ಅವ ಸತ್ತೇ ಹೋಗುವನೋ ಏನು ?"

"ಈಗಲೇ ಸಾಯಲಿಕ್ಕಿಲ್ಲ. ಹೀಗೇ ಹಾಸಿಗೆ ಹಿಡಿದು ಸೊರಗಿ ಕ್ಷೀಣವಾಗಿ ಸಾಯುತ್ತಾನೆ."

"ಅಂತೂ ಇನ್ನೂ ತಿಂಗಳೊಪ್ಪತ್ತು ಬದುಕಿಯಾನು ಅನ್ನಿರಿ."

"ತಿಂಗಳೊಪ್ಪತ್ತು ಬದುಕಿಯಾನು, ಇಲ್ಲ ವರ್ಷಗಟ್ಟಲೆ ಬದುಕಿಯಾನು, ಇಲ್ಲ ನಾಳೆಯೇ ಸತ್ತಾನು. ಈ ರೋಗದಲ್ಲಿ ಯಾವುದೂ ಹೀಗೇ ಅಂತ ನಿಶ್ಚಿತ ಇಲ್ಲ. ಬಹಳ ಭಯಂಕರ ರೋಗ ಇದು."

"ಹಂಗಾದರೆ ಬಹಳ ತ್ರಾಸ ಆಗುತ್ತೈತಿ ಅನ್ನಿರಿ ಅವಗ. ಅಗಸುದ್ದೆ ಅಂತೂ ಕೊಟ್ಟು ಹೋಗುತೀರಲ್ಲ ?"

"ನಾಳೆ ಹೋಗುವಾಗ ಇನ್ನೊಂದು ಇಂಜಕ್ಶನ್ ಕೊಡುತೀನಿ. ಮತ್ತೆ ಕೊಡಬೇಕಾದರ ಎರಡು ದಿನಕ್ಕೊಮ್ಮೆ ನಾನೇ ಇಲ್ಲಿಗೆ ಬರಬೇಕಾಗುತ್ತದೆ."

"ಕುಡೀಲಾಕ ಅಗಸುದ್ದೆ ಕೊಟ್ಟು ಹೋದರ ಆದೀತಲ್ಲರಿ ?"

"ಊರಿಗೆ ಹೋಗಿ ಕಳಿಸಿ ಕೊಡಬಹುದು. ಆದರೆ ಅದರಿಂದ ಅಂಥ ಉಪಯೋಗವೇನೂ ಆಗುವದಿಲ್ಲ. ಈ ರೋಗಕ್ಕೆ ಇಂಜಕ್ಶನ್ನೇ ಸರಿಯಾದ ಉಪಾಯ."

"ಒಂದು ಇಂಜಕ್ಶನ್ನಿಗೆಷ್ಟು ಖರ್ಚ ಬರುತ್ತೈತಿರಿ ಡಾಕತಾರಸಾಬರೇ?"

"ಟ್ಯೂಬಿನ ಖರ್ಚು ಹತ್ತು ರೂಪಾಯಿ, ಫೀ ಹತ್ತು ರೂಪಾಯಿ. ಹೋಗಿ ಬರುವ ಗಾಡಿಯ ಖರ್ಚು, ಇತ್ತ ಬರುವದರಿಂದ ಅತ್ತ ಹಾಳಾಗುವ ನನ್ನ ಪ್ರಾಕ್ಟೀಸಿನ ಖರ್ಚ—ಅಂತೂ ಎಲ್ಲಾ ಸೇರಿ ಐವತ್ತು ರೂಪಾಯಿ ಆಗುತ್ತದೆ."

ಮಾರನೆಯ ದಿನ ಸಾಯಂಕಾಲದ ವರೆಗೆ ಅಲ್ಲಿಯೇ ಇದ್ದು, ಮತ್ತೆರಡು ಇಂಜಕ್ಶನ್ ಕೊಟ್ಟು, ಕಾಡೇಶಿ ಕೊಟ್ಟ ರೂಪಾಯಿಗಳನ್ನು ಜೇಬಿಗೆ ಸೇರಿಸಿ ಕೊಂಡು ಡಾಕ್ಟರು ರಾತ್ರಿಯ ರೈಲಿಗೆ ಹೊರಟು ಹೋದರು.

ಡಾಕ್ಟರರು ಕೊಟ್ಟ ನಾಲ್ಕು ಇಂಜಕ್ಶನ್ನುಗಳಿಂದಾಗಿ ಹೊಳೆಪ್ಪ ಕೊಂಚ ಚೇತರಿಸಿಕೊಂಡಿದ್ದ. ಮೈಮೇಲೆ ಪ್ರಜ್ಞೆಯು ಬಂದಿದ್ದಿತು. ಜ್ವರವೂ ಕೊಂಚ ಇಳಿದಿದ್ದಿತು. ಕೆಮ್ಮಿದಾಗ ರಕ್ತ ಬೀಳುವುದೂ ಕಡಮೆಯಾಗಿದ್ದಿತು.

ಮುಂದೆ, ದಿನ ಕಳೆದಂತೆ ಆತನ ಎದೆನೋವು ಕಡಮೆಯಾಗುತ್ತ ಬಂದಿತಾದರೂ ಜ್ವರಬರುವುದು ನಿಲ್ಲಲಿಲ್ಲ. ಪ್ರತಿದಿನವೂ ಸಾಯಂಕಾಲದಹೊತ್ತಿಗೆ ಮೈ ಜ್ವರದಿಂದ ಕಾಯುತ್ತಿದ್ದಿತು. ಹೊಳೆಪ್ಪ ಹಾಸುಗೆ ಬಿಟ್ಟು ಮೇಲಕ್ಕೇಳಲಾಗಲಿಲ್ಲ. ಆತನನ್ನು ಮನೆಯಲ್ಲಿಯೇ ಬಿಟ್ಟು ಗಂಗವ್ವ, ಯಮುನಾ ಇಬ್ಬರೂ ಹೊಲದ ಕೆಲಸಕ್ಕೆ ಹೋಗತೊಡಗಿದರು.

ರೋಗಿಯಾದ ಹೊಳೆಪ್ಪ ಜೋಳದ ರೊಟ್ಟಿಯನ್ನಾಗಲಿ, ನುಚ್ಚನ್ನಾಗಲಿ ತಿಂದು ಪಚನ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅವನಿಗಾಗಿ ವಾರವಾರವೂ ಸಂತೆಯಿಂದ ಬಿಳಿ ಅಕ್ಕಿ ಕೊಂಡು ತರುವುದು ಅಗತ್ಯವಾಯಿತು. ಅದಕ್ಕಾಗಿ

ಹಣವನ್ನೆಲ್ಲಿಂದ ತರಬೇಕು-ಎಂಬುದೂ ಒಂದು ಸಮಸ್ಯೆಯಾಯಿತು ಗಂಗವ್ವನಿಗೆ. ಎಮ್ಮೆಯ ಬೆಣ್ಣೆ ಮಾರಿ ಆದರಿಂದ ಬರುವ ಹಣವಲ್ಲಿ ಎಣ್ಣೆ, ಉಪ್ಪು ಮೊದಲಾದ ಜೀವನಾವಶ್ಯಕ ವಸ್ತುಗಳನ್ನು ಆಕೆ ಕೊಂಡು ತರುತ್ತಿದ್ದಳು. ಬಿಳಿ ಅಕ್ಕಿಯನ್ನು ಕೊಳ್ಳುವ ಸಂದರ್ಭ ಅದುವರೆಗೂ ಅವರಿಗೆ ಬಂದಿರಲಿಲ್ಲ. ಈಗ ಏನಾದರೂ ಮಾಡಿ ಅಕ್ಕಿ ತರಲೇಬೇಕಾಗಿದ್ದಿತು.

"ಹೆಂಗ ಮಾಡೂಣು? ಅಕ್ಕಿಯಂತೂ ಬೇಕೇಬೇಕು. ರೊಕ್ಕ?" ಎಂದು ಒಂದು ದಿನ ಆಕೆ ಗಂಡನ ಹತ್ತಿರ ಆ ವಿಷಯ ಪ್ರಸ್ತಾಪಿಸಿದಳು.

"ಅಕ್ಕಿಯ ಅನ್ನ ಜನುಮದಾಗs ಉಂಡಿಲ್ಲ ನಾ. ಈಗಾದರೂ ಯಾಕ ಅದರ ಸಡಗರಾ? ಏನೂ ಬ್ಯಾಡ ಬಿಡು ಗಂಗೀ. ಜೋಳದ ಗಂಜೀ ಕುಡಿದು ಬೀಳುತೀನಿ. ಇಂದೋ ನಾಳೆಯೊ ಹೋಗುವ ಈ ಜೀವಕ ಇದೆಲ್ಲಾ ಯಾಕ?" ಎಂದ ಹೊಳೆಪ್ಪ

"ಹೆಂಗೆಲ್ಲಾ ಮಾತಾಡಬ್ಯಾಡ ನೀ. ನಿನಗ ನೆಟ್ಟಗಾಗತೈತಿ ಅಂತ ದಾಕತಾರಸಾಬ ಹೇಳಿ ಹೋಗಿದಾನ. ನೆಟ್ಟಗ ಪಥ್ಯೆ ಮಾಡಬೇಕಂತ. ಮೈಯಾಗ ಉರಿ ಬಂದಿರುವಾಗ ಗಂಟಲಾಗ ರೊಟ್ಟಿ ಇಳಿದೀತು ಹ್ಯಾಂಗ? ಏನಾರೆ ಮಾಡಿ ಅಕ್ಕಿಗೆ ರೊಕ್ಕ ಕೂಡಿಸಾಕ ಬೇಕು. ಎಮ್ಮೀ ಮಾರಿ ಬಿಡೂಣೇನು?"

"ಛೀ ಹುಚ್ಚೀ. ಅದನ್ನ ಮಾರಿ ಮುಂದ ಸಂತಿಯ ಖರ್ಚಿಗೆ ಹೆಂಗ ಮಾಡಾಕಿ? ಅದೊಂದು ಎಮ್ಮಿ ಐತಿ ಅಂತ ಉಪ್ಪು ಎಣ್ಣಿ ಆದರೂ ಆಗುತೈತಿ. ಮೊನ್ನೆ ನನಗ ಹೇಳದ ಕೇಳದ ಸಾಲಮಾಡಿ ದಾಕತಾರನ್ನ ಕರಿಸಿದಿ. ಆದರಿಂದ ಏನ ಉಪಯೋಗ ಆತು? ನೆಟ್ಟಗಾಗಬೇಕಂತ ನನ್ನ ಹಣ್ಯಾಗ ಬರದಿದ್ದರ ನೆಟ್ಟಗಾಗೂದು ತಪ್ಪೂದಿಲ್ಲ. ಸುಮ್ಮನ ಅಕ್ಕಿಗಿಕ್ಕಿ ಅಂತ ಹುಚ್ಚು ತಲ್ಯಾಗ ಹಾಕ್ಕೊಂಡು ಇದ್ದದ್ದೆಲ್ಲಾ ಕಳಕೊಂಡು ಕೂಡ್ರಬ್ಯಾಡ. ಒಮ್ಮಿಂದೊಮ್ಮೆಲೆ ನನಗೇನಾದರೂ ಆದರ ನೀ ಒಬ್ಬಾಕೇ ಏನ ಮಾಡಾಕಿ? ಆ ಸಾಲಾ ಹ್ಯಾಂಗ ತೀರಿಸುವಾಕಿ? ಇದ್ದೊಬ್ಬ ಮಗಳ ಬಾಳೀವು ಹೆಂಗಾತು. ಆಕೀನ ಏನು ಮಾಡುವಾಕಿ?"

ಎಮ್ಮೆ ಮಾರುವುದು ಬೇಡವೆಂದು ಗಂಡ ಹೇಳಿದುದರಿಂದ ಗಂಗವ್ವ ಎರಡು ದಿನ ಸುಮ್ಮನಿದ್ದಳು. ಜೋಳದ ಹಿಟ್ಟಿನ ಗಂಜಿಯೂ ಆತನ ಗಂಟ

ಲಲ್ಲಿ ಇಳಿಯದಂತಾದಾಗ ಮಾತ್ರ ಆಕೆಯ ಜೀವ ತಡೆಯದಾಯಿತು.

ಮಂಗಳವಾರ ನೆರೆಯೂರ ಸಂತೆ. ಅಂದು ಬೆಳಿಗ್ಗೆ ಎಮ್ಮೆಯನ್ನು ಹೊಡೆದುಕೊಂಡು ಹೊರಕ್ಕೆ ಹೊರಟ ಗಂಗವ್ವ ನೇರವಾಗಿ ಸಂತೆಗೆ ಹೋಗಿ ಅದನ್ನು ಮಾರಾಟ ಮಾಡಿದಳು. ಸಾಯಂಕಾಲ ಹಳ್ಳಿಗೆ ಮರಳುವಾಗ ಐದು ರೂಪಾಯಿಗಳ ಅಕ್ಕಿಯನ್ನೂ ಸಕ್ಕರೆಯನ್ನೂ ಕೊಂಡು ತಂದಳು.

ಆಕೆ ಮನೆಯಲ್ಲಿ ಅಡಿಯಿರಿಸಿದಾಗ ನಸುಗತ್ತಲಾಗುತ್ತ ಬಂದಿದ್ದಿತು ಹೊಲದಿಂದ ಆಗ ತಾನೆ ಬಂದಿದ್ದ ಯಮುನಾ ಚಿಮಣಿದೀಪ ಹೊತ್ತಿಸುತ್ತಿದ್ದಳು.

ತಲೆಯ ಮೇಲೊಂದು ಗಂಟು ಹೊತ್ತುಕೊಂಡು ಒಬ್ಬಳೇ ಬಂದ ಹೆಂಡತಿಯನ್ನು ಕಂಡೊಡನೆಯೇ ಹೊಳೆಪ್ಪನಿಗೆ ನಡೆದುದೆಲ್ಲವೂ ತಿಳಿದು ಬಂದಿತು. " ಕಡೆಗೂ ಎಮ್ಮಿ ಮಾರೇ ಬಿಟ್ಟೆಯಾ ? " ಎಂದಿಷ್ಟೆ ನುಡಿದು ಆತ ಮುಖವನ್ನು ಗೋಡೆಯ ಕಡೆಗೆ ತಿರುಗಿಸಿದ. ಆತನ ಕಣ್ಣುಗಳಲ್ಲಿ ನೀರು ಚಿಮ್ಮಿ ಬಂದಿದ್ದಿತು.

ಗಂಗವ್ವ ಮಾತನೇನೂ ಆಡದೆ, ಒಲೆ ಹೊತ್ತಿಸಿ ಅನ್ನ ಬೇಯಿಸಿದಳು. ಗೌಡರ ಮನೆಗೆ ಹೋಗಿ ಉಪ್ಪಿನಕಾಯಿ ಬೇಡಿ ತಂದಳು.

ಅನೇಕ ದಿನಗಳಿಂದ ಆಹಾರವೇ ಇಳಿದಿರಲಿಲ್ಲ ಹೊಳೆಪ್ಪನ ಗಂಟಲಲ್ಲಿ. ಅಂದು ಅನ್ನದ ವಾಸನೆ ಬರುತ್ತಲೂ ಆತನಿಗೆ ತುಂಬ ಹಸಿವೆಯಾದ ಹಾಗಾಗಿದ್ದಿತು. ಹರಿವಾಣದಲ್ಲಿ ಅನ್ನ ಬಡಿಸಿ, ಉಪ್ಪಿನಕಾಯಿ ಹೋಳು ಇಟ್ಟು ಗಂಗವ್ವ ಅವನನ್ನೆಬ್ಬಿಸಿದಳು. ಕೈ ಬಾಯಿ ತೊಳೆದುಕೊಂಡು ಹೊಳೆಪ್ಪ ಮೊದಲನೆಯ ತುತ್ತು ಬಾಯಿಗಿಟ್ಟುಕೊಂಡ. ಹಠಾತ್ತಾಗಿ ಆತನಿಗೆ ತನ್ನ ಎಮ್ಮೆಯ ನೆನಪಾಯಿತು. ಅನೇಕ ವರ್ಷಗಳಿಂದ ತಮ್ಮ ಮನೆಗೆ ಹೈನವನ್ನೊದಗಿಸಿದುದಲ್ಲದೆ ವಾರವಾರದ ಸಂತೆಯ ಖರ್ಚನ್ನೂ ನೀಗಿಸಿದ ಆ ಮೂಕ ಜೀವ ಇಂದು ಇಲ್ಲ.... ಅದರ ಮಾರಾಟದಿಂದ ಕೊಂಡು ತಂದ ಈ ಅಕ್ಕಿ.... ಈ ಅನ್ನ.... ಆತನ ಕತ್ತು ಬಿಗಿದು ಬಂದಿತು. ತುತ್ತು ಗಂಟಲಲ್ಲಿಳಿಯಲಿಲ್ಲ.

" ಅನ್ನವೂ ಹೋಗುವದಿಲ್ಲ ಗಂಗೀ. ನೀರು ಕೊಡು " ಎಂದು ನುಡಿದು ಹೊಳೆಪ್ಪ ಬಾಯಲ್ಲಿನ ತುತ್ತನ್ನು ಕೈಗೆ ತೆಗೆದುಕೊಂಡು ನೆಲಕ್ಕಿಟ್ಟು ನೀರು ಕುಡಿದು ಮಲಗಿಕೊಂಡ.

" ಒಂದಿಷ್ಟಾದರೂ ಉಣ್ಣೋ ಅಪ್ಪಾ " ಎನ್ನುತ್ತ ಅಳತೊಡಗಿದಳು ಯಮುನಾ. "

ಅಂದು ಗಂಗಪ್ಪನಿಗೂ ಊಟ ಮಾಡಲಾಗಲಿಲ್ಲ.

ಮೂವರೂ ಉಪವಾಸ ಮಲಗಿಕೊಂಡರು.

## ತೆರೆ: ಎಂಟು.

ಚೈತ್ರಮಾಸದಲ್ಲಿ ಯಮುನಾ ಋತುಮತಿಯಾದಳು.

" ಹುಡುಗಿ ದೊಡ್ಡಾಕಿಯಾದಳು. ಇಲ್ಲಿಯ ತನಕ ಬಿಟ್ಹಾಂಗ ಇನ್ನು ಮ್ಯಾಲ ಆಕೀನ್ನ ಹೊರಗ ಬಿಡಾಕ ಬರೂದಿಲ್ಲ. ಅವಳ ಬಾಳೇವು ಹಿಂಗಾತು. ಮುಂದ ಹೆಂಗ ಮಾಡೋದು ? " ಎಂದು ಆತ ದಿನವೂ ಬಡಬಡಿಸ ತೊಡಗಿದ.

ಆ ಚಿಂತೆ ಗಂಗವ್ವನ ಮನಸ್ಸನ್ನು ಒಳಗೊಳಗೇ ಕೊರೆಯುತ್ತಿದ್ದಿತಾದರೂ ಆಕೆ ಅದನ್ನು ಹೊರಗೆ ತೋರಲಿಲ್ಲ. ಗಂಡ ಆ ವಿಷಯ ತೆಗೆದಾಗಲೆಲ್ಲ ಧೈರ್ಯದ ಮಾತುಗಳನ್ನಾಡಿ ಆತನನ್ನು ಸಮಾಧಾನ ಪಡಿಸಲು ಪ್ರಯತ್ನಿಸುವಳು.

" ದೊಡ್ಡಾಕೆಯಾದರೇನಾಯಿತು ? ಇಷ್ಟ್ಯಾಕೆ ಗಾಬರಿಯಾಗುತೀ ? ಇಂದಿಲ್ಲ ನಾಳೆ ಏನಾರೆ ಮಾಡಾಕ ಬಂದೀತು. ಮೊದಲು ನಿನ್ನ ಜಡ್ಡೊಂದು ನೆಟ್ಟಗಾಗಲಿ. ಆ ಮ್ಯಾಲ ಯಮುನಿಗೆ ಇನ್ನೊಬ್ಬ ಗಂಡನ್ನ ಹುಡುಕೋಣಂತೆ. "

" ಆಕಿಯ ಗಂಡ ಇನ್ನೂ ಇರುವಾಗ ಬ್ಯಾರೆ ಯಾರು ಬರುತಾರೇ ಆಕೀನ್ನ ಮಾಡಿಕೊಳ್ಳಾಕ ? "

" ಏನಾರೆ ಮಾಡಿ ಅವನಿಂದ ಸೋಡಚೀಟೀ ತಗೋಬೇಕು. "

" ಅದೆಲ್ಲಾ ಖರೆ. ಆದರs ಅವ ಕೊಡಾಕ ತಯಾರಾಗಬೇಕಲ್ಲ ? "

" ಯಾರಿಂದಾದರೂ ಹೇಳಿನೋಡಿಸಬೇಕು. "

" ಅಂಥವರು ಯಾರಿದಾರ ? "

" ಕಾಡೇಶಿಯನ್ನ ಕಳಿಸುವ ಹಂಗ ಗೌಡರಿಗೆ ಕೇಳಿ ನೋಡಲೇನು? "

"ಇಂಥ ಕೆಲಸಕ್ಕೆಲ್ಲಾ ಅವ ಯಾಕೆ ಹೋದಾನು ? ಅವಂದೇನು ನಮಗ ನಂಟೋ ಗಂಟೋ, ಏನೈತಿ ಸಂಬಂಧ ? "

"ಕೇಳಿ ನೋಡುತೀನಿ" ಎಂದು ನುಡಿದು ಗಂಗವ್ವ ಸುಮ್ಮನಾದಳು. ಹೊಳೆಪ್ಪನಿಗೆ ಮಾತ್ರ ಆ ಬಗೆಗೆ ಯಾವ ಆಸೆಯೂ ಇರಲಿಲ್ಲ. ತಮ್ಮ ಏಕ ಮಾತ್ರ ಮಗಳ ಬಾಳುವೆ ಹಾಳಾಯಿತಲ್ಲ, ತನ್ನ ಹೆಂಡತಿಯ ತಪ್ಪಿನಿಂದಾಗಿಯೆ ಹಾಳಾಯಿತಲ್ಲ—ಎಂದು ಆತ ಒಳಗೊಳಗೇ ಕೊರಗತೊಡಗಿದ. ಕಾಯಿಲೆಯ ಕೊರೆತ, ಚಿಂತೆಯ ಕೊರೆತ ಎರಡೂ ಸೇರಿ ಆತನ ದೇಹ ದಿನೇ ದಿನೇ ದುರ್ಬಲವಾಗುತ್ತ ಬಂದಿತು. ಮೈಮೇಲೆಲ್ಲ ಮೂಳೆಗಳು ಎದ್ದು ಕಾಣಿಸತೊಡಗಿದವು. ಹಾಸುಗೆಯ ಮೇಲೆ ಎದ್ದು ಕುಳಿತುಕೊಳ್ಳುವಷ್ಟು ತ್ರಾಣವೂ ಇಲ್ಲದಂತಾಯಿತು.

## ತೆರೆ: ಒಂಬತ್ತು.

ಗೌಡರ ಕಬ್ಬಿನ ಗಾಣಕ್ಕಾರಂಭವಾಗಿದ್ದಿತು.

ತೋಟದ ಹತ್ತಿರವೇ ದೊಡ್ಡ ಆಲೀಮನೆ ಕಟ್ಟಿ, ಕೊಪ್ಪರಿಗೆಯನ್ನೂ ಅಣಿಗೊಳಿಸಲಾಗಿದ್ದಿತು. ಅದರ ಎದುರಿಗೇ ಗಾಣ.

ಕಬ್ಬಿನ ಪಡದಲ್ಲಿ ಕಬ್ಬು ಕಡಿದು ರವದೆ ಸವರಿ ಹೊರೆ ಕಟ್ಟುವ ಕೆಲಸದಲ್ಲಿ ನಿರತನಾಗಿದ್ದ ರಾಮು. ಅವನ ಜೊತೆಗೆ ಎಂಟು ಹತ್ತು ಜನ ಗಂಡಾಳುಗಳು ದುಡಿಯುತ್ತಿದ್ದರು. ಅವರು ಕಡಿದು ಕೂಡಿಸಿದ ಹೊರೆ ಹೊತ್ತುಕೊಂಡು ಗಾಣದ ಹತ್ತಿರ ತಂದೊಗೆಯುವ ಕೆಲಸವನ್ನು ನಾಲ್ಕೈದು ಜನ ಹೆಣ್ಣಾಳುಗಳು ಮಾಡುತ್ತಿದ್ದರು. ಅವರಲ್ಲಿ ಯಮುನಳೂ ಒಬ್ಬಳಾಗಿದ್ದಳು.

ರಾಮುನೀಗ ಹದಿನೆಂಟು ವರ್ಷದ ಯುವಕ. ಜಟ್ಟಿಯಂತೆ ಬೆಳೆದಿದ್ದಾನೆ. ಮುಖದ ಮೇಲೆ ಗಡ್ಡಮೀಸೆಗಳೂ ಚಿಗುರುತ್ತಿವೆ. ದನಕಾಯುವ ಹುಡುಗನಿದ್ದಾಗ ಆತ ಒಂದು ಕಪಾಟಿ ( ಲಂಗೋಟಿ ) ಯನ್ನು ಮಾತ್ರ ಧರಿಸುತ್ತಿದ್ದ. ಇದೀಗ ಧೋತರ ಉಡುತ್ತಾನೆ. ಮೈಮೇಲೊಂದು ಅಂಗಿ. ತಲೆಗೆ ಹಳದಿ ಬಣ್ಣದ ರುಮಾಲು ಸುತ್ತುತ್ತಾನೆ.

ಕುಡಗೋಲನ್ನು ಬಲಗೈಯಲ್ಲಿ ಹಿಡಿದುಕೊಂಡು ಆತ ಕಬ್ಬು ಕಡಿಯು

ತ್ತಿದ್ದ ಹಾಗೆ ಆತನನ್ನೇ ದಿಟ್ಟಿಸುತ್ತ ಯಮುನಾ ಒಂದೆರಡು ಕ್ಷಣ ಹಾಗೆಯೆ ನಿಂತಿರುತ್ತಾಳೆ. ಆತನ ದೃಷ್ಟಿಯೂ ಆಗಾಗ ಆಕೆಯ ಕಡೆಗೆ ಹೊರಳುತ್ತದೆ. ಯಮುನಾ ಈಗ ಬಾಲಕಿಯಲ್ಲ ಯೌವನದಲ್ಲಿ ಅಡಿಯಿಡುತ್ತಿರುವ ಹುಡುಗಿ. ವಯಸ್ಸಿನೊಂದಿಗೆ ಆಕೆಯ ದೇಹವೂ ಬೆಳೆದಿದೆ. ಮೈ, ಕೈ, ಮುಖ, ಎದೆ ಎಲ್ಲವೂ ತುಂಬಿಕೊಂಡಿದೆ. ಕೆನ್ನೆಗಳ ಮೇಲೆ ತಾರುಣ್ಯದ ಬಣ್ಣ ಬಂದಿದೆ. ಕಣ್ಣುಗಳಲ್ಲಿ ಮೋಹಕವಾದ ಮಿಂಚು. ಕಬ್ಬನ್ನು ಕೈಯಲ್ಲಿ ಹಿಡಿದು ಅಧರ ರವದೆಯನ್ನು ಸವರುತ್ತ ರಾಮು ಎವೆ ಪಿಳುಕಿಸದೆ ಅವಳನ್ನು ದಿಟ್ಟಿಸುತ್ತಾನೆ. ಆಕೆ ನಾಚಿಕೊಂಡ ಹಾಗೆ ನಟಿಸಿ, ಕಬ್ಬುಗಳನ್ನು ಒಟ್ಟುಗೂಡಿಸುವುದರಲ್ಲಿ ತೊಡಗುತ್ತಾಳೆ. ಹೊರೆಯನ್ನು ಅವಳ ತಲೆಯ ಮೇಲೆ ಹೊರಿಸುವಾಗ ರಾಮುನ ಕೈ ಅವಳ ಕೆನ್ನೆಗಳನ್ನು ಸ್ಪರ್ಶಿಸುತ್ತವೆ. ಇಬ್ಬರ ದೇಹಗಳು ಹತ್ತಿರ ಬರುತ್ತವೆ. ಇಬ್ಬರಿಗೂ ರೋಮಾಂಚವೇಳುತ್ತದೆ. ಆತನ ತುಟಿಗಳ ಮೇಲೆ ಆನಂದದ ನಗೆ ಸುಳಿಯುತ್ತದೆ. ಆಕೆ ಕಣ್ಣುಗಳ ಮಾಲೆಗಳಿಂದ ಆತನನ್ನು ದಿಟ್ಟಿಸುತ್ತ ಹೊರೆ ಹೊತ್ತುಕೊಂಡು ಹೋಗುತ್ತಾಳೆ.

ಮಧ್ಯೆ ಮಧ್ಯೆ ದಣುವಾರಿಸಿಕೊಳ್ಳಲೆಂದು ಆಳುಗಳೆಲ್ಲರು ಎಲೆ ಅಡಿಕೆ ತಂಬಾಕು ಮೆಲ್ಲುತ್ತ ಕುಳಿತುಕೊಳ್ಳುತ್ತಾರೆ. ರಾಮುನಿಂದ ಕೊಂಚ ದೂರದಲ್ಲಿ ಯಮುನಳೂ ಕುಳಿತುಕೊಂಡು ಆತ ನೀಡಿದ ಎಲೆ ಅಡಿಕೆ ತೆಗೆದುಕೊಂಡು ಬಾಯಿಗಿಟ್ಟುಕೊಳ್ಳುತ್ತಾಳೆ. ಆಳುಗಳು ಯಾವುಯಾವೋ ವಿಚಾರ ಮಾತಿಗೆ ತೊಡಗುತ್ತಾರೆ. ಆ ಸಂಭಾಷಣೆಯಲ್ಲಿ ಯಮುನಳಾಗಲಿ ರಾಮುನಾಗಲಿ ಭಾಗ ವಹಿಸುವುದಿಲ್ಲ. ಆತ ಬೀಡಿ ಸೇದಿ ಹೊಗೆ ಬಿಡುತ್ತ ಆಕೆಯನ್ನೇ ದಿಟ್ಟಿಸುತ್ತಿರುತ್ತಾನೆ. ಆಕೆ ತಾಂಬೂಲವನ್ನು ಮೆಲ್ಲುತ್ತ ಆತನನ್ನು ಓರೆಗಣ್ಣು ಗಳಿಂದ ದಿಟ್ಟಿಸುತ್ತಿರುತ್ತಾಳೆ.

ಮಾತನಾಡಬೇಕೆಂಬ ಬಯಕೆ ಇಬ್ಬರಿಗೂ ಇದೆಯಾದರೂ ಆಳುಗ ಳೆಲ್ಲರೆದುರಿಗೆ ಅವರೇನನ್ನೂ ಮಾತನಾಡುವಂತಿಲ್ಲ. ಅನೇಕ ದಿನಗಳಿಂದ ಏಕಾಂತದಲ್ಲಿ ಸಂಧಿಸುವ ಸಂದರ್ಭ ಅವರಿಗೆ ದೊರೆತಿಲ್ಲ. ಇಬ್ಬರೂ ಪರ ಸ್ಪರರೊಂದಿಗೆ ಮಾತನಾಡಬೇಕಾದ ವಿಷಯಗಳೆಷ್ಟೋ ಇವೆ. ಆದರೆ ಅದಕ್ಕೆ ತಕ್ಕ ಅವಕಾಶವೇ ಲಭಿಸಿಲ್ಲ.

# ತೆರೆ: ಹತ್ತು.

ಗೌಡರ ಗಾಣವೆಂದರೆ ಸಣ್ಣ ಗಾಣವೇನೂ ಅಲ್ಲ. ಆರು ಎಕರೆಗಳಷ್ಟು ಭೂಮಿಯಲ್ಲಿ ಅವರು ಕಬ್ಬು ಬೆಳೆಯುತ್ತಾರೆ. ಹತ್ತು ಹನ್ನೆರಡು ದಿನಗಳ ವರೆಗೆ ಗಾಣ ನಡೆದೇ ಇರುತ್ತದೆ. ಮಧ್ಯಾಹ್ನದ ಹೊತ್ತಿನಲ್ಲಿ ಮೂರು ತಾಸಿನ ವಿರಾಮವನ್ನು ಬಿಟ್ಟರೆ ಹಗಲು ರಾತ್ರಿಯೆಲ್ಲ ಗಾಣ ನಡೆದೇ ಇರುತ್ತದೆ. ಸರದಿಯ ಪ್ರಕಾರ ಗಾಣವನ್ನೆಳೆಯಲು ಹತ್ತು ಜತೆ ಎತ್ತುಗಳು ಯಾವಾಗಲೂ ಸಿದ್ಧವಾಗಿರುತ್ತವೆ. ರಾತ್ರಿ ಕಾಲದಲ್ಲಿ ಗ್ಯಾಸ್ ದೀಪದ ಬೆಳಕಿನಲ್ಲಿ ಗಾಣ ತಿರುಗುತ್ತದೆ.

ಗಾಣಕ್ಕಾರಂಭವಾದಂದಿನಿಂದ ಅದು ಮುಗಿಯುವ ವರೆಗೂ ಗೌಡರಿಗೆ ವಿಶ್ರಾಂತಿ ದೊರೆಯುವುದಿಲ್ಲ. ಕೆಲಸವೆಲ್ಲವನ್ನೂ ಆಳುಗಳೇ ಮಾಡುವರಾದರೂ ಮೇಲ್ವಿಚಾರಣೆಗಾಗಿ ಗೌಡರು ಅಲ್ಲಿ ಇರಲೇಬೇಕು. ಕಬ್ಬು ಕಡಿಯುವವರ ಹತ್ತಿರ ಹೋಗಿ ಅವರಿಗೆ ಸಲಹೆ ಸೂಚನೆ ಕೊಡುವರು. ಹೊರೆ ಹೊತ್ತು ತರುವ ಹೆಣ್ಣಾಳುಗಳಿಗೂ ಒಂದೆರಡು ಮಾತು ಹೇಳುವರು. "ಹೊರಿ ಇಳಿಸುವಾಗ ಮೆಲ್ಲಗ ಇಳಿಸಿರಿ. ದೊಪ್ಪಂತ ಒಗೆದರ ಕಬ್ಬು ಕೆಡತಾವ." ಕಬ್ಬಿಣದ ಗಾಣದ ಹತ್ತಿರ ಕುಳಿತುಕೊಂಡು ಗಾಣದ ಬಾಯಿಗೆ ಕಬ್ಬು ಸೇರಿಸುವ ಆಳನ್ನು ಕುರಿತು— "ಹಾಂಗೆಲ್ಲ ಹುಂಬನಾಂಗ ತುರುಕಬ್ಯಾಡೋ. ನಿನ್ನ ಬಾಯಿಯೊಳಗ ಯಾರಾದರೂ ಹಾಂಗ ಕಬ್ಬು ತುರುಕಿದರೆ ನಿನ್ನ ಗತಿ ಏನಾದೀತು? ಮೆಲ್ಲಕs ಹಾಕಲ್ಲ? ಯಂತ್ರ ಕೆಟ್ಟು ಗಾಣ ನಿಂತೀತು." ಎಂದು ಹೇಳುವರು. ಗಾಣವನ್ನೆಳೆಯುವ ಎತ್ತುಗಳನ್ನು ಹೊಡೆಯುವ ಹುಡುಗರನ್ನು ಗದರಿಸಿ, "ಬಹಾಳ ಜೋರಾಗಿ ಓಡಿಸಬ್ಯಾಡಿರೋ. ಹಾಲು ನೆಟ್ಟಗ ಬರುವದಿಲ್ಲ." ಎಂದು ಹೇಳುವರು. ಕಬ್ಬಿನ ಹಾಲು ಸೋಸಿ, ಕೊಪ್ಪರಿಗೆಗೆ ತುಂಬುತ್ತಿರುವ ಆಳುಗಳನ್ನು ಕಂಡು— "ಸ್ವಲ್ಪ ತಡಾ ಆದರೂ ಚಿಂತಿಲ್ಲ. ಕಸರು ಉಳೀದಾಂಗ ಸೋಸಿರೋ. ಒಂದಿಷ್ಟೂ ಕರ್ರಗಾಗಿರಬಾರದು ನಮ್ಮ ಬೆಲ್ಲ. ಸಕ್ಕರಿ, ಸಕ್ಕರಿ ಆದಾಂಗ ಆಗಬೇಕು" ಎನ್ನುವರು. ಕೊಪ್ಪರಿಗೆಯ ಕೆಳಗಿನ ಒಲೆಗೆ ಉರಿ ಹಚ್ಚುವ ಆಳುಗಳನ್ನು ಕೂಗಿ— "ಸಿಕ್ಕ ಸಿಕ್ಕಂಗ ಕಟ್ಟಿಗೀ ತುರುಕಬ್ಯಾಡಿರಿ. ಎಷ್ಟು ಬೇಕೋ ಅಷ್ಟs ಉರಿ ಇರಬೇಕು.

ಹಸೀ ಸೊಪ್ಪಿ ಹಾಕಬ್ಯಾಡಿರಿ. ಹೊಗೆ ಆಗಬಾರದು, ” ಎಂದು ಸೂಚಿಸುವರು.

ಹಾಲು ಕುದಿದಬಳಿಕ, ಕೊಪ್ಪರಿಗೆಯನ್ನಿಳಿಸಿ ಬೆಲ್ಲ ಮಾಡುವಾಗಲಂತೂ ಗೌಡರು ಅಲ್ಲಿಯೇ ಕುಳಿತುಕೊಂಡಿರುವರು. ಬೆಲ್ಲವನ್ನು ಹದಗೊಳಿಸಿ ಅದರ ರುಚಿಯನ್ನೊಮ್ಮೆ ಪರೀಕ್ಷಿಸಿ ನೋಡಿದ ತರುವಾಯವೇ ಪೆಂಟೆಗಳನ್ನು ಮಾಡಲು ಅಜ್ಞೆಯೀಯುವರು.

ಗಾಣದಲ್ಲಿ ಕಾಡೇಶಿಗೆ ಯಾವ ಕೆಲಸವೂ ಇರುವುದಿಲ್ಲವಾದರೂ ಆತ ಎಲ್ಲ ಕೆಲಸವೂ ತನ್ನ ಮೇಲೇ ಬಿದ್ದಿರುವ ಹಾಗೆ ನಟಿಸುತ್ತ ಯಾವಾಗಲೂ ಅತ್ತಿತ್ತ ಓಡಾಡುತ್ತಿರುವನು. ಓಡಾಡುವುದು ಬೇಸರವಾದಾಗ ಬೆಲ್ಲಮಾಡುತ್ತಿರುವಲ್ಲಿಗೆ ಬಂದು, ಬಿಸಿಬಿಸಿ ಬೆಲ್ಲವನ್ನು ಬಾಯಿಗಿಟ್ಟುಕೊಳ್ಳುತ್ತ ಆಳುಗಳೊಂದಿಗೆ ಹರಟೆಯಲ್ಲಿ ತೊಡಗುವನು.

ರಾತ್ರಿ ಯಾರಿಗೂ ನಿದ್ದೆಯಿರುವುದಿಲ್ಲ. ಗೌಡರೂ ಕಾಡೇಶಿಯೂ ಆಲೀಮನೆಯಲ್ಲಿ ಕುಳಿತುಕೊಂಡು ಇಸ್ಪೀಟು ಆಡುತ್ತ ಹೊತ್ತು ಕಳೆಯುವರು. ಗಾಣದ ಸಮಸ್ತ ಕಾರ್ಯಗಳೂ ಯಂತ್ರವತ್ತಾಗಿ ಸಾಗಿರುವವು. ಹತ್ತು ಹನ್ನೆರಡು ದಿನಗಳ ವರೆಗೆ ಗೌಡರೂ ಒಂದು ಯಂತ್ರದಂತೆಯೆ ಕಾಲ ಕಳೆಯುವರು.

## ತೆರೆ: ಹನ್ನೊಂದು.

ಗಾಣಕ್ಕಾರಂಭವಾದುದಕ್ಕೆ ನಾಲ್ಕು ದಿನವಾಗಿತ್ತು. ಅಂದು ಸಾಯಂಕಾಲ ಗೌಡರು ಕಬ್ಬು ಕಡಿಯುವ ಆಳುಗಳ ಕೆಲಸವನ್ನು ನಿರೀಕ್ಷಿಸಲೆಂದು ಪಡಕ್ಕೆ ಹೋಗಿದ್ದರು. ಅರ್ಧ ಪಡ ಬರಿಯದಾಗಿದ್ದಿತು. ಉಳಿದ ಅರ್ಧ ಪಡವನ್ನು ಅಂದು ರಾತ್ರಿಯೊಳಗಾಗಿ ಕಡಿದು ಬಿಡಲು ನಿರ್ಧರಿಸಿ ಆಳುಗಳು ತ್ವರೆಯಿಂದ ಕೆಲಸ ಸಾಗಿಸಿದ್ದರು. ಅವರು ಕಡಿದು ಎಸೆಯುವ ಕಬ್ಬುಗಳನ್ನು ಹೊರೆಗೂಡಿಸಿ ಹೊತ್ತುಕೊಂಡು ಹೋಗುವ ಹೆಣ್ಣಾಳುಗಳೂ ಅವಸರದಿಂದ ದುಡಿಯುತ್ತಿದ್ದರು.

ಗೌಡರು ಪಡದ ಕಡೆಗೆ ಬರುವುದನ್ನು ಕಂಡೊಡನೆಯೆ ಆಳುಗಳೆಲ್ಲ

ಇನ್ನಿಷ್ಟು ಚುರುಕಾಗಿ ಕೆಲಸ ಮಾಡತೊಡಗಿದರು. ಅದುವರೆಗೆ ಕೆಲಸಮಾಡು ತ್ತಿದ್ದ ಹಾಗೆ ಹರಟೆಯನ್ನು ಸಾಗಿಸಿದ್ದವರು ಕೂಡಲೆ ಹರಟೆಯನ್ನು ನಿಲ್ಲಿಸಿ ದರು. ಗೌಡರೆಂದರೆ ಎಲ್ಲರಿಗೂ ಭಯ. ಅವರು ಕೋಪದಿಂದ ಕಣ್ಣು ಕೆರಳಿಸಿದರೆಂದರೆ ಎಲ್ಲರಿಗೂ ನಡುಕ ಬರುತ್ತಿದ್ದಿತು. ಹೆಣ್ಣಾಳುಗಳಂತೂ ಗೌಡರೆದುರಿಗೆ ತಲೆಯೆತ್ತಿ ನಡೆಯುತ್ತಿರಲಿಲ್ಲ. ದೃಷ್ಟಿಯನ್ನು ಕೆಳಕ್ಕೆ ತಿರುಗಿಸಿ ಅವಸರದಿಂದ ಹೊರಟುಹೋಗುತ್ತಿದ್ದರು.

ಒಡ್ಡಿನಮೇಲೆ ಹಾಯ್ದು ಗೌಡರು ಪಡಕ್ಕೆ ಬರುತ್ತಿದ್ದಂತೆ ಕಾಡೇಶಿಯೂ ಅವರ ಹಿಂದೆಹಿಂದೆ ಬಂದ. ಪಡದ ಎದುರಿಗೆ ತುಸು ದೂರದಲ್ಲಿ ಒಂದು ಬೇವಿನ ಗಿಡವಿದ್ದಿತು. ಗೌಡರು ಅಲ್ಲಿಗೆ ಬಂದು ಗಿಡದ ಕೆಳಗೆ ಕುಳಿತು ಕೊಂಡರು. ಕಾಡೇಶಿಯೂ ಬಂದು ಕೊಂಚ ದೂರದಲ್ಲಿ ಕುಳಿತುಕೊಂಡ.

“ಆಳುಗಳು ಬಹಾಳ ಲಗೂಲಗೂ ಕೆಲಸ ಮಾಡುತಿದಾರ, ಅಲ್ಲ ವೇನೋ ಕಾಡೇಶಿ ?”

ಆತ ತುಟಿಗಳಲ್ಲಿಯೇ ನಗುತ್ತ ನುಡಿದ— “ಗೌಡರು ಈಕಡೆ ಬಂದಾಗ ಮಾತ್ರ ಇವರಿಗೆ ಚುರುಕು ಬರುತೈತಿ.”

ಭರಭರನೆ ಕಬ್ಬುಕಡಿಯುತ್ತಿದ್ದ ರಾಮುನನ್ನು ಹೆಮ್ಮೆಯಿಂದ ದಿಟ್ಟಿಸುತ್ತ ಗೌಡರೆಂದರು:

“ನಮ್ಮ ರಾಮ್ಯಾ ಅಂತೂ ವೈಗಳ್ಳನಲ್ಲ ಕಾಡೇಶಿ. ಕೆಲಸ ಅಂದರ ಬಹಾಳ ಹುರುಪು ಅವನಿಗೆ. ಸಣ್ಣವನಿದ್ದಾಗಿಂದ ಹಾಂಗೇ.”

ತಮ್ಮ ಮನೆಯಲ್ಲಿಯೇ ಬೆಳೆದು ದೊಡ್ಡವನಾದ ರಾಮುನ ಬಗೆಗೆ ಗೌಡ ರಿಗೆ ತುಂಬ ಅಭಿಮಾನವಿದ್ದಿತು, ಮಮತೆಯೂ ಇದ್ದಿತು. ಆತ ಎಂಟು ವರ್ಷದ ಬಾಲಕನಿದ್ದಾಗ ಆತನ ತಂದೆ ಸತ್ತು ಹೋಗಿದ್ದ. ತಾಯಿ ಆ ಮೊದಲೇ ತೀರಿಕೊಂಡಿದ್ದಳು ಪರದೇಶಿಯಾದ ಆ ಹುಡುಗನನ್ನು ಆತನ ಸೋದರಮಾವ, ಗೌಡರ ಮನೆಯಲ್ಲಿ ಜೀತದಾಳಾಗಿ ಇರಿಸಿ ಹೋಗಿದ್ದ. ದಿನವೂ ಮೂರು ಹೊತ್ತು ಊಟಕ್ಕೆ ಹಾಕಿ, ವರ್ಷಕ್ಕೆ ಹತ್ತು ರೂಪಾಯಿ ಸಂಬಳವನ್ನೂ ಕೊಡುತ್ತಿದ್ದರು ಗೌಡರು. ಈಚೆಗೆ ಆ ಸಂಬಳ ಐವತ್ತು ರೂಪಾಯಿಗೆ ಏರಿದ್ದಿತು. ವರ್ಷಕ್ಕೆರಡು ಅಂಗಿ, ಎರಡು ಧೋತರ, ಒಂದು ರುಮಾಲು ಸಹ ಸಿಕ್ಕುತ್ತಿದ್ದಿತು. ಹೊಟ್ಟೆ ತುಂಬ ಉಂಡು, ಬೆವರಿಳಿಸಿ ದುಡಿದು

ರಾಮು ಹೋರಿಯಂತೆ ಬೆಳೆದಿದ್ದ. ತಮ್ಮ ಕಣ್ಣೆದುರಿಗೇ ಬೆಳೆದು ಪ್ರಾಯಕ್ಕೆ ಬಂದ ಆತನನ್ನು ಕಂಡಾಗಲೆಲ್ಲ ಗೌಡರಿಗೆ ತೃಪ್ತಿಪೂರ್ವಕ ಸಂತಸವಾಗುತ್ತಿತ್ತು.

ಆ ದಿನವೂ ಹಾಗೆಯೇ ಆಯಿತು.

ರಾಮನ ಕೆಲಸವನ್ನು ನಿರೀಕ್ಷಿಸುತ್ತ ಅವರು ಕುಳಿತಿದ್ದ ಹಾಗೆ ಕಬ್ಬಿನ ಕಟ್ಟನ್ನು ಹೊತ್ತುಕೊಳ್ಳಲು ಆತನ ಹತ್ತಿರ ಹೋದ ಯಮುನಳ ಕಡೆಗೆ ಸಹಜವಾಗಿ ಅವರ ದೃಷ್ಟಿ ಹೊರಳಿತು. ಎಳೆ ಹರೆಯದ ಆ ಹೆಣ್ಣು ದೇಹ ಸಾಯಂಕಾಲದ ಬಣ್ಣದ ಬೆಳಕಿನಲ್ಲಿ ಬಹಳ ಚೆಲುವಾಗಿ ಕಾಣಿಸಿತು ಅವರ ಕಣ್ಣಿಗೆ. ಎರಡೂ ಕೈಗಳನ್ನು ಮೇಲಕ್ಕೆತ್ತಿ ಆಕೆ ಕಟ್ಟನ್ನು ತಲೆಯ ಮೇಲಿರಿಸಿಕೊಳ್ಳುವಾಗ ಬಿಗಿದು ಕಟ್ಟಿದ ಕುಪ್ಪುಸದೊಳಗಿನಿಂದ ಕಾಣಿಸಿದ ಅವಳ ಸ್ತನಗಳ ಕೆಳಭಾಗ ಗೌಡರ ಚಿತ್ತವನ್ನು ಉದ್ರಿಕ್ತಗೊಳಿಸಿತು. ಕಟ್ಟನ್ನು ತಲೆಯ ಮೇಲಿಟ್ಟುಕೊಂಡ ಬಳಿಕ ಅವಳು ಕುತ್ತಿಗೆಯನ್ನು ಸ್ವಲ್ಪ ಹೊರಳಿಸಿದ ಹಾಗೆ ಮಾಡಿದಾಗ ಅವಳ ಮುಖವೆಲ್ಲವೂ ಗೌಡರ ದೃಷ್ಟಿಗೆ ಬಿದ್ದಿತು. ಸಾಯಂಕಾಲದ ಬಣ್ಣದ ಬೆಳಕಿನಲ್ಲಿ ಅವಳ ಆ ಚೆಲುವಾದ ಮುಖ ಇನ್ನೂ ಚೆಲುವಾಗಿ ಕಾಣಿಸಿತು. ಕಿವಿಯ ವರೆಗೂ ಕೈಚಾಚಿದ ದಪ್ಪಗಿನ ಹುಬ್ಬು, ಅದರ ಕೆಳಗಡೆ ದೊಡ್ಡ ದೊಡ್ಡ ಕಣ್ಣು, ಹರವಾದ ಎವೆ, ಅಂಚಿನಲ್ಲಿ ನಸುಬಾಗಿದ ನೀಳವಾದ ಮೂಗು, ವಿಶಾಲವಾದ ತುಟಿಗಳು, ಆಕರ್ಷಕ ಗದ್ದ, ಹೊಸ ಹರೆಯದ ರಾಗದಿಂದ ರಂಜಿತವಾದ ಕೆನ್ನೆ, ತುಂಬಿದ ಕೊರಳು, ಸೀರೆಯ ಸೆರಗಿನಲ್ಲಿ ಎದ್ದು ಕಾಣಿಸುವ ದಪ್ಪಗಿನ ತುರುಬು. ಒಂದು ಕ್ಷಣ ಗೌಡರ ಕಡೆಗೆ ನೋಡಿದಂತೆ ಮಾಡಿ ಆಕೆ ಅವಸರದಿಂದ ಹೆಜ್ಜೆಯಿಡುತ್ತ ಗಾಣದ ಕಡೆಗೆ ಸಾಗಿದಳು. ಗೌಡರು ಮಂತ್ರಮುಗ್ಧರಾದವರಂತೆ, ಎವೆಯಿಕ್ಕದೆ ಅವಳನ್ನೇ ದಿಟ್ಟಿಸುತ್ತಿದ್ದರು. ಮುಖ ಚೆಂದ, ಎದೆ ಚೆಂದ, ರೂಪ ಚೆಂದ, ದೇಹ ಚೆಂದ, ನಡಿಗೆಯೂ ಚೆಂದ—ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡರು. "ಹೊಳೆಪ್ಪನ ಹುಡುಗಿ ಇಷ್ಟು ಲಗೂ ಹೀಂಗ ಬೆಳೆದಳೇ! ನನಗೆ ಗೊತ್ತೇ ಆಗಲಿಲ್ಲವಲ್ಲಾ," ಎಂದು ಅಚ್ಚರಿಪಟ್ಟುಕೊಂಡರು.

ಗೌಡರ ದೃಷ್ಟಿಯ ಚಲನವಲನಗಳನ್ನೆಲ್ಲ ನಿರುಕಿಸುತ್ತ ಕುಳಿತಿದ್ದ ಕಾಡೇಶಿಗೆ ಯಮುನಾ ಅವರ ಮನ ಸೆಳೆದುದನ್ನು ಕಂಡಾಗ ಆಶ್ಚರ್ಯವೇನೂ

ಆಗಲಿಲ್ಲ. “ ಎಂಥವರ ಮನಸನ್ನೂ ಕೆಡಿಸುವಂಥ ಪುರಮಾಸಿ ಹೆಣ್ಣು ಇದು. ಇನ್ನು ನಮ್ಮ ಗೌಡರು.... ” ಎಂದು ಮನಸ್ಸಿನಲ್ಲಿಯೆ ಹೇಳಿಕೊಳ್ಳುತ್ತ ಆತ ಮೌನವಾಗಿ ಕುಳಿತಿದ್ದ. ಗೌಡರ ರಸಿಕತನ ಆತನಿಗೆ ಅಪರಿಚಿತ ವಿಷಯ ವೇನೂ ಆಗಿರಲಿಲ್ಲ. ಅವರ ಆಶ್ರಯದಲ್ಲಿ ಇರತೊಡಗಿದಂದಿನಿಂದ ಅದು ವರೆಗೆ ಗೌಡರ ಜೀವನದ ಆ ಭಾಗ ಆತನಿಗೆ ಸುಪರಿಚಿತವಾದುದಾಗಿದ್ದಿತು. ಗೌಡರು ಬಯಸಿದ ಹೆಣ್ಣುಗಳನ್ನು ಬಲೆಗೆ ಬೀಳಿಸುವ ಕಾರ್ಯದಲ್ಲಿ ಆತನೂ ಎಷ್ಟೋ ಸಲ ಸಹಾಯ ಮಾಡಬೇಕಾಗಿ ಬಂದಿದ್ದಿತು. ಆ ಕಾರ್ಯ ಸುಲಭ ವಾಗುವದಕ್ಕಾಗಿಯೇ ತನ್ನನ್ನು ಅವರು ಆಶ್ರಯದಲ್ಲಿಟ್ಟುಕೊಂಡಿರುವರೇನೋ ಎಂದು ಆತನಿಗೆನಿಸಿದ್ದುದೂ ಅನೇಕ ಬಾರಿ.

“ ಹೊಳೆಪ್ಪನ ಮಗಳು ಎಷ್ಟುದ್ದ ಬೆಳೆದಾಳಲ್ಲೋ ಕಾಡೇಶೀ ! ” ಎಂದು ಗೌಡರು ಮೆಲ್ಲಗಿನ ದನಿಯಲ್ಲಿ ನುಡಿದರು. ಪಡವಲ್ಲಿ ಕೆಲಸ ಮಾಡು ತ್ತಿದ್ದ ಆಳುಗಳಿಗೆ ಆ ಮಾತು ಕೇಳಿಸಲು ಸಾಧ್ಯವಿರಲಿಲ್ಲ.

“ ಬೆಳೀದs ಬಿಟ್ಟಾಳೇನ್ರಿ ! ಹದಿನೈದು ತುಂಬಿ ಹದಿನಾರರಾಗ ಬಿದ್ದಿರಬೇಕು. ”

“ ಈಕಿಯ ಗಂಡ ಈಕೀನ್ನ ಬಿಟ್ಟಾಂಗs ಆಯಿತೇನೋ ? ”

“ ಹಾಂಗs ಕಾಣುತೈತಿರಿ. ಮನ್ನೆ ಗಂಗವ್ವ ಭೆಟ್ಟಿಯಾಗಿದ್ದಳು. ಅಳಿಯನಿಂದ ಸೋಡಚೀಟಿ ತರಿಸೂದಕ್ಕಂತ ನನ್ನ ಕೇಳಿದಳು. ಮಗಳನ್ನ ಬ್ಯಾರೆ ಯಾರಿಗಾದರೂ ಕೊಡಬೇಕಂತ ವಿಚಾರ ಮಾಡಿರಬೇಕು. ”

“ ಹೀಂಗೇನು ? ನೀನೇನು ಹೇಳಿದಿ ? ”

“ ಚಿಕ್ಕಳ್ಳಿಯೊಳಗ ನನಗ ಯಾರದೂ ಗುರುತಿಲ್ಲ, ನಾ ಹ್ಯಾಂಗ ಹೋಗಲಿಕ್ಕಾಗುತೈತಿ ಅಂತ ಹೇಳಿದೆ. ”

“ ಹೊಳೆಪ್ಪನ್ನ ನೋಡಿದ್ದೀಯಾ ಇತ್ತಲಾಗ ? ”

“ ಮನ್ನೆ ಅವರ ಮನಿಗೇ ಹೋಗಿದ್ದೆ. ಅವಗ ಇನ್ನೂ ಜೋರಾದಂಗ ಕಾಣುತೈತಿ ಜಡ್ಡು. ಹಾಸಿಗೀ ಬಿಟ್ಟು ಏಳಾಕಾಗುವದಿಲ್ಲಂತ, ” ಎಂಬು ಹೇಳಿ ಒಂದು ಕ್ಷಣ ತಡೆದು ಮತ್ತೆ ಹೇಳಿದ ಕಾಡೇಶಿ: “ ಮಗಳ ಬಾಳೇವು ಹಿಂಗಾಯ್ತಲ್ಲಾ ಅಂತ ಅವ ಬಹಾಳ ಮನಸ್ಸಿಗೆ ಹಚ್ಚಿಕೊಂಡಾನ. ಸೋಡ ಚೀಟೀ ತಗೋಬೇಕಂತ ಗಂಗವ್ವ ಅಂದರೆ ಹೊಳೆಪ್ಪ ಆದಕ್ಕೊಪ್ಪಲಿಲ್ಲ.

ಸವತಿಯಿದ್ದರೂ ಚಿಂತಿಲ್ಲ, ಮಗಳನ್ನ ಅಳಿಯನ ಮನಿಗೇ ಕಳಿಸಬೇಕಂತ ವಿಚಾರ. ಗಂಗವ್ವಗ ಮಾತ್ರ ಅಳಿಯನ ಮ್ಯಾಲ ಭಯಂಕರ ಸಿಟ್ಟು. ಅವನ ಮಾರೀ ಇನ್ನೊಮ್ಮೆ ನೋಡುವದಿಲ್ಲ ಅಂತ ಅಂದಳು."

"ಅಂತೂ ಇದರೊಳಗ ಗಂಡ ಹೆಂಡಿರಿಬ್ಬರಿಗೂ ಜಗಳ ಬಂದಂಗ ಕಾಣುತೈತಿ ?"

"ಜಗಳ ಅಂತ ಅನ್ನೂದಕ್ಕಾಗದಿದ್ದರೂ ಇಬ್ಬರಿಗೂ ಮನಸ್ಸು ಏಕ ಇಲ್ಲ ಅಂದರಾದೀತು."

"ಆ ಹುಡುಗಿ ಏನಂತೈತಿ ?"

"ನಾ ಅವರ ಮನಿಗೆ ಹೋದಾಗ ಯಮುನಿ ಇರಲಿಲ್ಲ. ಕೂಲಿಗೆ ಹೋದಾಕಿ ಇನ್ನೂ ಬಂದಿರಲಿಲ್ಲ ಆಕೀನೇನ ಕೇಳೂದ್ರೀ ಇದರಾಗ ? ಹುಡುಗೀರಿಗೆ ಇದರಾಗೆಲ್ಲಾ ಏನು ತಿಳೀತೈತಿ ? ಪ್ರಾಯಕ್ಕೆ ಬಂದವರಿಗೆ ಒಬ್ಬ ಗಂಡ ಸಿಕ್ಕರಾಯ್ತು. ಯಾರಾದರೇನು ಅವರಿಗೆ?" ಎಂದು ಹೇಳಿ ಕಾಡೇಶಿ ಮೆಲುನಗೆ ಬೀರಿದ.

ಕಬ್ಬಿನ ಕಟ್ಟನ್ನು ಹೊತ್ತು ಗಾಣದ ಹತ್ತಿರ ಹೋಗಿದ್ದ ಯಮುನಾ ಆ ವೇಳೆಗೆ ಮತ್ತೆ ಹಿಂದಿರುಗಿ ಪಡದಲ್ಲಿ ಬರುತ್ತಿದ್ದಳು. ನವಯುವತಿಯರಿಗೆ ಸ್ವಾಭಾವಿಕವಾದ ಒಯ್ಯಾರದಿಂದ ಕೈಬೀಸುತ್ತ ಬರುತ್ತಿದ್ದ ಆಕೆಯನ್ನು ನೆಟ್ಟ ದೃಷ್ಟಿಯಿಂದ ನಿರುಕಿಸುತ್ತ ಗೌಡರು ಕೆಲಹೊತ್ತು ಮೌನವಾಗಿ ಕುಳಿತಿದ್ದರು. ಆಕೆ ಮತ್ತೊಂದು ಕಟ್ಟನ್ನು ಹೊತ್ತುಕೊಂಡು ಗಾಣದ ಕಡೆಗೆ ಹೋದ ಬಳಿಕ ಅವರು ಕಾಡೇಶಿಯ ಕಡೆಗೆ ತಿರುಗಿ ಕಣ್ಣು ಮಿಟುಕಿಸಿದರು. ಅದನ್ನು ಕೂಡಲೆ ಅರ್ಥ ಮಾಡಿಕೊಂಡು ಕಾಡೇಶಿ ಕತ್ತು ಕೊಡಹಿದ.

"ತ್ರಾಸ ಆದೀತೇನೋ ಕಾಡೇಶೀ ?"

"ಇದಕ್ಕೆಲ್ಲ ಎಂಥಾ ತ್ರಾಸರೀ ಗೌಡರೇ ? ಗಂಗವ್ವಗ ಎರಡುನೂರು ರೂಪಾಯಿ ಸಾಲಾ ಬ್ಯಾರೆ ಕೊಟ್ಟದೀರಲ್ಲ? ಅದನ್ನೀಗಿಂದೀಗ ತಂದು ಕೊಡು ಅಂತ ಕಾಡಿಸಿದರೆ ಸಾಕು, ಕೆಲಸ ಆಗುತೈತಿ."

"ಊರೊಳಗಿನ ಹೆಣ್ಣು ಕಾಡೇಶೀ. ಮಂದಿಗೆ ಗೊತ್ತಾಗಿ ಬೊಬ್ಬಾಟ ವಾಗಬಾರದಪ್ಪ. ಬ್ಯಾರೆ ಊರಾಗ ಹೋಗಿ ನಾವು ಏನು ಮಾಡಿದರೂ ನಡ ದೀತು. ಇದ್ದೂರಾಗ ಹಾಂಗೆಲ್ಲ ಅವಸರದಿಂದ ಸಿಕ್ಕಾಪಟ್ಟೆ ಮಾಡಾಕ

ಬರೂದಿಲ್ಲ."

"ಮೆಲ್ಲಗನs ಸಾಧಿಸಿದರಾಯಿತೇಳ್ರಿ. ಚಾದಂಗಡಿಯ ಬಸ ಲಿಂಗವ್ವ......"

"ಹೌದು, ಹೌದು. ಹಾಂಗೇ ಮಾಡಬೇಕು ಬಸಲಿಂಗವ್ವನನ್ನು ಹಿಡೀಬೇಕು ಮೊದಲು. ಅಂತೂ ಗದ್ದಲ ಆಗದಂಗ ಕೆಲಸ ಆಗಬೇಕು. ನೋಡು," ಎಂದು ನುಡಿದು ಗೌಡರು ಮೇಲಕ್ಕೆದ್ದು ತೋಟದ ಗುಡಿಸಲಿನ ಕಡೆಗೆ ಸಾಗಿದರು. ಅವರ ಗಂಟಲು ಒಣಗಿ ದಾಹವಾಗುತ್ತಿತ್ತು.

ಕಾಡೇಶಿ ಕುಳಿತಲ್ಲಿಯೇ ಕುಳಿತಿದ್ದ. ಅವರನ್ನು ಹಿಂಬಾಲಿಸಲಿಲ್ಲ. ಗೌಡರು 'ಔಷಧ' ತೆಗೆದುಕೊಳ್ಳುವ ಸಮಯ ಅದು. ದಿನವೂ ಸಾಯಂ ಕಾಲ ಸೂರ್ಯ ಮುಳುಗುವ ವೇಳೆಗೆ ತೋಟದ ಗುಡಿಸಲಿಗೆ ಬಂದು ಅವರು 'ಔಷಧ' ತೆಗೆದುಕೊಳ್ಳುವುದು ವಾಡಿಕೆ. ಒಂದೆರಡು ತಾಸುಗಳಿಗೆ ಮೊದಲೆ ಅವರ ಆಳು ಅಲ್ಲಿಗೆ ಬಂದು 'ಔಷಧ' ಸೀಸೆಯನ್ನು ಇಟ್ಟುಹೋಗುತ್ತಿದ್ದ. ಗೌಡರು ಅದನ್ನು ಸೇವಿಸುವಾಗ ಗುಡಿಸಲಿನಲ್ಲಿ ಇನ್ನಾರೂ ಇರುತ್ತಿರಲಿಲ್ಲ. ಕಾಡೇಶಿಗೂ ಸಹ ಆ ಸಮಯದಲ್ಲಿ ಅಲ್ಲಿಗೆ ಬರಲು ಅಪ್ಪಣೆಯಿರಲಿಲ್ಲ. ಗೌಡರು, ತಾವೊಬ್ಬರೇ ಕುಳಿತುಕೊಂಡು ಸಿಧಾನವಾಗಿ ಅದನ್ನು ಸೇವಿಸಿ, ಎಲೆ, ಅಡಕೆ, ತಂಬಾಕು, ಬಡೇಸೋಪು, ಲವಂಗ, ಏಲಕ್ಕಿ ಮೊದಲಾದವು ಗಳನ್ನು ಮೆಲ್ಲುತ್ತ, 'ಔಷಧ'ದ ವಾಸನೆಯನ್ನು ಹೋಗಲಾಡಿಸಲು ಪ್ರಯತ್ನಪಡುತ್ತ ಗುಡಿಸಲಿನಿಂದ ಹೊರಡುತ್ತಿದ್ದರು.

ಗೌಡರು ದಿನವೂ ಸೇವಿಸುವ ಆ ಔಷಧದ ವಿಷಯ ಹಳ್ಳಿಯಲ್ಲಿ ಎಲ್ಲ ರಿಗೂ ಗೊತ್ತಿದ್ದಿತಾದರೂ ಆ ಬಗೆಗೆ ಬಾಯಿಬಿಟ್ಟು ಮಾತನಾಡುವ ಧೈರ್ಯ ಯಾರಲ್ಲೂ ಇರಲಿಲ್ಲ. ಗೌಡರ ಹೆಂಡತಿ ಮುರಿಗೆವ್ವ ಒಂದೆರಡು ಸಲ ಗದ್ದಲ ಮಾಡಿದಾಗ ಗೌಡರು ಆಕೆಯ ಕೈಕಾಲು ಕಟ್ಟಿ ಸೊಂಟ ಮುರಿಯುವ ಹಾಗೆ ಥಳಿಸಿದ್ದರು. ಮುದುಕ ಫಕೀರಗೌಡರಿಗೂ ಮಗನ ನಡತೆಯನ್ನು ಕಂಡು ಅಸಹ್ಯವಾಗಿದ್ದಿತು. "ಲಿಂಗಾಯತರಲ್ಲಿ ಹುಟ್ಟಿ ಸೆರೆ ಸಿಂದಿ ಕುಡಿಯಬಾರದು ತಮ್ಮಾ. ಕುಲ ಕೆಡ್ತೈತಿ," ಎಂದು ಅಂಜುತ್ತ ಅಂಜುತ್ತಲೇ ಮಗನಿಗೆ ಬುದ್ಧಿವಾದ ಹೇಳಿದ್ದರು. "ಕುಲಕ್ಕೇನು ಧಾಡಿಯಾಗುತ್ತೈತಿ? ಅದೆಲ್ಲಾ ಹಳೇಕಾಲದ ಮಾತಾಯಿತು. ಈಗೇನು ಹಾರೋರೇ ಕುಡೀತಾರಂತೆ.

ಅದೂ ಒಂದು ಅಗಸುದ್ದೆ ಇದ್ದ ಹಾಂಗ. ಕುಡಿದರ ಮೈ ನೆಟ್ಟಗಿರುತ್ತೈತಿ. ನಿಮಗೇನು ಗೊತ್ತು ಅದೆಲ್ಲಾ ? " ಎಂದು ರುದ್ರಗೌಡರು ತಂದೆಯನ್ನು ಗದರಿಸಿಕೊಂಡಿದ್ದರು. " ಇವಗ ಯಾಕಾದರೂ ಹೇಳಿದೆನೊ ಶಿವನೆ. ನನ್ನ ಮಾನಾ ಕೂಡ ಕಳೆದುಬಿಟ್ಟ. ಏನಾರ ಮಾಡಿಕೊಂಡು ಹಾಳಾಗಿ ಹೋಗಲಿ ನನ್ನ ದಿವಸ ಮುಗೀತಾ ಬಂತು. ಹರಾ ಶಿವಾ ಅಂತ ತಣ್ಣಗs ದಿನ ಕಳೀಬೇಕು " ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡು ಫಕೀರಗೌಡರು ಸುಮ್ಮನಾಗಿದ್ದರು.

ಹೆಂಡತಿಯನ್ನು ಹೊಡೆದು, ತಂದೆಯನ್ನು ಗದರಿಸಿದರೂ ಗೌಡರು ಮನೆಯಲ್ಲಿ ಮಾತ್ರ ಸಾರಾಯಿ ಇಡುತ್ತಿರಲಿಲ್ಲ. ತೋಟದ ಗುಡಿಸಲಿಗೆ ಹೋಗಿ ಕುಡಿದು, ಕೊಂಚ ಹೊರಗಡೆ ತಿರುಗಾಡಿಕೊಂಡು ಅನಂತರ ಮನೆಗೆ ಬರುತ್ತಿದ್ದರು.

ಆ ದಿನವೂ ಅವರು ಎಂದಿನಂತೆ ಗುಡಿಸಲಿಗೆ ಹೋಗಿ ಬಾಟಲಿಯಲ್ಲಿದ್ದ ಸಾರಾಯಿ ಸೇವಿಸಿ ತಾಂಬೂಲ ಹಾಕಿಕೊಳ್ಳುತ್ತ ಕಾಡೇಶಿ ಕುಳಿತಲ್ಲಿಗೆ ಬಂದರು. ಅಷ್ಟರೊಳಗಾಗಿ ಕತ್ತಲೆ ಪಸರಿಸಿದ್ದಿತು ಆಲೀಮನೆಯಲ್ಲಿ ಗ್ಯಾಸ್‌ದೀಪ ಹೊತ್ತಿಸತೊಡಗಿದ್ದರು.

ಗೌಡರು ಬಂದು ಪಡದ ಕಡೆಗೆ ದೃಷ್ಟಿ ತಿರುಗಿಸಿದರು. ಗಂಡಾಳುಗಳು ತಮ್ಮ ಕೆಲಸವನ್ನು ಹಾಗೆಯೇ ಸಾಗಿಸಿದ್ದರು. ಹೆಣ್ಣಾಳುಗಳಾರೂ ಕಾಣಿಸಲಿಲ್ಲ.

" ಅವೆಲ್ಲ ಯಾವ ಕಡೆ ಹೋದವೋ ಕಾಡೇಶೀ ? "

" ಕತ್ತಲಾಯಿತಲ್ಲ ಗೌಡರೇ. ಅವರ ಕೆಲಸ ತೀರಿತು. ಮನೆಗೆ ಹೋದರು. "

ಗೌಡರು ಗಾಣದ ಕಡೆಗೆ ದೃಷ್ಟಿ ತಿರುಗಿಸಿದರು. ಬಲಗೈಯ ಬೆರಳಿನಿಂದ ಗದ್ದ ಕೆರೆದುಕೊಂಡರು. ಬಾಯಿಯ ಮೂಲೆಯಿಂದ ಸೋರುತ್ತಿದ್ದ ತಾಂಬೂಲದ ರಸವನ್ನು ಎಡಗೈಯಿಂದ ಒರೆಸಿಕೊಂಡರು. ಬಾಯಿಯೊಳಗೆ ಎಡಭಾಗದಲ್ಲಿ ಏಕತ್ರವಾಗಿದ್ದ ಎಲೆ ಅಡಕೆಯ ತುಂಡುಗಳನ್ನು ನಾಲಗೆಯಿಂದ ಎತ್ತಿ ಬಲಭಾಗಕ್ಕೆ ಸಾಗಿಸಿ " ಏಳು ಕಾಡೇಶೀ, ಆಲೀಮನೆಗೆ ಹೋಗೂಣು. ಕೊಪ್ಪರಿಗೆ ಇಳಿಸುವ ಹೊತ್ತಾಯಿತೇನೊ, " ಎಂದು ನುಡಿದರು.

# ತೆರೆ: ಹನ್ನೆರಡು.

ಗಾಣದ ಕೆಲಸ ಮುಗಿದು, ಪೆಂಟೆಗಳು ಮನೆಗೆ ಬಂದ ಬಳಿಕ ಗೌಡರಿಗೆ ಕೊಂಚ ಬಿಡುವಾದಂತಾಯಿತು. ಹದಿನೈದು ದಿನ, ಹಗಲು ರಾತ್ರಿ ಆಲೀ ಮನೆಯಲ್ಲಿ ಕಾಲ ಕಳೆದುದರಿಂದ ಅವರಿಗೆ ತುಂಬಾ ಬೇಸರವಾಗಿದ್ದಿತು. ಒಂದೆ ರಡು ದಿನಗಳ ಮಟ್ಟಿಗೆ ನಗರಕ್ಕೆ ಹೋಗಿ ಮೋಜಿನಿಂದ ಕಾಲ ಕಳೆದು ಬೇಸರ ವನ್ನೆಲ್ಲ ಹೋಗಲಾಡಿಸಿಕೊಂಡು ಬರಬೇಕೆಂದು ಅವರು ಯೋಚಿಸಿದರು. ಸೋಮವಾರ ಬೆಳಗಿನ ಗಾಡಿಗೆ ಹೊರಡುವುದೆಂದು ನಿರ್ಧರಿಸಿಯೂ ಆಯಿತು.

ರವಿವಾರ ಸಾಯಂಕಾಲ 'ಔಷಧ' ಸೇವನೆಗಾಗಿ ತೋಟದ ಗುಡಿಸ ಲಿಗೆ ಹೋದಾಗ ಗಂಗವ್ವನನ್ನು ಅಲ್ಲಿಯೇ ಕರೆಯಿಸಿಕೊಂಡರು. ಆಕೆಗೂ ಸಾರಾಯಿ ಎಂದರೆ ತುಂಬ ಪ್ರೀತಿ. ಅನೇಕ ದಿನಗಳಿಂದ ಆಕೆಗೆ ಸಾರಾಯಿ ದೊರೆತಿರಲಿಲ್ಲ. ಅಂತೆಯೆ, ಅಂದು ಗೌಡರ ಕೈಯಿಂದ ರುಚಿಕರವಾದ ಸಾರಾಯಿ ದೊರೆತಾಗ ಗಂಗವ್ವನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಗೌಡರೊಂದಿಗೆ ಕುಳಿತು ಸಾರಾಯಿ ಕುಡಿಯುವುದೂ ಒಂದು ದೊಡ್ಡ ವಿಷ ಯವೇ ಅಲ್ಲವೆ? ಆ ಹಳ್ಳಿಯಲ್ಲಿ ಬೇರಾರಿಗೂ ಆ ಸನ್ಮಾನ ದೊರೆತಿರಲಿಲ್ಲ. ಗಂಗವ್ವ ಹಿಗ್ಗಿನಿಂದ ಉಬ್ಬಿ ಹೋದಳು.

"ಹೊಳೆಪ್ಪಗ ಈಗ ಹ್ಯಾಂಗೈತಿ ಗಂಗವ್ವ?" ಎಂದು ಗೌಡರು ಮಾತು ತೆಗೆದರು.

ಗಂಗವ್ವನಿಗಾಗ ಗಂಡನ ನೆನಪೇ ಇರಲಿಲ್ಲ. ಸಾರಾಯಿಯ ಅಮಲು ನಿಧಾನವಾಗಿ ಆಕೆಯ ಮಿದುಳನ್ನು ಆಕ್ರಮಿಸುತ್ತಿದ್ದಿತು. ಗೌಡರ ಪ್ರಶ್ನೆಗೆ ಆಕೆಯಿಂದ ಉತ್ತರ ದೊರೆಯಲಿಲ್ಲ.

"ನಿನ್ನ ಮಗಳನ್ನು ಮುಂದ ಏನ ಮಾಡಬೇಕಂತ ಮಾಡಿದ್ದೀ ಗಂಗವ್ವ?" ಗೌಡರು ಮತ್ತೊಂದು ಪ್ರಶ್ನೆ ಕೇಳಿದರು.

ಬಾಯಿಗೆ ಹತ್ತಿದ್ದ ಸಾರಾಯಿಯನ್ನು ಸೀರೆಯ ಸೆರಗಿನಿಂದ ಒರೆಸಿ ಕೊಂಡು ಗಂಗವ್ವ ವಿಸ್ಫುರಿತ ನೇತ್ರಗಳನ್ನು ಗೌಡರ ಕಡೆಗೆ ತಿರುಗಿಸಿದಳು. ಮಗಳು....ತನ್ನ ಮಗಳು....ಗೌಡರು ಅವಳ ಬಗೆಗೆ ಏನೋ ಕೇಳುತ್ತಿದ್ದಾರೆ.... ಏನು ಎಂಬುದು ಸರಿಯಾಗಿ ತಿಳಿಯದಾಗಿದೆ.

" ನಿನ್ನ ಯಮುನಿಯನ್ನ ಮನ್ನೆ ನೋಡಿದೆ ಗಂಗವ್ವ. ಎಷ್ಟು ಲಗೂ ಪ್ರಾಯಕ್ಕ ಬಂದಾಳಲ್ಲ ಹುಡುಗಿ. ಬಹಾಳ ಚೆಲುವಿಯೂ ಆಗಿದಾಳ.... "

" ಇನ್ನೊಂದು ಕಪ್ ಕೊಡಿರಿ ಗೌಡರೀ. ನೀವು ಮಾತಾಡೂದು ನೆಟ್ಟಗ ತಿಳೀಲೊಲ್ಲದು. "

ಗೌಡರು ಅವಳ ಕಪ್ಪಿಗೆ ಬಾಟಲಿಯನ್ನು ಬಗ್ಗಿಸಿದರು. ಅದನ್ನು ಒಂದೇ ಗುಟುಕಿಗೆ ಕುಡಿದು ಗಂಗವ್ವ ಕಪ್ಪನ್ನು ಕೆಳಗಿಟ್ಟಳು.

" ಏನು ಕೇಳಿದಿರಿ ಗೌಡರೀ ? "

" ನಿನಗ ಏನೂ ತಿಳಿದೇ ಇಲ್ಲೇನು ? ನಿನ್ನ ಮಗಳು ಇಷ್ಟುದ್ದ ಬೆಳೆದಳಲ್ಲ. ಏನು ಮಾಡುವಾಕಿ ಅಂತ ಕೇಳುತಿದ್ದೀನಿ ? "

" ನಾ ಹೇಳುವದೇನು ಗೌಡರೀ ? ನೀವೇ ಒಂದು ಹಾದಿ ತೋರಿಸಬೇಕ್ರೀ. "

" ಆಕಿಯ ಗಂಡ ಸೋಡಚೀಟೀ ಕೊಟ್ಟಾನೇನು ? "

" ನೀವು ಹೋಗಿ ಕೇಳಿದರ ಕೊಡದಿರತಾನೇನ್ರೀ ? "

ಗೌಡರು ಹುಬ್ಬುಗಂಟು ಹಾಕಿ—" ನಿನ್ನ ಮಗಳ ಸೋಡಚೀಟಿ ಕೇಳೂದಕ್ಕ ನನ್ನ ಕಳಿಸಬೇಕಂತಿಯೇನು ? ಎಲಾ ಭೋಸಡಿ ! " ಎಂದರು.

" ಮತ್ತೇನು ಮಾಡಲಿ, ನೀವೇ ಹೇಳಿರಿ ಹಂಗಾದರೆ. "

" ನಾ ಹೇಳಿದಂಗ ಕೇಳುತೀ ಏನ ? "

" ನಿಮ್ಮ ಮಾತು ನಾವು ಯಾವಾಗ ಕೇಳಿಲ್ಲ ಗೌಡರೀ ? "

ಗೌಡರು ಸ್ವಲ್ಪ ಹೊತ್ತು ಸುಮ್ಮನಿದ್ದು ಆಕೆಗೆ ಇನ್ನೊಂದು ಕಪ್ಪು ಸಾರಾಯಿ ಕೊಡುತ್ತ ಹೇಳಿದರು:

" ನಾಳೆ ನಾ ಶಹರಕ್ಕ ಹೋಗೂದೈತಿ. ನನ್ನ ಸಂಗಡ ಯಮುನೀನ್ನ ಕಳಿಸಿಬಿಡು. ಏನಾರೆ ಒಂದು ದಡಕ್ಕ ಹಚ್ಚುತೀನಿ ಆಕಿನ್ನ. "

ಗಂಗವ್ವನ ಕೈಯಲ್ಲಿನ ಕಪ್ಪು ಒಮ್ಮೆಲೆ ನೆಲಕ್ಕೆ ಬಿದ್ದಿತು. ಅಮಲೇರಿದ ಆ ಅವಸ್ಥೆಯಲ್ಲಿಯೂ ಅವಳ ಮಿದುಳು ಗೌಡರ ಬಯಕೆಯನ್ನು ಅರ್ಥಮಾಡಿಕೊಂಡಿತೇನೊ. ಆಕೆ ಕೆಲ ಹೊತ್ತು ಗರ ಹೊಡೆದವರಂತೆ ಸುಮ್ಮನೆ ಕುಳಿತಿದ್ದಳು.

" ಏನೆಂದೆ ಗಂಗವ್ವ ? "

"ನೀವೇನು ಮಾಡು ಅಂತೀರಿ ಗೌಡರೇ, ನನಗ ನೆಟ್ಟಗ ತಿಳೀಲಿಲ್ಲ."

"ತಿಳೀಲಿಲ್ಲ? ಇನ್ನೂ ಹ್ಯಾಂಗ ತಿಳಿಸಿ ಹೇಳೂದು ನಿನಗ? ಏಳು ವ್ಯಾಲಕ್ಕ ಹೊರಗ ಕಾಡೇಶಿ ಇರಬೇಕು. ಅವ ಎಲ್ಲಾ ನೆಟ್ಟಗ ಹೇಳುತಾನ," ಎಂದು ನುಡಿದು ಅವರು ಮೇಲಕ್ಕೆದ್ದರು.

ಅವರೆಂದ ಹಾಗೆ ಕಾಡೇಶಿ ತೋಟದ ಬಾವಿಯ ಕಟ್ಟೆಯ ಮೇಲೆ ಕುಳಿತುಕೊಂಡಿದ್ದುದು ಕಾಣಿಸಿತು.

"ಕಾಡೇಶೀ."

ಆತ ಒಡನೆಯೆ ಎದ್ದು ಬಂದ

"ಈಕಿಗೆ ಎಲ್ಲಾ ನೆಟ್ಟಗೆ ಹೇಳು ನಾ ಮನೀಗೆ ಹೋಗುತೀನಿ," ಎಂದು ನುಡಿದು ಗೌಡರು ಹೊರಟುಹೋದರು

"ಇಲ್ಲೇ ಬಾ ಗಂಗವ್ವ" ಎಂದ ಕಾಡೇಶಿ.

ಗಂಗವ್ವ ಬಾವಿಯ ಕಟ್ಟೆಗೆ ಹೋಗಿ ಉಡಿಯಿಂದ ಎಲೆಯಡಕೆಯ ಚೀಲವನ್ನು ತೆಗೆದು ಎಲೆ ಅಡಕೆ ಹಾಕಿಕೊಳ್ಳತೊಡಗಿದಳು.

"ಗೌಡರೇನಾದರೂ ಹೇಳಿದರೇನು ಗಂಗವ್ವ?"

"ಏನೋ ಹೇಳಿದರು. ನೆಟ್ಟಗ ತಿಳೀಲಿಲ್ಲಪ್ಪ."

"ಅಂದರ ಹೀಂಗ." ಕಾಡೇಶಿ ಒಮ್ಮೆ ಕೆಮ್ಮಿ, ಗಂಟಲನ್ನು ಸರಿಪಡಿಸಿಕೊಂಡು ಹೇಳತೊಡಗಿದ: "ಇಲ್ಲಿ ನೋಡು ಗಂಗವ್ವ. ನಾ ಕುಸ್ತಿಯ ಮನುಷ್ಯ. ಹಂಗ ಹೀಂಗ ಹೊರಳಿಸಿ ಮಾತಾಡಾಕ ಬರೂದಿಲ್ಲ ನನಗ. ಇರೂದನ್ನ ಇದ್ದಂಗ ಹೇಳುತೀನಿ. ನಿನ್ನ ಮಗಳು ಯಮುನಿ ಗಂಡನನ್ನೂ ಬಿಟ್ಹಂಗಾಯ್ತು. ಆವ ಅಕೀಗೆ ಸೋಡಚೀಟಿ ಕೊಟ್ಟಾನು ಅನ್ನೂ ಭರೋಸೆಯೂ ಇಲ್ಲ. ಸೋಡಚೀಟೀ ಇಲ್ಲದೆ ಅಕೀನ್ನ ಬ್ಯಾರೆಯವರಿಗೆ ಮಾಡಿಕೊಡೂದಕ್ಕೂ ಬರೂದಿಲ್ಲ. ಮನ್ನೆ ನೀ ನನಗ ಕೇಳಿದ ವ್ಯಾಲ ಈ ಸಂಗತಿ ಗೌಡರ ಕಿವಿಯ ಮ್ಯಾಲ ಹಾಕಿದೆ. ಅವರಿಗೂ ನೀವಂದರ ಬಹಾಳ ಕನಿಕರ ಐತಿ. ಗಂಗವ್ವಗ ಬಹಾಳ ತ್ರಾಸ ಆದಾಂಗ ಕಾಣುತ್ತೈತಿ. ಆಕೀನ್ನ ಉಳಿಸೂದಕ್ಕ ಏನಾರೆ ಮಾಡಾಕ ಬೇಕು ಕಾಡೇಶೀ ಅಂದರು. ಮನ್ನೆ ಗಾಣದಾಗ ಯಮುನಿಯನ್ನೂ ಅವರು ನೋಡಿದರು. ಸಾವುಕಾರರ ಸಂಗತಿ

ಗೊತ್ತೇ ಐತಲ್ಲ ನಿನಗ ? ನಿನ್ನ ಮಗಳ ಮ್ಯಾಲ ಅವರ ಮನಸು ಹೋಗೈತಿ. ಇಂಥವರ ಆಸರದಾಗಿದ್ದರ ಆಕಿಗೂ ಒಂದು ಚಲೋ ದಡ ಸಿಕ್ಕಂಗಾಗುತೈತಿ. ನಿನಗೂ ವಯಸ್ಸಾಗುತಾ ಬಂತು. ಹೊಳೆಪ್ಪ ನೋಡಿದರ ಹಾಸಿಗೀ ಹಿಡಿದು ಬಿದ್ದಾನ. ಗೌಡರ ಮಾತಿಗೊಪ್ಪಿದರ ನಿಮಗೆಲ್ಲಾ ಸುಖಾ ಆಗುತೈತಿ. ಯಿಚಾರ ಮಾಡಿ ಹೇಳು."

ಬಾಯಿಯಲ್ಲಿ ತುಂಬಿದ್ದ ಎಲೆಯಡಕೆಯ ರಸವನ್ನು ಪಿಚಕ್ಕನೇ ಉಗುಳಿ ಗಂಗವ್ವ ಎದ್ದು ನಿಂತಳು. "ಹಿಂಗೇನು ನಿಮ್ಮ ಗೌಡರು ಹೇಳೂದು ? ಈಗ ಎಲ್ಲಾ ಗೊತ್ತಾತು ನನಗ. ನನ್ನ ಮಗಳ ಮ್ಯಾಲ ಕಣ್ಣು ಹಾಕಿದಾರೇನು ಅವರು ? ನಾವೇನು ಸೂಳೇರು ಅಂತ ತಿಳಿದಾರೋ ಏನೊ. ನಾವು ಬಡವ ರಾದರೂ ಮಾನ ಮರ್ಯಾದಿ ಬಿಟ್ಟು ಹೋಗುವವರಲ್ಲ ಅನ್ನೂದು ಅವರಿಗಿನ್ನೂ ಗೊತ್ತಾದಂಗ ಕಾಣೂದಿಲ್ಲ." ಎಂದು ಬಡಬಡನೆ ನುಡಿದು ಆಕೆ ಅಲ್ಲಿ ನಿಲ್ಲದೆ ಹೊರಟುಬಿಟ್ಟಳು.

ಕಾಡೇಶಿಯೂ ಎದ್ದು ಅವಸರದಿಂದ ಅವಳನ್ನು ಹಿಂಬಾಲಿಸುತ್ತ— "ಮತ್ತ ನಾ ಏನು ಹೇಳಲಿ ಗೌಡರಿಗೆ ?" ಎಂದು ಕೇಳಿದ.

"ಏನಾರೆ ಹೇಳಿ ಬಿಡು," ಎಂದಿಷ್ಟೇ ನುಡಿದು ಗಂಗವ್ವ ನಡಿಗೆಯನ್ನು ವೇಗವಾಗಿಸಿದಳು.

## ತೆರೆ: ಹದಿಮೂರು

ಅಂದು ರಾತ್ರಿ ಯಮುನಾ ನಿದ್ದೆಹೋದ ಬಳಿಕ ಗಂಗವ್ವ ಹಾಸುಗೆ ಬಿಟ್ಟು ಎದ್ದು ದೀಪವನ್ನು ದೊಡ್ಡದಾಗಿ ಮಾಡಿ ಗಂಡನ ಕಡೆಗೆ ಹೊರಳಿದಳು. ಆತನಿಗೂ ನಿದ್ದೆ ಬಂದಿರಲಿಲ್ಲ; ಕಣ್ಣುಗಳೆರಡನ್ನೂ ಅಗಲವಾಗಿ ತೆರೆದು ಜಂತೆ ಯನ್ನು ದಿಟ್ಟಿಸುತ್ತ ಬಿದ್ದುಕೊಂಡಿದ್ದ.

"ಕೇಳಿದಿಯೇನು ಒಂದು ಸಂಗತಿ ?" ಎಂದು ಮಾತಿಗಾರಂಭಿಸಿದಳು ಗಂಗವ್ವ.

"ಏನು ?" ಎಂದು ಆತ ಕ್ಷೀಣಸ್ವರದಲ್ಲಿ ಕೇಳಿದ.

"ಇವತ್ತು ಗೌಡರು ಒಂದು ಮಾತು ಹೇಳಿದರು. ಯಮುನಿಯ

ವ್ಯಾಲ ಅವರ ಕಣ್ಣು ಬಿದ್ದೈತಿ" ಎಂದು ಪ್ರಾರಂಭಿಸಿ ಆಕೆ ನಡೆದುದೆಲ್ಲವನ್ನು ವರದಿ ಮಾಡಿದಳು.

ಹೊಳೆಪ್ಪ ಹಣೆ ಬಡಿದುಕೊಳ್ಳುತ್ತ— "ಹೀಂಗೇನಾದರೂ ಆದೀತಂತ ಮೊದಲೇ ಅನಿಸಿತ್ತು ನನಗ. ಪ್ರಾಯದ ಹೆಣ್ಣು ಅಂದರ ಯಾರಾದರೂ ಕಣ್ಣು ಹಾಕತಾರ. ಆದಕ್ಕs ನಾ ಬಡಕೊಂತೀನಿ, ಅಳಿಯನ ಸಂಗಡ ಕೆಡಿಸಿಕೋಬ್ಯಾಡಾ ಅಂತ. ನೀ ಕೇಳಲಿಲ್ಲ. ಎಲ್ಲಾ ಕೆಡಿಸಿ ರಾಡೀ ಮಾಡಿದಿ. ರೂಪಾಯಿ ಆಸೇಕ ಬಿದ್ದು ಮಗಳ ಬಾಳೇವು ಹಾಳು ಮಾಡಿದಿ. ಈಗ ನೋಡು ಎಂಥಾ ಪರಸಂಗ ಬಂತು.... ಈಗೇನ ಮಾಡಬೇಕಂತ ಮಾಡೀದೀ?" ಎಂದು ಕೇಳಿದ.

"ಆದದ್ದು ಆಗಿ ಹೋತೇಳು. ಈಗೇನು ಮಾಡೂಣು ?"

"ನನ್ನೇನು ಕೇಳುತೀ? ನಿನಗ ತಿಳಿದಾಂಗ ಮಾಡು. ಬೇಕಾದರ ಮಗಳನ್ನೊಯ್ದು ಕೊಡು ಗೌಡಗ."

"ಅಬ್ರೂ ಗಿಬ್ರೂ ಐತ್ಯೋ ಇಲ್ಲೋ ನಿನಗ? ಹಿಂಗ್ಯಾಕ ಮಾತಾಡುತೀ?" ಎಂದು ಕೋಪದಿಂದ ನುಡಿದಳು ಗಂಗವ್ವ.

"ಇರುವ ಅಬ್ರೂ ಎಲ್ಲಾ ಎಂದೋ ಕಳದುಬಿಟ್ಟೆದ್ದೀ. ತೆರವಿನ ಆಸೆಗಾಗಿ ಅಳಿಯನ್ನ ದೂರ ಮಾಡಿಗಾಗs ಹೋಯ್ತು. ನಮ್ಮ ಅಬ್ರೂ ಮಾನಾ ಮರ್ಯಾದೀ ಎಲ್ಲಾ........" ಎಂದು ಆಕ್ಕಸದಿಂದ ನುಡಿದ ಹೊಳೆಪ್ಪ. ಆಯಾಸದಿಂದ ಆತನಿಗೆ ಕೆಮ್ಮು ಬಂದಿತು. ಐದಾರು ನಿಮಿಷಗಳ ವರೆಗೆ ಒಂದೆ ಸಮನೆ ಕೆಮ್ಮುತ್ತಿದ್ದ.

ಕೋಪ, ಅಸಹಾಯಕತೆಗಳಿಂದಾಗಿ ಗಂಗವ್ವನ ಕಣ್ಣುಗಳಲ್ಲಿ ನೀರೂರಿತು. ಆಕೆ ಬಿಕ್ಕುತ್ತ ಬಿಕ್ಕುತ್ತ,

"ಎಲ್ಲಾರಿಗೂ ಕೆಟ್ಟಾಗಿ ಬಾಳೂದು ನನ್ನ ಹಣ್ಯಾಗ ಬರದಿರಬೇಕು. ಶಿವನೆ, ಲಗೂ ಒಯ್ಯಪ್ಪಾ ನನ್ನ...." ಎಂದು ಗೋಗರೆಯತೊಡಗಿದಳು.

ಹೆಂಡತಿಯ ಅಳುವನ್ನು ಕಂಡು ಹೊಳೆಪ್ಪನಿಗೆ ಕನಿಕರ ಬಂದಿರಬೇಕು. ಆತನೆಂದ.

"ಅತ್ತರೇನಾಗುತೈತಿ ? ನನ್ನದೊಂದು ಮಾತು ಕೇಳುತೀ ಏನು ?"

ಕಂಬನಿದುಂಬಿದ ಕಣ್ಣುಗಳನ್ನು ಆಕೆ ಗಂಡನ ಕಡೆಗೆ ತಿರುಗಿಸಿದಳು.

" ಆದದ್ದು ಆಯ್ತು. ಈಗಾದರೂ ಯಮುನೀನ ಕರಕೊಂಡು ಹೋಗಿ ಭೀಮಣ್ಣನ ಹತ್ತಿರ ಬಿಟ್ಟು ಬರುತೀಯೇನ ನೋಡು. "

ಗಂಗವ್ವ ಬೆಚ್ಚಿಬಿದ್ದಳು. ಆಕೆಯ ಅಳುವೂ ಒಮ್ಮೆಲೆ ತಡೆದು ನಿಂತಿತು. ಸೆರಗಿನಿಂದ ಕಣ್ಣುಗಳನ್ನೊರೆಸಿಕೊಳ್ಳುತ್ತ—

" ಏನು ? ಏನಂತೀ ? ಮತ್ತ ಅವನ ಹತ್ತರ ಹೋಗಬೇಕು ? " ಎಂದಳು.

" ಈ ಸಂಕಟದಿಂದ ಪಾರಾಗಬೇಕ ಅಂತಿದ್ದರ ಹೋಗಾಕs ಬೇಕು. ಗಂಡನ ಹತ್ತರ ಇದ್ದರ ಹುಡುಗಿ ಮರ್‍ಯಾದಿಯಿಂದ ಬಾಳೇವು ಮಾಡೀತು. ಸವತಿಯೂ ಇರಲೊಲ್ಲಳ್ಯಾಕ ? "

" ಛೆ ಅದೆಂದೂ ಆಗಾಕಿಲ್ಲ. ನನ್ನ ಪ್ರಾಣ ಹೋದರೂ ನನ್ನ ಮಗಳನ್ನ ಆ ಭಡವನ ಮನಿಗೆ ಕಳಿಸಾಕಿಲ್ಲ.... "

" ಹಂಗಾದರ ಗೌಡನ ಮನಿಗೆ ಕಳಿಸು. ಅವನ ರಂಡಿಯಾಗಿ ಬಾಳಲಿ ನಿನ್ನ ಮಗಳು.... " ಎಂದು ತ್ವೇಷದಿಂದ ನುಡಿದು ಹೊಳೆಪ್ಪ ಗೋಡೆಯಕಡೆಗೆ ಹೊರಳಿ ಮಲಗಿಕೊಂಡ.

ಗಂಗವ್ವನ ಕಣ್ಣುಗಳಲ್ಲಿ ಮತ್ತೆ ಕಂಬನಿ ಚಿಮ್ಮಿತು. ಹಾಗೆಯೇ ಕೌದಿಯ ಮೇಲೆ ದೇಹವನ್ನೊರಗಿಸಿದಳು. ಪಕ್ಕದಲ್ಲಿ ಸುಖವಾಗಿ ನಿದ್ದೆ ಮಾಡುತ್ತಿದ್ದ ಮಗಳನ್ನು ನೋಡುತ್ತಲೂ ಅವಳ ಕರುಳು ಮರುಗತೊಡಗಿತು. ಎಡಗೈಯನ್ನು ತಲೆಯ ಕೆಳಗಿಟ್ಟುಕೊಂಡು ಬಲಗಡೆ ತಿರುಗಿ ಮಲಗಿದ್ದಳು ಯಮುನಾ. ಚಿಮಣಿ ದೀಪದ ಮಂದ ಬೆಳಕು ಅವಳ ಮುಖದ ಮೇಲೆ ಹರಡಿ ಅವಳ ಚೆಲುವಿಕೆಯನ್ನೂ ಮುಗ್ಧತೆಯನ್ನೂ ತೆರೆದು ತೋರಿಸುತ್ತಿತ್ತು. ಬಳ್ಳಿಯ ಮೇಲೆ • ಬೆಳೆದು ಅರಳಿ ನಿಂತ ಮಲ್ಲಿಗೆಯಂತೆ ತೋರುವ ತನ್ನ ಮಗಳು ಗೌಡನ ಸೂಳೆಯಾಗುವುದೇ ! ಸೂಳೆ ! ಗಂಗವ್ವನ ಮೈ ನಡುಗಿತು. ಮಗಳ ಕಡೆಗೆ ಸರಿದು ಮಮತೆಯಿಂದ ಅವಳ ತಲೆಗೂದಲಿನ ಮೇಲೆ ಮೆಲ್ಲಗೆ ಕೈ ಆಡಿಸಿದಳು. ಯಮುನಾ ಕನಸು ಕಾಣುತಿದ್ದಳೇನೋ, ತುಟಿಗಳನ್ನಗಲಿಸಿ ಅಸ್ಪಷ್ಟವಾದ ದನಿಯಲ್ಲಿ ಏನನೋ ಪುಟುಪುಟಿಸಿದಂತೆ ಕೇಳಿಸಿತು. " ಕನಸು ಬಿದ್ದೈತ್ಯೋ ಏನೋ. ಅದಕs ಮಾತಾಡುತಾಳು. " ಎಂದು ತನ್ನಷ್ಟಕ್ಕೇ ಹೇಳಿಕೊಂಡು ದೀಪವನ್ನಾರಿಸಿ ಮಲಗಿಕೊಂಡಳು ಗಂಗವ್ವ.

ಅಂದು ರಾತ್ರಿ ಬಹಳ ಹೊತ್ತಿನ ವರೆಗೂ ಆಕೆಗೆ ನಿದ್ದೆ ಬರಲಿಲ್ಲ. "ಮುಂದೇನು ? ಹ್ಯಾಂಗ ಮಾಡೂದು ? ಅವ ಹೇಳಿದ ಹಂಗ ಯಮುನಿಯನ್ನ ಭೀಮನ ಮನಿಗೇ ಕಳಿಸಿಬರೂದೇ ? ಬ್ಯಾರೆ ಹಾದಿ ಇದ್ದಾಂಗ ಕಾಣೂದಿಲ್ಲ. ಭೀಮನ ಮನಿಗೆ ಕಳಿಸೂದು ಅಂದರ, ನಾ ಅವಗ ಸೋತ ಹಂಗ. ಮಗಳನ್ನ ಬ್ಯಾರೆಯವಗ ಕೊಟ್ಟು ಭೀಮನ ಮೂಗು ಕೊಯ್ಯಬೇಕಂತ ಮಾಡಿದ್ದಿನಿ ನಾ. ಈಗ ನನ್ನ ಮೂಗs ಕೊಯ್ದು ಹೋಗುವಾಂಗ ಆತಲ್ಲ ! " ಎಂದೆಲ್ಲ ಯೋಚಿಸುತ್ತ ಕೌದಿಯ ಮೇಲೆ ಹೊರಳಾಡುತ್ತಿದ್ದಳು. ತಿಗಣೆಗಳ ಕಾಟ ಬೇರೆ. ನಟ್ಟಿರುಳು ದಾಟಿದರೂ ನಿದ್ದೆ ಬರಲಿಲ್ಲ. ಬೇಸರದಿಂದ ಎದ್ದು, ದೀಪ ಹೊತ್ತಿಸಿ, ತಿಗಣೆಗಳನ್ನು ಹಿಡಿದು ಕೊಲ್ಲತೊಡಗಿದಳು. ಹತ್ತು ಹದಿನೈದು ನಿಮಿಷ ಆ ಕೆಲಸ ಸಾಗಿತು. ಮನೆಯಲ್ಲೆಲ್ಲ ತಿಗಣೆಗಳ ನೆತ್ತರಿನ ದುರ್ಗಂಧ ಪಸರಿಸಿತು.

ಯಮುನಳ ದೇಹದ ಕೆಳಗೆ ಅವಿತುಕೊಂಡು ಪ್ರಾಣ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ ತಿಗಣೆಗಳನ್ನು ಹಿಡಿದು ಕೊಲ್ಲಲೆಂದು ಗಂಗವ್ವ ಮಗಳನ್ನು ಅತ್ತ ಹೊರಳಿಸಿದಳು. ಯಮುನಾಗೆ ಎಚ್ಚರವಾಯಿತು.

"ಏನವ್ವ, ಏನು ಮಾಡುತಿದ್ದೀ ಇಂಥಾ ರಾತ್ರಿಯೊಳಗ ?"

"ಯಾಕೋ ನಿದ್ದೆ ಹತ್ತಲಿಲ್ಲ. ತಗಣಿ ಬ್ಯಾರೆ ರಕ್ತಾ ಹೀರಾಕ ಹತ್ತಿದ್ದವು. ಒರೀತಾ ಕುಂತೀನಿ."

ಯಮುನಳೂ ಎದ್ದು ತಾಯಿಯ ಕೆಲಸದಲ್ಲಿ ನೆರವಾಗತೊಡಗಿದಳು. ಅವಳ ದೇಹದ ಕೆಳಗೆ ಅಡಗಿಕೊಂಡಿದ್ದ ತಿಗಣೆಗಳೂ ಸಿಕ್ಕುಬಿದ್ದು ಪ್ರಾಣ ಕಳೆದುಕೊಳ್ಳತೊಡಗಿದುವು.

ತಿಗಣೆಗಳನ್ನು ಕೊಲ್ಲುತ್ತಿದ್ದ ಹಾಗೆ ಗಂಗವ್ವ ಕೇಳಿದಳು:

"ಭೀಮಣ್ಣನ ಹತ್ತರಲೇ ನಿನ್ನ ಕಳಿಸಬೇಕಂತ ಇವ ಹೇಳತಾನ. ನೀನೇನಂತೀ ಯಮನೀ ?"

ಯಮುನಾ ಬೆಚ್ಚಿ ಬಿದ್ದು, ಪಿಳಿ ಪಿಳಿ ಕಣ್ಣು ಬಿಡುತ್ತ ತಾಯಿಯನ್ನು ವಿಚಿತ್ರವಾಗಿ ದಿಟ್ಟಿಸಿದಳು. ಭೀಮಣ್ಣನ ಹತ್ತಿರ ತನ್ನನ್ನು ಕಳಿಸುವ ವಿಚಾರ ಮತ್ತೆ ಬಂದೀತೆಂದು ಆಕೆ ನಿರೀಕ್ಷಿಸಿರಲಿಲ್ಲ. ಆತನ ಹಾಗು ತನ್ನ ಸಂಬಂಧ ಎಂದೋ ಮುರಿಯಿತೆಂದೇ ಆಕೆ ನಂಬಿಕೊಂಡಿದ್ದಳು. ಅವನಿಂದ ಸೋಡ

ಚೀಟಿ ತೆಗೆದುಕೊಂಡು ಬರುವ ಪ್ರಯತ್ನ ನಡೆದಿದೆಯೆಂದೂ, ಅದು ಸಿಕ್ಕಿದ ಬಳಿಕ ತನ್ನನ್ನು ಬೇರೆ ವರನಿಗೆ ಮಾಡಿಕೊಡುವರೆಂದೂ ಆಕೆ ಭಾವಿಸಿದ್ದಳು. ಬೇರೆ ವರನನ್ನು ಹುಡುಕಬೇಕಾದ ಅಗತ್ಯವೂ ಇರಲಿಲ್ಲ. ರಾಮು ಇಲ್ಲಿಯೇ ಇರುವನಲ್ಲ? ಆತನೂ ತಮ್ಮ ಜಾತಿಯವನೇ. ಇಬ್ಬರಿಗೂ ಜೊತೆ ಚೆನ್ನಾಗಿ ಕೂಡುತ್ತದೆ. ತನ್ನ ತಂದೆ ತಾಯಿಗಳು ಸಂತೋಷದಿಂದ ತನ್ನನ್ನು ರಾಮುನಿಗೆ ಕೊಡಬಹುದು. ಆತನೂ ಇದೇ ಊರಲ್ಲಿ ಇರುವವ. ಮದುವೆ ಯಾದ ಬಳಿಕ ಗೌಡರು ಅವನ ಸಂಬಳವನ್ನೂ ಹೆಚ್ಚಿಸಿಯಾರು, ಆತನೂ ಪರದೇಶಿ. ಬೇರೆ ಯಾರೂ ಇಲ್ಲ. ತಮ್ಮ ಮನೆಯಲ್ಲೇ ಇದ್ದಾನು, ತನ್ನ ತಂದೆ ತಾಯಿಗಳಿಗೂ ಒಂದು ಆಧಾರವಾದೀತು—ಎಂದೆಲ್ಲ ಆಕೆ ಯೋಚಿಸಿ ಕೊಂಡಿದ್ದಳು. ಭೀಮು.... ಆತನ ನೆನಪೂ ಸಹ ಆಕೆಗಿದ್ದಂತಿರಲಿಲ್ಲ. ಅವಳ ಮನಸ್ಸೆಲ್ಲವನ್ನೂ ರಾಮನೇ ಆಕ್ರಮಿಸಿಕೊಂಡಿದ್ದ.

"ಏನಂತೀ ಯಮುನೀ?" ಮತ್ತೆ ಕೇಳಿದಳು ಗಂಗವ್ವ.

"ನನ್ನ ಚಿಕ್ಕಳ್ಳಿಗೆ ಕಳಿಸಬ್ಯಾಡ ಅವ್ವ. ನಾ ಇಲ್ಲೇ ಇರುತೀನಿ," ಎಂದು ನುಡಿದು ಯಮುನಾ ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಕಳಿಸದಿದ್ದರ ನಡಿಯೂ ಹಾಂಗಿಲ್ಲವ್ವ. ಬ್ಯಾರೆ ಏನೂ ಹಾದಿ ಯಿಲ್ಲ."

"ಹ್ಯಾಂಗಾದರೂ ಮಾಡು ಅವ್ವ. ಅಂತೂ ಅಲ್ಲಿಗೆ ನನ್ನ ಕಳಿಸ ಬ್ಯಾಡ."

ಗಂಗವ್ವ ಯೋಚಿಸತೊಡಗಿದಳು. ಗಂಡನ ಹತ್ತಿರ ಹೋಗುವ ಇಚ್ಛೆ ತನ್ನ ಮಗಳಿಗೂ ಇಲ್ಲ. ಅವಳನ್ನು ಕಳಿಸುವ ಇಚ್ಛೆ ತನಗೂ ಇರಲಿಲ್ಲ. ಈಗಲೂ ಇಲ್ಲ. ಆದರೆ....ಅವಳನ್ನಿಟ್ಟುಕೊಂಡರೆ ಗೌಡರ ಕಾಟ. ಅವರ ನ್ನೆದುರಿಸಿ ನಿಂತು ಈ ಊರಲ್ಲಿ ಬಾಳುವೆ ಮಾಡಿಯೇವೆಂಬ ಧೈರ್ಯ ತಮ ಗಿಲ್ಲ. ಮೊನ್ನೆ ಮೊನ್ನೆಯೆ ಅವರಿಂದ ಎರಡು ನೂರು ರೂಪಾಯಿ ಸಾಲ ಬೇರೆ ತಂದುದಾಗಿದೆ. ಅವರ ಇಚ್ಛೆಗೆ ವಿರುದ್ಧವಾಗಿ ವರ್ತಿಸಿದಲ್ಲಿ ಆ ಸಾಲದ ಹಣವನ್ನು ತಕ್ಷಣ ಕೊಡಬೇಕಾಗುವುದು. ಎಲ್ಲಿಂದ ತರುವುದು ಅಷ್ಟೊಂದು ಹಣವನ್ನು? ತನ್ನ ಗಂಡನಿಗೆ ಗುಣವಾದೀತು, ಆತ ದುಡಿದು ಸಾಲ ತೀರಿಸಿ ಯಾನು ಎಂಬ ವಿಚಾರವನ್ನಿಟ್ಟುಕೊಂಡು ತಾನು ಸಾಲ ತಂದಿದ್ದಳು. ಆತನಿಗೆ

ಗುಣವಾಗುವ ಲಕ್ಷಣಗಳೇನೂ ಕಾಣಿಸುತ್ತಲಿಲ್ಲ. ಇನ್ನೂ ಎಷ್ಟು ದಿನ ಆತ ಹಾಗೆಯೆ ಹಾಸುಗೆ ಹಿಡಿದು ಬಿದ್ದುಕೊಂಡಿರುವನೊ ಏನೊ. ಏನನ್ನಾದರೂ ಮಾಡಿ ಸಾಲ ತೀರಿಸಬೇಕೆಂದರೆ ತಮ್ಮದೆಂದು ಹೇಳಿಕೊಳ್ಳುವಂಥದೇನೂ ಉಳಿಯಲಿಲ್ಲ. ಹೊಲ ಎಂದೋ ಕೈಬಿಟ್ಟಿದೆ. ಮನೆಯಲ್ಲಿದ್ದ ಒಂದು ಎಮ್ಮೆಯೂ ಮಾರಿಹೋಯಿತು. ಅವರಿವರ ಹೊಲಗಳಲ್ಲಿ ಕೂಲಿ ಮಾಡಿ ಬಂದ ಕಾಳಿನಲ್ಲಿ ತಾವೆಲ್ಲರೂ ಹೊಟ್ಟೆ ಹೊರೆಯಬೇಕಾಗಿದೆ. ಇನ್ನು ಎರಡು ನೂರು ರೂಪಾಯಿ ಸಾಲ ತೀರಿಸುವ ಬಗೆಯೇನು? ಮಗಳು ಇಲ್ಲಿಯೆ ಇದ್ದಲ್ಲಿ ಗೌಡರು ಕಾಟ ಕೊಡದಿರಲಾರರು. ಅವಳನ್ನು ಈ ಊರು ಬಿಡಿಸುವದೇ ಸರಿಯಾದ ಉಪಾಯ. ಕೆಲದಿನಗಳ ಮಟ್ಟಿಗೆ ಬೇರೆ ಎಲ್ಲಿಗಾದರೂ ಕಳಿಸೋಣವೆಂದರೆ ತಮಗೆ ಆಪ್ತೇಷ್ಟರಾರೂ ಇಲ್ಲ. ಭೀಮಣ್ಣನ ಮನೆಗೆ ಕಳಿಸುವುದೊಂದೇ ಉಳಿಯಿತು.

ಹೌದು. ಬೇರೆ ಉಪಾಯವೇ ಇಲ್ಲ.

ಆ ರಾತ್ರಿ ಯಮುನಳಿಗೆ ಮತ್ತೆ ನಿದ್ದೆ ಬರಲಿಲ್ಲ. ಬೆಳಗಾಗುತ್ತಲೂ ಸೀರೆಯನ್ನೊಗೆದುಕೊಂಡು ಬರುವ ನೆವದಿಂದ ಹಳ್ಳಕ್ಕೆ ಹೋದಳು. ಒಗೆಯುವ ಸ್ಥಳದ ಸಮೀಪದಲ್ಲಿಯೇ ಗೌಡರ ತೋಟ. ಯಾತದ ಬಾವಿ. ಯಮುನಾ ಹಳ್ಳಕ್ಕೆ ಬಂದ ವೇಳೆಯಲ್ಲಿ ಮೊಟ್ಟೆ ಹೊಡೆಯುತ್ತಲಿದ್ದ ರಾಮ ಆಕೆ ದೃಷ್ಟಿಗೆ ಬೀಳುತ್ತಲೂ ಎಂದಿನಂತೆ ನಗುತ್ತಾ ಅವಳ ಕಡೆಗೆ ನೋಡಿದ. ಯಮುನಳ ಮುಖದ ಮೇಲೆ ನಗೆ ಮೂಡಲಿಲ್ಲ.

"ಯಾಕೆ ಯಮುನೀ, ಮಾರಿ ಯಾಕೋ ಇಳದೈತಲ್ಲ?"

"ನನ್ನ ಚಿಕ್ಕಪ್ಪಗೆ ಕಳಿಸಬೇಕಂತ ಮತ್ತ ಮಸಲತ್ತು ನಡೆದಂಗ ಕಾಣುತೈತಿ ರಾಮು."

"ಮತ್ತ್ಯಾಕಂತ ಅಲ್ಲಿಗೆ?"

"ಏನೋ. ಅಂತೂ ಅವ್ವ ಹೇಳುತಿದ್ದಳು ರಾತ್ರ್ಯಾಗ, ಅಲ್ಲಿಗೆ ಹೋಗೂದರ ಬದಲು ಭಾವಿಯೊಳಗ ಹಾರಿಬಿಡೂದು ಮೇಲು." ಹೇಳುತ್ತಿದ್ದ ಹಾಗೆ ಅವಳ ಕಣ್ಣುಗಳೆರಡೂ ನೀರಿನಿಂದ ತುಂಬಿದುವು. ಅಲ್ಲಿ ನಿಲ್ಲದೆ ಆಕೆ ಹಳ್ಳದ ಕಡೆಗೆ ಸಾಗಿದಳು.

ಮೊಟ್ಟೆಯನ್ನು ನಿಲ್ಲಿಸಿ ರಾಮು ಅವಳನ್ನು ಹಿಂಬಾಲಿಸಿದ. ಬಟ್ಟೆ ತೊಳೆಯುವ ಕಲ್ಲುಗಳ ಹತ್ತಿರದಲ್ಲಿಯೆ ಒಂದು ಬಿದಿರುಮೆಳೆಯಿದ್ದಿತು. ಅದರ ಹತ್ತಿರ ಅಡಗಿ ನಿಂತು ಯಾರಿಗೂ ಕಾಣಿಸದಂತೆ, ಕೇಳಿಸದಂತೆ ಗುಟ್ಟಾಗಿ ಮಾತಾಡಲು ಅನುಕೂಲವಿದ್ದಿತು.

ಮೆಳೆಯ ಹತ್ತಿರ ಅವಳನ್ನು ಕರೆದುತಂದು ರಾಮು ಕೇಳಿದ:

"ಬಾವಿಗೀವಿ ಅಂತ ಏನಾರೆ ಹುಚ್ಚುಚ್ಯಾರ ಮಾಡಾಕ ಹೋಗಬ್ಯಾಡ ಯಮುನೀ. ನನ್ನ ಆಣೆ ನಿನಗ."

ಕೈಯಲ್ಲಿನ ಸೀರೆಯನ್ನು ಕೆಳಕ್ಕೆಸೆದು ಯಮುನಾ ಆತನ ಎದೆಯಮೇಲೆ ತಲೆಯನ್ನೊರಗಿಸಿ ಬಿಕ್ಕತೊಡಗಿದಳು.

"ಶೂ ಶೂ. ಅಳಬ್ಯಾಡ ಯಮುನೀ. ಸುಮ್ಮನಾಗು. ಏನಾತು ಈಗ ಅಂಥಾದ್ದು ?"

ಅಳುವುದನ್ನು ತಡೆದು ಆಕೆ ನಸುಮುನಿಸಿನಿಂದ ಅವನನ್ನು ದಿಟ್ಟಿಸುತ್ತ ಹೇಳಿದಳು:

"ಏನಾಯ್ತು ಅಂತೀಯಲ್ಲಾ, ಏನುಳೀತು ಆಗೂದು? ಇನ್ನೂ ಏನಾಗಬೇಕು? ನನ್ನ ಕಳಿಸಬೇಕಂತ ಮಾಡಿದಾರ. ಹೋಗು ಅಂತೀಯೇನು ನೀನೂ?"

ರಾಮು ತಬ್ಬಿಬ್ಬಾಗಿ ನುಡಿದ: "ನಿಮ್ಮ ಅವ್ವ ಅಪ್ಪ ನಿನ್ನ ಕಳಿಸಬೇಕು ಅಂದರ ನಾ ಬ್ಯಾಡಾ ಅನ್ನೂದಕ್ಕಾಗುತ್ತೈತೇನು ಯಮುನೀ? ಹಾಂಗ ಅನ್ನೂದಕ್ಕ ನಾ ಯಾರು? ನನ್ನ ಮಾತು ಕೇಳಿ ನಗಾಕಿಲ್ಲೇನು ಅವರಿಬ್ಬರೂ?"

"ನನ್ನ ಅಲ್ಲಿಗೆ ಕಳಿಸುವ ಮನಸು ಅವ್ವನಿಗೂ ಇಲ್ಲ. ನೀ ಒಂದು ಮಾತು ಕೇಳಿ ನೋಡಲಾ?"

"ಏನಂತ ಕೇಳಲಿ?"

ಅವನಿಂದ ದೂರ ಸರಿದು ಯಮುನಾ ತಿರಸ್ಕಾರ ಬೆರೆತ ದನಿಯಲ್ಲಿ ನುಡಿದಳು:

"ಥೂ. ಸುಡಲಿ ನಿನ್ನ ಜನುಮಾ. ಎಂಥಾ ಬುದ್ಧಿಗೇಡಿ ಇದ್ದೀಯೊ. ಏನು ಕೇಳಬೇಕು ಅನ್ನೂದನ್ನೂ ನಾನss ಹೇಳಬೇಕೇನು ನಿನಗ? ನಿನಗೇನೂ ತಿಳಿಯೂದಿಲ್ಲಾ? ನಾ ಯಾರೂ ಅಲ್ಲೇನು ನಿನಗ? ನನ್ನಮಾಡಿಕೋ

ಬೇಕಂತ ಮನಸ್ಸಾದಥೂ ಐತ್ಯೋ ಇಲ್ಲ್ಯೋ ನಿನಗ ? "

ರಾಮನ ಮಿದುಳಿನಲ್ಲಿ ತುಂಬಿಕೊಂಡ ಕತ್ತಲಲ್ಲಿ ಬೆಳಕಿನ ಕಿರಣ ವೊಂದು ಸುಳಿದ ಹಾಗಾಯಿತು. ಆತ ಯಮುನಳನ್ನು ವಿಸ್ಮಯದಿಂದ ದಿಟ್ಟಿ ಸುತ್ತ ಕಣ್ಣುಗಳನ್ನು ಅಗಲಗೊಳಿಸಿದ, ಹುಬ್ಬುಗಳನ್ನು ಮೇಲಕ್ಕೇರಿಸಿದ, ತುಟಿಗಳ ಮೇಲೆ ನಾಲಗೆಯನ್ನೋಡಿಸಿದ, ಬಲಗೈಯ ಬೆರಳಿನಿಂದ ತಲೆ ಕೆರೆದುಕೊಂಡ, ಅನಂತರ ಧ್ವನಿಯೆತ್ತಿ ಹೇಳಿದ:

" ನೀ ಏನೂ ಚಿಂತೀ ಮಾಡಬ್ಯಾಡ ಯಮುನೀ. ನಿನ್ನ ಇದರಿಂದ ಪಾರು ಮಾಡುತೀನಿ. ಇವೊತ್ತು ಸಂಜೀ ಕಡೆಗೆ ನಿಮ್ಮ ಮನಿಗೆ ಹೋಗಿ ಹೊಳೆಪ್ಪಮಾವನ್ನ ಕೇಳುತೀನಿ. "

ಯಮುನಳ ಮುಖದ ಮೇಲೆ ಸಮಾಧಾನ ಮೂಡಿತು. " ಹಾಂಗs ಮಾಡು. ಅಪ್ಪನ್ನೂ ಕೇಳು. ಅವರೂ ಒಪ್ಪಲಿಲ್ಲಾಂದರ ಇಬ್ಬರೂ ಕೂಡಿ ಎಲ್ಲಿಗಾದರೂ ಓಡಿ ಹೋಗೂಣು. ಏನಂತೀ ? "

ಓಡಿ ಹೋಗುವುದು !

ರಾಮು ಬೆಟ್ಟಿ ಬಿದ್ದ. ಓಡಿ ಹೋಗುವಂಥ ಕ್ರಾಂತಿಕಾರಕ ಯೋಜನೆ ಈ ಮೊದಲೆಂದೂ ಆತನ ತಲೆಯಲ್ಲಿ ಸುಳಿದಿರಲಿಲ್ಲ. ಚಿಕ್ಕಂದಿನಿಂದಲೂ ಗೌಡರ ಹೆದರಿಕೆಯಲ್ಲಿ ಬೆಳೆದುದರಿಂದ ಅಂಥ ವಿಚಾರಗಳಿಗೆ ಆಸ್ಪದವೇ ಇರ ಲಿಲ್ಲ. ಗೌಡರ ಅಪ್ಪಣೆ ಪಡೆಯದೆ ತಾನೊಮ್ಮೆ ಸಿನೀಮಾ ನೋಡಲು ನಗರಕ್ಕೆ ಹೋದುದೂ, ಮರಳಿ ಬಂದ ಬಳಿಕ ಗೌಡರು ತನ್ನನ್ನು ಬಾರುಕೋಲಿನಿಂದ ಥಳಿಸಿದುದೂ ಆತನ ನೆನಪಿಗೆ ಬಂದಿತು. ಅಂದಿನಿಂದ ಆತ ಊರು ಬಿಟ್ಟು ಎಲ್ಲಿಗೂ ಹೋಗಿರಲಿಲ್ಲ. ಈಗ ಓಡಿಹೋಗುವುದು ! ಆ ವಿಚಾರದೊಂದಿಗೆ ಆತನ ಎದೆಯೆಲ್ಲವೂ ಕಂಪಿಸಿದಂತಾಯಿತು.

ಯಮುನಾಗೆ ಭರವಸೆ ಕೊಟ್ಟ ಮೇರೆಗೆ ಆತ ಅಂದು ಸಾಯಂಕಾಲ ಅವರ ಮನೆಗೆ ಹೋಗಿ ಅವಳ ತಂದೆ ತಾಯಿಗಳನ್ನು ಕಂಡ. ಎಂದೂ ತಮ್ಮಲ್ಲಿಗೆ ಬರದಿದ್ದ ರಾಮು ಅಂದು ಅಕಸ್ಮಾತ್ತಾಗಿ ಬಂದುದನ್ನು ಕಂಡು ಅವ ರಿಗೆ ಅಚ್ಚರಿಯಾಗದಿರಲಿಲ್ಲ. ಅವನ ಮುಖಾಂತರ ಗೌಡರೇ ಇನ್ನೇನನ್ನಾ ದರೂ ಹೇಳಿ ಕಳಿಸಿರುವರೊ ಏನೊ ಎಂದೂ ದಿಗಿಲಾಯಿತು ಗಂಗವ್ವನಿಗೆ.

" ಹ್ಯಾಂಗೈತಿ ಈಗ ಮಾವ ? " ಎಂದ ರಾಮು.

" ಹಾಂಗs ಐತಿ. ನಾ ಏನೂ ಇದರಿಂದ ಉಳಿಯುವ ಹಾಂಗ ಕಾಣು ವದಿಲ್ಲ ತಮ್ಮ. ಬಾ, ಕುಂಡ್ರು. ಅದೇನು ಇತ್ತಲಾಗ ಬಂದಿ ? ಗೌಡರು ಕಳಿಸಿದರೇನು ? "

" ಅವರ್‍ಯಾತಕ್ಕ ಕಳಿಸುತಾರ? ನಾನs ಬಂದೀನಿ ನಿನ್ನ ನೋಡಿ-ಕೊಂಡು ಬರೂಣಾಂತ.... " ಎಂದು ನುಡಿದು ರಾಮ ಸುಮ್ಮನಾದ. ಯಮು ನಳ ವಿಷಯವನ್ನು ಹೇಗೆ ಎತ್ತುವುದೆಂಬುದೇ ಅವನಿಗೆ ಹೊಳೆಯಲಿಲ್ಲ. ಅಂಥ ವಿಷಯವನ್ನಾತ ಈ ಮೊದಲೆಂದೂ ಯಾರೆದುರಿಗೂ ಮಾತನಾಡಿದವ ನಲ್ಲ. ದನ ಕಾಯುವುದು, ತೋಟದ ಕೆಲಸ ಮಾಡುವುದು, ಕಟ್ಟಿಗೆ ಒಡೆ ಯುವುದು, ಊಟ ಮಾಡಿ ನಿದ್ದೆ ಹೋಗುವುದು—ಇವುಗಳನ್ನುಳಿದು ಇನ್ನಾವ ವಿಷಯದಲ್ಲಿಯೂ ಆತನಿಗೆ ತಿಳಿವಳಿಕೆಯಿರಲಿಲ್ಲ. ಅಂಥವನು ಈ ಸೂಕ್ಷ್ಮ ವಿಷಯವನ್ನು ಕುರಿತು ಮಾತನಾಡುವುದಾದರೂ ಹೇಗೆ ?

" ಮತ್ತೇನು ಸುದ್ದಿ ರಾಮು ? " ಎಂದು ಕೇಳಿದಳು ಗಂಗವ್ವ.

ಸುದ್ದಿ ? ರಾಮ ತಲೆ ಕೆರೆದುಕೊಂಡ. ಸುದ್ದಿಯಲ್ಲವೆ, ಗಂಗವ್ವ ಕೇಳುವುದು ? ಬೆಳಗಿನಲ್ಲಿ ಯಮುನಾ ತನಗೆ ಭೆಟ್ಟಿಯಾಗಿದ್ದಳು. ಗಂಡನ ಮನೆಗೆ ಹೋಗುವುದಿಲ್ಲವಾಗಿ ಹೇಳಿದ್ದಳು. ಆ ಬಗೆಗೆ ಮಾತಾಡಲೆಂದೇ ತಾನು ಅಲ್ಲಿಗೆ ಬಂದಿರುವುದಲ್ಲವೆ ?

" ಇಂದು ಹರೀನಟ್ಟಿನ್ಯಾಗ ಯಮುನಿ ಭೇಟಿಯಾಗಿದ್ದಳು ಅತ್ತೀ. ಆಕೀನ್ನ ನೀವು ಚಿಕ್ಕಳ್ಳಿಗೆ ಕಳಿಸುವವರಿದ್ದೀರಂತಲ್ಲ? ನಾನೇನೂ ಅಲ್ಲಿಗೆ ಹೋಗೂದಿಲ್ಲ ಅಂತ ಹೇಳುತಿದ್ದಳು........"

" ಹೀಂಗೇನು ? ನಿನ್ನ ಮುಂದೆ ಹೇಳಿವಳೇನು ? ಇಷ್ಟೊಂದು ಗಂಡುಬೀರಿ ಆಗಿದ್ದಾಳಂತ ಯಾರಿಗೆ ಗೊತ್ತಿತ್ತು ? ಮತ್ತೇನು ಹೇಳಿದಳು ರಾಮು ? " ಎಂದಳು ಗಂಗವ್ವ.

ರಾಮು ನೆನಪು ಮಾಡಿಕೊಳ್ಳತೊಡಗಿದ. ಮತ್ತೇನನ್ನು ಹೇಳಿದ್ದಳು ತನ್ನ ಹತ್ತಿರ? ಎಲ್ಲಿಗಾದರೂ ಓಡಿಹೋಗೋಣ ಇಬ್ಬರೂ—ಎಂದು ಹೇಳಿ ದ್ದಳಲ್ಲವೆ ? ಆಕೆ ಹಾಗೆ ಹೇಳಿದಳೆಂದು ಇವರೆದುರಿಗೆ ಹೇಳುವುದೇ ಬೇಡವೆ ? ಹೇಳಿದರೆ ಇವರು ಸಿಟ್ಟಾಗಬಹುದೋ ಏನೋ. ಯಮುನಳನ್ನು ಹೊಡೆ ದರೂ ಹೊಡೆಯಬಹುದು. ಆಕೆ ಹೊಡೆತ ತಿನ್ನಲು ತಾನೇ ಕಾರಣವಾಗ

ಬಾರದು ಎನ್ನಿಸಿತು ರಾಮನಿಗೆ.

"ಮತ್ತೇನಿಲ್ಲವ್ವ. ನೀವ್ಯಾರೆ ಪಾಪ ಆಕೀನ್ನ ಅಲ್ಲಿಗ್ಯಾಕ ಕಳಿಸುತೀರಿ? ಇರಲಿ ಬಿಡಿರಲ್ಲ ಇಲ್ಲೇ," ಎಂದಿಷ್ಟೆ ನುಡಿದು ಆತ ಸುಮ್ಮನಾದ. "ನಾನು ಆಕೀನ್ನ ಮಾಡಿಕೋಬೇಕು ಅಂತ ಮನಸೈತಿ. ಏನಂತೀರಿ?" ಎಂದು ಆತನಿಗೆನ್ನಿಸದಿರಲಿಲ್ಲ. ಆದರೆ ಹಾಗೆ ಸ್ಪಷ್ಟವಾಗಿ ಕೇಳುವಷ್ಟು ಧೈರ್ಯ ಆತನಲ್ಲಿರಲಿಲ್ಲ. ಅಂತೆಯೆ, ಆತ ಮತ್ತೊಂದು ಮಾತನ್ನೂ ಆಡದೆ ಅಲ್ಲಿಂದ ಹೊರಟು ಬಂದ.

## ತೆರೆ: ಹದಿನಾಲ್ಕು.

ತಮ್ಮ ಬಯಕೆಗೆ ಉತ್ತರವೆಂದು ಗಂಗವ್ವನಾಡಿದ ಮಾತುಗಳು ಕಾಡೇಶಿಯಿಂದ ತಿಳಿದು ಬಂದಾಗ ಗೌಡರು ಸಿಟ್ಟಿನಿಂದ ಉರಿಯತೊಡಗಿದ್ದರು. ಗಂಗವ್ವನಿಂದ ಈ ಬಗೆಯ ಉತ್ತರ ಬಂದೀತೆಂದು ಅವರು ನಿರೀಕ್ಷಿಸಿರಲಿಲ್ಲ. ಸಾರಾಯಿಯ ಸವಿಗೆ ಮರುಳಾಗಿ ಆಕೆ ತಮ್ಮ ವಿಚಾರಕ್ಕೆ ಸುಲಭವಾಗಿ ಒಪ್ಪಬಹುದೆಂದೇ ಅವರು ತಿಳಿದುಕೊಂಡಿದ್ದರು. ಪ್ರತಿದಿನವೂ ಸಾರಾಯಿ ಕೊಡಿಸಿ ಅಗತ್ಯ ಬಿದ್ದಲ್ಲಿ ಹಣವನ್ನು ಕೊಟ್ಟು ಆಕೆಯನ್ನು ಒಪ್ಪಿಸಬಹುದೆಂದು ಅವರು ಯೋಚಿಸಿದ್ದರು. "ನಾವೇನು ಸೂಳೆಯರೆಂದು ಗೌಡರು ತಿಳಿದಿರುವರೇನು?" ಎಂದು ಗಂಗವ್ವ ಖಡಾಖಂಡಿತವಾಗಿ ಹೇಳಿದಳೆಂಬುದು ಗೊತ್ತಾಗುತ್ತಲೂ ಗೌಡರ ಸ್ವಾಭಿಮಾನ ಕೆರಳಿ ನಿಂತಿತು. ಮೊದಲಿನಿಂದಲೂ ಅವರದು ಹಟದ ಸ್ವಭಾವ. ಸಿರಿವಂತಿಕೆಯ ದರ್ಪ ಬೇರೆ. ಅಧಿಕಾರದ ಶಕ್ತಿ ಬೇರೆ. ಎಲ್ಲವೂ ಸೇರಿ ಗೌಡರ ವಿವೇಚನಾಶಕ್ತಿಯನ್ನು ಕುಂಠಿತಗೊಳಿಸಿ ಅವಿವೇಕವನ್ನು ಪ್ರಬಲಗೊಳಿಸಿದ್ದುವು.

"ಇಷ್ಟು ಸೊಕ್ಕೇನು ಅವಳಿಗೆ ಕಾಡೇಶೀ! ನಿನ್ನಂಥವನಿಗೆ ಹೀಂಗ ಮಾತಾಡುವಷ್ಟು ಧೈರ್ಯ ಬಂತೇನು! ಅವಳ ಮಗಳನ್ನು ಸೂಳೆಯಾಗಿ ಮಾಡೇ ಬಿಡೂಣು. ಹಾಂಗ ಮಾಡದಿದ್ದರ ನನ್ನ ಹೆಸರು ರುದ್ರಗೌಡನಲ್ಲ" ಎಂದು ನುಡಿದು ಗಂಗವ್ವನನ್ನು ಕೂಡಲೆ ಕರೆದುತರುವಂತೆ ಆಜ್ಞಾಪಿಸಿ ಹಳಬನನ್ನು ಓಡಿಸಿದ್ದರು. ಆಕೆ ಮನೆಯಲ್ಲಿರಲಿಲ್ಲ. ಕೂಲಿ ಕೆಲಸಕ್ಕಾಗಿ ದೂರದ

ಪೊಲಕ್ಕೆ ಹೋಗಿದ್ದಳು. “ಸಂಜೀಕ ಮನಿಗೆ ಬಂದ ಕೂಡಲೇ ಬಾ” ಅಂತ ಹೊಳೆಪ್ಪನಿಗೆ ತಿಳಿಸಿ ಹಳಬ ಹೊರಟು ಬಂದಿದ್ದ

ಗಂಗವ್ವ ಕೆಲಸದಿಂದ ಬರುತ್ತಲೂ ಹೊಳೆಪ್ಪ ಆ ವಿಷಯ ತಿಳಿಸಿದ್ದನಾದರೂ ಆಕೆ ಗೌಡರ ಮನೆಗೆ ಹೋಗಿರಲಿಲ್ಲ. ಅವರೇತಕ್ಕಾಗಿ ಕರೆಯಿಸಿರುವರೆಂಬುದು ಆಕೆಗೆ ಗೊತ್ತಿದ್ದಿತು. ಮತ್ತೆ ಅವರ ಹತ್ತಿರ ಹೋಗಿ ವಾದ ವಿವಾದ ಬೆಳೆಸುವದರಲ್ಲಿ ಅರ್ಥವಿರಲಿಲ್ಲ ಅವರೇನನ್ನು ಹೇಳಿದರೂ ಅವರ ಮಾತಿಗೆ ತಾನು ಒಪ್ಪುವಂತಿರಲಿಲ್ಲ. ಎಂದ ಬಳಿಕ ಮತ್ತೆ ಅಲ್ಲಿಗೆ ಹೋಗುವುದರಿಂದ ಉಪಯೋಗವಾವರೂ ಏನು ?–ಎಂದುಕೊಂಡು ಆಕೆ ಮನೆಯಲ್ಲಿಯೆ ಕುಳಿತಳು.

“ಸಾಲ ಬ್ಯಾರೆ ಮಾಡಿಕುಂತೆ ಅವರ ಹತ್ತರ. ನಾ ಬ್ಯಾಡ ಅಂದರ ಕೇಳಲಿಲ್ಲ. ಈಗ ಸಾಲಾ ತೀರಿಸಬೇಕಂತ ಒಮ್ಮೆಲೆ ಕೇಳಿದರ ಏನು ಮಾಡುವಾಕಿ ?” ಎಂದ ಹೊಳೆಪ್ಪ.

“ಏನಾದರೂ ಮಾಡಿದರಾಯ್ತು. ಮೊದಲು ಯಮುನೀನ್ನ ಕರಕೊಂಡು ಹೋಗಿ ಚಿಕ್ಕಳ್ಳಿಗೆ ಬಿಟ್ಟು ಬರುತೀನಿ. ಮುಂದಿಂದು ಮುಂದೆ. ನೀಯೇನೂ ಗಾಬರಿಯಾಗಬ್ಯಾಡ” ಎಂದು ಗಂಡನಿಗೆ ಧೈರ್ಯ ಹೇಳಿದಳು ಗಂಗವ್ವ.

ರಾತ್ರಿಯಾಗಲು ಮಗಳನ್ನು ಎದುರಿಗೆ ಕೂಡ್ರಿಸಿಕೊಂಡು ಗೌಡರ ಹೊಂಚನ್ನೆಲ್ಲ ಅವಳಿಗೆ ವಿಶದವಾಗಿ ತಿಳಿಸಿ, “ಗೌಡರ ರಂಡಿ ಆಗಿ ಇಲ್ಲೇ ಇರಬೇಕಂತೀಯೋ, ಇಲ್ಲಾ ಗಂಡನ ಹತ್ತರ ಹೋಗಿ ಬಾಳೇವು ಮಾಡಬೇಕಂತೀಯೋ ?” ಎಂದು ಕೇಳಿದಳು.

ಗೌಡರ ಹಂಚಿಕೆ ಗೊತ್ತಾಗುತ್ತಲೂ ಯಮುನಾ ಭಯಭೀತಳಾದಳು. ಚಿಕ್ಕಂದಿನಿಂದ ಆಕೆಗೂ ಗೌಡರೆಂದರೆ ವಿಪರೀತ ಹೆದರಿಕೆ. ಅಂಥವರ ಸೂಳೆಯಾಗುವುದು ? ಯಮುನಳಿಗೆ ಅಳು ವುಕ್ಕಿ ಬಂಧಿತು. ಗಂಡನ ಮನೆಗೆ ಹೋಗಿ ಸವತಿಯೊಂದಿಗೆ ಕೂಡಿ ಬಾಳುವುದಾದರೂ ಹೇಗೆ ? ಅದೂ ಕಷ್ಟವೆ. ಇಲ್ಲಿದ್ದರೆ ಇಂಥ ಸಂಕಟ. ರಾಮನಾದರೂ ಈ ವಿಪತ್ತಿನಿಂದ ತನ್ನನ್ನು ಪಾರು ಮಾಡಬಹುದೇ ? ಬೆಳಿಗ್ಗೆ ತಾನು ಹೇಳಿದ ಹಾಗೆ ತನ್ನನ್ನು ಕಟ್ಟಿಕೊಂಡು ಓಡಿ ಹೋಗಲು ಆತ ಸಿದ್ಧನಾಗಬಹುದೇ ? ಸಾಯಂಕಾಲ

ಮನೆಗೆ ಬಂದು ತನ್ನ ತಂದೆತಾಯಿಗಳನ್ನು ಕಂಡು ಮಾತನಾಡುವುದಾಗಿ ಹೇಳಿದ್ದ. ಬಂದಿದ್ದನೊ ಇಲ್ಲವೊ ಯಾರು ಬಲ್ಲರು? ಆತ ಬುದ್ಧಿಗೇಡಿ. ತನಗಿರುವಷ್ಟು ತಿಳಿವಳಿಕೆಯೂ ಆತನಿಗಿಲ್ಲ........ಅಂಥವನನ್ನು ಕಟ್ಟಿಕೊಂಡು ಓಡಿಹೋಗುವುದಕ್ಕಿಂತ ಗಂಡನನ್ನೇ ನೆಚ್ಚಿಕೊಂಡು ಹೇಗಾದರೂ ಬಾಳುವೆ ಸಾಗಿಸಿ ಸತ್ತುಹೋಗುವುದೇ ಮೇಲು ಎಂದೂ ಆಕೆಗೆನ್ನಿಸದಿರಲಿಲ್ಲ.

"ನನ್ನ ಅವರು ಮನ್ಯಾಗ ಕರಕೊಂಡಾರೇನವ್ವ?" ಎಂದು ಆಕೆ ಕೇಳಿದಳು.

"ನೋಡೂಣಂತಿ ಏನನ್ನುತಾರೊ. ಮದುವಿ ಮಾಡಿಕೊಂಡ ತಪ್ಪಿಗೆ ಕರಕೊಳ್ಳಾಕs ಬೇಕಾಗತೈತಿ. ಬೆಳಗಿನ ಜಾವದಾಗ ಎದ್ದು ಹೊರಟು ಬಿಡೂಣು. ನಿನ್ನ ಕಳಿಸಿ ಮತ್ತ ಸಂಜೀಕ ಹೊಳ್ಳಿ ಬರುತೀನಿ ನಾ."

ಕೊಂಚಹೊತ್ತು ಸುಮ್ಮನಿದ್ದು ಕೇಳಿದಳು ಯಮುನಾ.

"ರಾಮು ಬಂದಿದ್ದನೇನವ್ವ?"

"ಹೌದು. ಇದೇ ಈಗ ಬಂದು ಹೋದ. ಅವನ ಮುಂದೂ ನೀ ಹೇಳಿದ್ದಿಯಂತಲ್ಲ, ಚಿಕ್ಕಳ್ಳಿಗೆ ಹೋಗುವದಿಲ್ಲಾ ಅಂತ. ಹಂಗ್ಯಾಕ ಹೇಳಾಕ ಹೋಗಿದ್ದೀಯವ್ವ? ಅವಂದೇನು ಸಂಬಂಧ ನಮಗೆ? ಏನು ಕಳ್ಕೊ ಬಳ್ಕೊ?"

"ಅದುವರೆಗೆ ಮೌನವಾಗಿದ್ದ ಹೊಳೆಪ್ಪ ದನಿಯೆತ್ತಿ ನುಡಿದ: "ರಾಮು ಚಲೋ ಹುಡುಗ. ಸಂಭಾವಿತ. ಭೀಮಣ್ಣನಿಂದ ಸೋಡಚೀಟಿ ಸಿಕ್ಕಿದ್ದರ ಯಮುನೀನ್ನ ರಾಮುಗs ಮಾಡಿಕೊಡಾಕ ಬರುತ್ತಿತ್ತು."

"ಯಮುನಳ ಎದೆಯಲ್ಲಿ ಆಶೆ ಚಿಗುರಿತು. ತಾಯಿಯ ಎಷೆಯ ಮೇಲೆ ತಲೆಯನ್ನೊರಗಿಸಿ ಆಕೆ ಉತ್ತೇಜಿತ ಸ್ವರದಲ್ಲಿ ನುಡಿದಳು:

"ಅಪ್ಪ ಅನ್ನೂ ಹಾಂಗs ಮಾಡವ್ವ. ಹಾಂಗs ಮಾಡು."

ಮಗಳ ಬಯಕೆಯೇನೆಂಬುದು ಗಂಗವ್ವನಿಗೆ ತಿಳಿಯಿತು. ಆಕೆ ಕನಿ ಕರದಿಂದ ಮಗಳ ತಲೆ ಸವರುತ್ತ— "ಮಾಡಾಕ ಬರುತ್ತಿತ್ತು. ಆದರs ಮೊದಲು ಅವ ಸೋಡಚೀಟಿ ಕೊಡಾಕಬೇಕಲ್ಲ? ಸೋಡಚೀಟಿ ಕೊಟ್ಟ ಅಂದರೂ ರಾಮು ಗೌಡರ ಜೀತದಾಳು. ಗೌಡರು ಆಗೂ ನಿನ್ನ ಕಾಡಿಸದ ಬಿಟ್ಟಾರೇನು?" ಎಂದಳು.

ತಾಯಿಯ ಮಾತಿನಲ್ಲಿದ್ದ ಸತ್ಯ ಯಮುನಳಿಗೂ ಮನವಟ್ಟಾಗದಿರಲಿಲ್ಲ. ಗೌಡರ ಕೈಗೆ ಸಿಕ್ಕಿ ಬೀಳಬಾರದೆಂದಿದ್ದರೆ ತಾನು ಈ ಊರಲ್ಲೇ ಇರುವಂತಿಲ್ಲ. ರಾಮನನ್ನು ಕಟ್ಟಿಕೊಂಡು ಓಡಿಹೋಗಬಹುದು. ಆದರಾತ ಅದಕ್ಕೊಪ್ಪ ಬೇಕಲ್ಲ? ಆತನನ್ನು ಒಪ್ಪಿಸುವರಾರು? ತಾವಿಬ್ಬರೂ ಈರೀತಿ ಓಡಿ ಹೋದಲ್ಲಿ ಗೌಡರು ತನ್ನ ತಂದೆತಾಯಿಗಳನ್ನು ಪೀಡಿಸದೆ ಸುಮ್ಮನಿರಲಾರರು. ಅದರಲ್ಲೂ ಅಪ್ಪನಿಗೆ ಇಂಥ ಭಯಂಕರ ಜಡ್ಡು........ಇಂಥ ಸಮಯದಲ್ಲಿ....

"ಹರೀವತ್ತಿನಾಗ ಎದ್ದು ಹೋಗೂಣು" ಎಂದಳು ಗಂಗವ್ವ.

ಯಮುನಾ ಮಾತನಾಡಲಿಲ್ಲ. ಆಕೆ ತನ್ನಷ್ಟಕ್ಕೆ ತಾನೆ ಏನೇನೋ ಯೋಚಿಸುತ್ತಲಿದ್ದಳು.

## ತೆರೆ: ಹದಿನೈದು.

ಬೆಳ್ಳಿ ಮೂಡಿ ಬರುವುದಕ್ಕೆ ಮೊದಲೇ ಗಂಗವ್ವ ಎದ್ದು, ಯಮುನಳನ್ನು ಎಬ್ಬಿಸಿದಳು. ರಾತ್ರಿ ಮಾಡಿಟ್ಟಿದ್ದ ರೊಟ್ಟಿಗಳನ್ನು ಹಳೆಯ ಸೀರೆಯ ತುಂಡಿನಲ್ಲಿ ಕಟ್ಟಿಕೊಂಡು ಮಗಳ ಸೀರೆ ಕುಪ್ಪುಸಗಳನ್ನೂ ಗಂಟುಕಟ್ಟಿ ಹೊರಡಲು ಸಿದ್ಧವಾದಳು. "ಸಂಜಿಯೊಳಗಾಗಿ ಬರುತೀನಿ ಹಂ," ಎಂದು ಗಂಡನಿಗೆ ಹೇಳಿ ಹೊರಟು ನಿಂತಳು.

ಕಣ್ಣುಗಳಿಂದ ನೀರು ದಳದಳ ಸುರಿಯುತ್ತಿರಲು ಯಮುನಾ ತಂದೆಯ ಕಾಲು ಹಿಡಿದು ನಮಸ್ಕರಿಸಿದಳು. ಗಂಡನ ಮನೆಯಲ್ಲಿ ಏನೇನಾಗುವುದೊ, ಮತ್ತೆ ತಾನು ತವರೂರಿಗೆ ಎಂದು ಬರುವೆನೊ, ತನ್ನ ತಂದೆಯನ್ನು ಮತ್ತೆ ಕಾಣುವೆನೊ ಇಲ್ಲವೊ ಎಂಬ ಆಸೆಯಿಂದಾಗಿ ಅವಳ ಎದೆ ತುಡಿಯುತ್ತಿತ್ತು.

ಹಳ್ಳಿಯೆಲ್ಲವೂ ಶಾಂತವಾಗಿ ವಿರಮಿಸಿದ್ದಿತು. ತಾಯಿ ಮಗಳಿಬ್ಬರೂ ಸದ್ದು ಮಾಡದೆ ನಡೆಯತೊಡಗಿದರು. ಹಳ್ಳಿಯನ್ನು ಹಿಂದೆ ಬಿಟ್ಟು ಕಾಲು ದಾರಿ ಹಿಡಿದು ಹಳ್ಳ ದಾಟಿ ಹೋಗಬೇಕಾಗಿದ್ದಿತು. ಸನಿಯದಲ್ಲಿಯೆ ಗೌಡರ ತೋಟ. ಅಲ್ಲಿಯ ಗುಡಿಸಲಲ್ಲಿಯೆ ರಾಮ ಮಲಗಿಕೊಂಡಿರುತ್ತಿದ್ದುದು ಯಮುನಳಿಗೆ ಗೊತ್ತಿದ್ದಿತು. ಒಮ್ಮೆ ಹೋಗಿ ಆತನೊಂದಿಗೆ ಕೊನೆಯ ಬಾರಿಗೆ ಮಾತನಾಡಿ ಬರಲೇ—ಎಂದುಕೊಂಡಳಾಕೆ. ಮರುಕ್ಷಣವೇ ತನ್ನ

ವಿಚಾರಕ್ಕೆ ತಾನೇ ನಕ್ಕು ವಿಷಣ್ಣ ಮನಸ್ಸಿನಿಂದ ತಾಯಿಯೊಂದಿಗೆ ನಡೆದಳು.

ಆರು ಗಂಟೆಗಳ ಕಾಲ ಹಾದಿ ನಡೆದು ಅವರು ಚಿಕ್ಕಳ್ಳಿಗೆ ಬಂದು ಮುಟ್ಟಿದುದೂ ಆಯಿತು. ಆಗ ನಡುಹಗಲು. ಊರ ಹೊರಗಿನ ಯಾತದ ಬಾವಿಯ ಹತ್ತಿರ ಕುಳಿತುಕೊಂಡು ರೊಟ್ಟಿ ತಿಂದು, ಕೊಂಚ ವಿರಮಿಸಿಕೊಂಡು. ಹಳ್ಳಿಯನ್ನು ಪ್ರವೇಶಿಸಿದರು.

ಭೀಮಣ್ಣನ ಮನೆಯ ವರೆಗೆ ಬಂದುದಾಯಿತು. ಮನೆಯ ಬಾಗಿಲು ಮುಚ್ಚಿಕೊಂಡಿದ್ದಿತು. ಗಂಗವ್ವ ಬಾಗಿಲು ತಟ್ಟಿ ಅಳಿಯನ ಹೆಸರೆತ್ತಿ ಕೂಗಿದಳು.

ನಾಲ್ಕೈದು ಸಲ ಕೂಗಿದ ತರುವಾಯ ಬಾಗಿಲು ಧಡಾರನೆ ತೆರೆಯಿತು. ನಿಂಗವ್ವನ ಮುಖ ಬಾಗಿಲಲ್ಲಿ ಕಾಣಿಸಿಕೊಂಡಿತು.

ಬಂದವರು ಯಾರೆಂಬುದು ಗೊತ್ತಾಗುತ್ತಲೂ ನಿಂಗವ್ವ ಕಣ್ಣು ಕೆರಳಿಸಿ ತೆರೆದಿದ್ದ ಬಾಗಿಲನ್ನು ಮತ್ತೆ ಮುಚ್ಚಿ ಒಳಗಿನಿಂದ ಚಿಲಕಹಾಕಿಕೊಂಡು ಕಾಲುಗಳನ್ನಪ್ಪಳಿಸುತ್ತ ಹೊರಟುಹೋದಳು.

ತಾಯಿ ಮಗಳಿಬ್ಬರೂ ಮನೆಯೆದುರಿನ ಕಟ್ಟೆಯ ಮೇಲೆಯೆ ಕುಸಿದು ಕುಳಿತರು—ತಮಗೆ ಲಭಿಸಿದ ಸ್ವಾಗತವನ್ನು ಕಂಡು. ನಿಂಗವ್ವ ತಮ್ಮೊಡನೆ ಮಾತನಾಡಲಿಲ್ಲ, ಬಾ ಎನ್ನಲಿಲ್ಲ, ಕೂಡ್ರು ಎನ್ನಲಿಲ್ಲ, ನೀರು ತಗೊಳ್ಳಿರಿ ಎನ್ನಲಿಲ್ಲ. ದೂರದಿಂದ ಬಂದಿದ್ದ ತಮ್ಮನ್ನು ಹೊರಗೆ ಹಾಗೇ ಬಿಟ್ಟು ಬಾಗಿಲು ಮುಚ್ಚಿಕೊಂಡು ಹೋಗಿಬಿಟ್ಟಳಲ್ಲ! ಬೇರಾವುದಾದರೂ ಸಂದರ್ಭವಾಗಿದ್ದಲ್ಲಿ ಗಂಗವ್ವ ಅಂಥ ಅಪಮಾನವನ್ನು ಸಹಿಸಿಕೊಂಡು ಸುಮ್ಮನಿರುತ್ತಿರಲಿಲ್ಲ. ಆ ಮನೆಯೆದುರಿಗೆ ಒಂದು ಕ್ಷಣವೂ ನಿಂತಿರದೆ ಹೊರಟುಬಿಡುತ್ತಿದ್ದಳು. ಆದರೆ ಆಗ ಹಾಗೆ ಸಿಡಿಮಿಡಿಗೊಂಡು ಹೊರಟು ಬರುವಂತಿರಲಿಲ್ಲ. ಅಲ್ಲಿಯವರೆಗೆ ಬಂದುದಾಗಿದ್ದಿತು. ಆದ ಅವಮಾನವನ್ನೆಲ್ಲ ತೆಪ್ಪಗೆ ಸಹಿಸಿಕೊಂಡು ಮಗಳನ್ನು ಅಲ್ಲಿ ಬಿಟ್ಟು ಹೋಗಬೇಕಾಗಿದ್ದಿತು.

ಓಣಿಯಲ್ಲಿಯ ಜನರು ಅವರಿಬ್ಬರನ್ನೂ ಕಂಡು ಪಿಸು ಮಾತನಾಡುತ್ತ ನಕ್ಕರು. ಗಂಗವ್ವನನ್ನು ಬಲ್ಲ ಒಬ್ಬಿಬ್ಬರು ಹೆಂಗುಸರು ಅವಳ ಬಳಿ ಬಂದು, "ಏನು ಗಂಗವ್ವ, ಇಲ್ಲ್ಯಾಕ ಕುಳಿತಿದ್ದೀರಿ? ಈಕಿ ಯಾರು, ನಿನ್ನ ಮಗಳೇನು? ಅಯ್ಯ, ಎಷ್ಟಿದ್ದ ಬೆಳದಾಳಲ್ಲವ್ವಾ. ಇಂಥಾಕೀನ್ನ ವ-ನ್ಯಾಗ

ಇಟ್ಟುಕೊಂಡು ಕುಂತಿದ್ದಿಯೇನು ಇಷ್ಟು ದಿನಾ ? " ಎಂದು ಟೀಕಿಸಿದರು.

"ಗಂಡನ ಮನೀಗೆ ಕಳಿಸಾಕs ಬಂದೀನವ್ವ. ಭೀಮಣ್ಣ ಎಲ್ಲಿ ಹೋಗಿದಾನೊ ಏನೊ."

"ಇನ್ನೆಲ್ಲಿಗೆ ಹೋಗುತಾನ ? ಕೂಲಿಗೇ ಹೋಗಿರುತಾನ. ಮನ್ಯಾಗ ನಿಂಗಿ ಇಲ್ಲೇನು ?"

"ಇದಾಳ. ನಮ್ಮನ್ನು ನೋಡಿ ಬಾಗಲಾ ಮುಚ್ಚಿಕೊಂಡು ಕುಂತಾಳ."

"ಅಯ್ಯs ! ಹೀಂಗೇನು ? ಮತ್ತ ಅಲ್ಲ್ಯಾಕ ಕುಂತೀರಿ ಕಟ್ಟೀ ಮ್ಯಾಲ ? ಬರ್‍ರಿಲಾ ಇಲ್ಲೇ," ಎಂದು ನುಡಿದು ಒಬ್ಬ ಹೆಣ್ಣುಮಗಳು ಅವರಿಬ್ಬರನ್ನೂ ತನ್ನ ಮನೆಗೆ ಕರೆದು ತಂದಳು.

ಸಂಜೆಗತ್ತಲು ಪಸರಿಸುವ ವೇಳೆಗೆ ಭೀಮಣ್ಣ ಹೋರೆಯಿಂದ ಹಿಂದಿರುಗಿದ. ಬರುವಾಗ ಹೆಂಡದಂಗಡಿಯ ಮೇಲೆ ಹಾಯ್ದು ಬಂದಿದ್ದನೇನೊ. ಕಣ್ಣುಗಳೆರಡೂ ಕೆಂಪಗೆ ಕೆಂಡದಂತಾಗಿದ್ದುವು. ಮುಖ ಉಗ್ರವಾಗಿದ್ದಿತು.

ಆತ ಬರುವ ವೇಳೆಗೆ ತಾಯಿಮಗಳಿಬ್ಬರೂ ಮತ್ತೆ ಆತನ ಮನೆಯೆದುರಿಗೆ ಬಂದು ಕುಳಿತಿದ್ದರು. ಮಬ್ಬು ಬೆಳಕಿನಲ್ಲಿ ಅವರು ಯಾರೆಂಬುದು ಆತನಿಗೆ ಕೂಡಲೆ ಗೊತ್ತಾಗಲಿಲ್ಲ.

"ಯಾರವರು ?"

"ನಾವು, ಭೀಮಣ್ಣಾ."

ಭೀಮಣ್ಣ ಬಾಗಿ ನೋಡಿದ. ಗುರುತು ತಿಳಿಯಿತು. ಆತ ಹುಬ್ಬುಗಂಟಿಕ್ಕಿ ಒರಟು ಸ್ವರದಲ್ಲಿ ಕೂಗಿದ.

"ಯಾರು ಕರದರಂತ ಬಂದೀರಿ ನನ್ನ ಮನಿಗೆ? ಏಳ್ರಿ ಅತ್ತ. ಹಾದೀ ಬಿಡಿರಿ."

ಗಂಗವ್ವ ಮೇಲಕ್ಕೇಳಲಿಲ್ಲ. ಆತನಿಗೆ ಹಾದಿಯನ್ನೂ ಬಿಡಲಿಲ್ಲ. ಧ್ವನಿಯನ್ನೆತ್ತರಿಸಿ ಹೇಳಿದಳು: "ಮದುವಿ ಮಾಡಿಕೊಂಡ ಹೆಣ್ಣನ್ನ ತವರಿನಾಗ ಬಿಟ್ಟು ಇನ್ನೊಬ್ಬಾಕೀನ್ನ ಕಟ್ಟಿಕೊಂಡು ಚಕ್ಕಂದ ಹೊಡೀತಾ ಇರುವ ಮೂಳಾ! ನಿನಗೊಬ್ಬಗ ಮಾನಾ ಮರ್ಯಾದಿ ಇರದಿದ್ದರ ನಮಗೂ ಇಲ್ಲಂತ ತಿಳಿದೀಯೋ ಏನು ? ಇಂದು ಬಂದೀ, ನಾಳೆ ಬಂದೀ, ನಿನ್ನ ಹೆಂಡತೀನ್ನ

ಕರಕೊಂಡು ಹೋದೀ ಅಂತ ಈಸುದಿನ ಹಾದೀ ಕಾಧದ್ದಾಯ್ತು. ಇಲ್ಲಿ ಈ ನಿಂಗಿ ನಿನಗ ಮಾಟಾ ಮಾಡಿ ಕೂಡಿಸ್ಯಾಳಂತ ಕಾಣುತೈತಿ ಹೊಯ್ಮಾಲಿ. ಒಂದು ಸಾರಿ ಏನಾಗೂದು ಆಗಿಹೋಗಲಿ. ನನ್ನ ಮಗಳ ಸಂಗಡ ಬಾಳ್ವೆ ಮಾಡುತೀಯೋ ಇಲ್ಲೋ ಹೇಳಿಬಿಡು."

ಉತ್ತರವೀಯಲೆಂದು ಭೀಮಣ್ಣ ಬಾಯಿ ತೆರೆಯುವುದರೊಳಗಾಗಿಯೆ ನಿಂಗವ್ವ ಥಟ್ಟನೆ ಬಾಗಿಲು ತೆರೆದು ಹೊರಕ್ಕೆ ಬಂದು ಗಂಗವ್ವನ ಮುಖಕ್ಕೆ ತಿವಿಯುತ್ತ ಕರ್ಕಶ ಸ್ವರದಲ್ಲಿ ನುಡಿದಳು:

"ಯಾಕೇ, ಯಾರಿಗೆ ಹೊಯ್ಮಾಲಿ ಅಂತೀಯೆ? ನಿನ್ನ ಜುಪರೀ (ಕೂದಲು) ಕಿತ್ತು ಇಟ್ಟೇನು. ನನ್ನ ಮನೀಗೆ ಬಂದು ಬಲ್ಲಂಗ ಮಾತಾಡುತೀಯಾ ಭೋಸಡೀ...."

"ನಿನ್ನ ಮನೀ! ಹೋ ಹೋ ಹೋ........ನಿನ್ನೊಬ್ಬಳದೇ ಅಂತ ತಿಳಿದೀ ಏನು ಎಲ್ಲಾ? ನಿನಗಿಂತ ಮೊದಲೇ ನನ್ನ ಮಗಳದಾಗೈತಿ ಈ ಮನಿ. ಆ ಮ್ಯಾಲ ನೀನ್ಯಾವಳೋ ಛಿನಾಲಿ ಬಂದು ಹೊಕ್ಕೀದಿ ದೆವ್ವ ಹೊಕ್ಕಾಂಗ," ಎನ್ನುತ್ತ ಗಂಗವ್ವನೂ ಕಾಳಗಕ್ಕೆ ಸಿದ್ಧವಾಗಿ ನಿಂತಳು.

ಕೂಗಾಟವನ್ನು ಕೇಳಿ ಓಣಿಯ ಜನರೆಲ್ಲ ಅಲ್ಲಿ ಗುಂಪುಗೂಡಿದರು. "ಏನು, ಜಗಳ ಯಾಕೆ?" ಎಂದು ವಿಚಾರಣೆಗಾರಂಭವಾಯಿತು.

"ಮದುವೀಕಾಲಕ್ಕ ನನಗಾದ ಖರ್ಚಿನ ಹಣ ಮುನ್ನೂರು ರೂಪಾಯಿ ತಂದುಕೊಟ್ಟು ಸೋಡಚೀಟಿ ತಕ್ಕೊಂಡು ಹೋಗಲಿ. ಇವಳ ಮಗಳ ಸಂಗಾತ ಸಂಸಾರ ಮಾಡೂ ಮನಸಿಲ್ಲ ನನಗ," ಎಂದು ಹೇಳಿದ ಭೀಮಣ್ಣ.

"ರೂಪಾಯಿ ತಂದು ಕೊಡೂದಂದರ ಎಲ್ಲಿಂದ ತಂದು ಕೊಡೂದು ಅದು? ತೆರದ ರೂಪಾಯಿ ಕೊಡಾಕಾಗದಕ್ಕ ನನ್ನ ಮಗಳನ್ನ ಅಲ್ಲೇಬಿಟ್ಟು ಈ ನಿಂಗೀನ ಕಟ್ಟಿಕೊಂಡಾನ. ಈಗ ನನ್ನ ಮಗಳು ಏನು ಮಾಡಬೇಕು? ಇವಳನ್ನೂ ಕರಕೊಂಡು ಝಕ್ಕಸತ ಬಾಳ್ವೆ ಮಾಡಲಿ." ಎಂದು ಗಂಗವ್ವ ವಾದಿಸಿದಳು.

ಒಬ್ಬಿಬ್ಬರು ಹಿರಿಯರು ನಡುವೆ ಬಂದು, ವಾದವಿವಾದವನ್ನು ನಿಲ್ಲಿಸಿ, ಯಮುನಳನ್ನು ಮನೆಯಲ್ಲಿಟ್ಟುಕೊಂಡು ಬಾಳುವೆ ಮಾಡಬೇಕೆಂದು ಭೀಮಣ್ಣನಿಗೆ ಬುದ್ಧಿ ಹೇಳಿದರು. ಇಚ್ಛೆಯಿರದಿದ್ದರೂ ಆತ ಒಪ್ಪಿಕೊಳ್ಳಲೇಬೇಕಾ

ಯಿತು. ಮಗಳನ್ನು ಮನೆಯೊಳಗೆ ಸೇರಿಸಿ ಗಂಗವ್ವ ಹೊರಟುಹೋದಳು ನೀರು ಕುಡಿಯಲೂ ಸಹ ಆಕೆ ಅಲ್ಲಿ ನಿಲ್ಲಲಿಲ್ಲ.

ಕಂಬನಿ ಸುರಿಸುತ್ತ ಯಮುನಾ ಪಡಸಾಲೆಯಲ್ಲಿ ಕುಳಿತುಕೊಂಡಳು. ಆಕೆಗೆ ಹಸಿವೆಯಾಗಿದ್ದಿತು, ನೀರಡಿಕೆಯೂ ಆಗಿದ್ದಿತು. ನಿಂಗವ್ವ ಮಾತ್ರ ಆಕೆಯನ್ನು ಅಡುಗೆ ಮನೆಗೆ ಕರೆಯಲಿಲ್ಲ. ಯಮುನಳು ತಾನಾಗಿಯೇ ಹೋಗಲಿಲ್ಲ. ಭೀಮಣ್ಣ ನಿಂಗವ್ವ ಇಬ್ಬರೂ ಒಳಗೇ ಕೂತು ಊಟಮಾಡಿದರು. ಹಸಿವು ನೀರಡಿಕೆಗಳಿಂದಾಗಿ ನರಳುತ್ತ, ಅವಮಾನ ದುಃಖಗಳಿಂದ ಕುದಿಯುತ್ತ ಯಮುನಾ ಬಿದ್ದುಕೊಂಡಿದ್ದಳು. ತಮ್ಮ ಊಟ ಮುಗಿದ ಬಳಿಕ ನಿಂಗವ್ವ ತಂಗುಳ ರೊಟ್ಟಿಯನ್ನೂ ಅಂಬಲಿಯನ್ನೂ ಹರಿವಾಣವೊಂದರಲ್ಲಿ ಹಾಕಿ ಯಮುನಳ ಹತ್ತಿರ ತಂದಿಟ್ಟಳು. ಅದನ್ನೆಲ್ಲ ಗಬಗಬನೆ ತಿಂದು ಮುಗಿಸಿ, "ಕುಡಿಯಾಕ ನೀರು ಕೊಡವ್ವ" ಎಂದು ಕೇಳಿದಳು. "ಕೊಡ ತಗೊಂಡೋಗಿ ನೀರು ಹೊತ್ತು ತಂದಿದ್ದೀ. ನಿನಗ ನೀರು ಕೊಡಬೇಕು," ಎಂದು ಅಣಕವಾಡುತ್ತ ನಿಂಗವ್ವ ತಂಬಿಗೆ ತಂದು ಹರಿವಾಣದಲ್ಲೇ ನೀರು ಹಾಕಿದಳು––ನಾಯಿಗೆ ಹಾಕುವ ಹಾಗೆ. ಅಡುಗೆಯ ಮನೆಯಲ್ಲಿಯೆ ಗಂಡಹೆಂಡರು ಮಲಗಿಕೊಂಡರು. ಯಮುನಾ ಅಲ್ಲಿಯೆ ನೆಲದ ಮೇಲೆ ಪವಡಿಸಿದಳು. ನೆಲವೇ ಹಾಸುಗೆಯಾಯಿತು. ಉಟ್ಟುಕೊಂಡಿದ್ದ ಸೀರೆಯ ಸೆರಗೇ ಹೊದ್ದಿಕೆಯಾಯಿತು. ಆ ರಾತ್ರಿಯನ್ನು ಹೇಗೆ ಕಳೆದಳೋ. "ಇಂಥ ನರಕಕ್ಕೆ ನನ್ನ ಕಳಿಸುವದರ ಬದಲು ಭಾವಿಗಾದರೂ ದೂಡಿದ್ದರ ನೆಟ್ಟಗಾಗುತ್ತಿತ್ತು. ಇಂಥಲ್ಲಿ ಹೀಂಗ ಇರೂದಕ್ಕ ಬದಲು ಗೌಡರ ರಂಡಿಯಾಗಿ ಬಾಳೂದೆ ಮೇಲು," ಎಂದು ಹೇಳಿಕೊಳ್ಳುತ್ತ ಕಣ್ಣೀರು ಸುರಿಸಿದಳು. ಮತ್ತೆ ಮತ್ತೆ ರಾಮನ ನೆನಪು. ಒಮ್ಮೆ ಸಂತಾಪ, ಒಮ್ಮೆ ತಿರಸ್ಕಾರ. "ಬುದ್ಧಿಗೇಡಿ ಕೋಣ ಅದೊಂದು, ಏನೂ ತಿಳಿಯೂದಿಲ್ಲ. ಎಲ್ಲಿಗಾದರೂ ಓಡಿಹೋಗೂಣು ಅಂತ ಬಾಯಿಬಿಟ್ಟು ನಾ ಹೇಳಿದರೂ ಅದಕ್ಕ ತಿಳೀಲಿಲ್ಲ. ಹುಂಬ...." ಎಂದು ಶಪಿಸಿದಳು. ಬೆಳಗಾಗುವ ಹೊತ್ತಿಗೆ ಸೆರಗು ತೊಯ್ದು ತಪ್ಪಡಿಯಾಗಿದ್ದಿತು. ರಾತ್ರಿಯೆಲ್ಲ ನಿದ್ದೆಯಿರಲಿಲ್ಲವಾದುದರಿಂದ ಕಣ್ಣುಗಳೆರಡೂ ಉರಿಯುತ್ತಿದ್ದುವು. ತಲೆ ಸಿಡಿಯತೊಡಗಿದ್ದಿತು.

ಬೆಳಗಿನಲ್ಲೂ ನಿಂಗವ್ವ ಆಕೆಯನ್ನು ಮಾತನಾಡಿಸಲಿಲ್ಲ. ಅಡುಗೆಯ

ಮನೆಗೂ ಕರೆಯಲಿಲ್ಲ. ಭೀಮಣ್ಣನೂ ತುಟಿ ಬಿಗಿದುಕೊಂಡೇ ಇದ್ದ. ಅವರಿಬ್ಬರೂ ಒಳಗೇ ಕುಳಿತು ರೊಟ್ಟೀ ತಿಂದು ಮುಗಿಸಿದರು. ಯಮುನಳಿಗೆ ರೊಟ್ಟಿಯೂ ಸಿಕ್ಕಲಿಲ್ಲ. "ಇಲ್ಲೇ ಹೀಂಗೇ ಬಿದ್ದಿದ್ದರ ನಿನ್ನ ಹೊಟ್ಟೆಗೆ ಯಾರು ಹಾಕತಾರ? ಮಿಂಡ ಬರ್‍ತಾನೇನು? ಏಳು, ಹೊರಗ ನಡೀ," ಎಂದು ಅವಳನ್ನು ಎಬ್ಬಿಸಿದರು, ಮಲಿನವಾಗಿದ್ದ ಮುಖವನ್ನು ಸಹ ತೊಳೆಯದೆ ಹಾಗೇ ಅವರೊಂದಿಗೆ ನಡೆದಳು ಯಮುನಾ.

ಎರಡು ಮೈಲು ದೂರದಲ್ಲಿದ್ದ ಹೊಲವೊಂದಕ್ಕೆ ಹೋಗಿ ಕೂಲಿ ಕೆಲಸಕ್ಕಾರಂಭಿಸಬೇಕಾಯಿತು. ನಡುಹಗಲು ಕಳೆದ ಬಳಿಕ ಒಂದು ರೊಟ್ಟಿ, ಒಂದು ಬಟ್ಟಲು ಅಂಬಲಿ ದೊರೆಯಿತು. ಮತ್ತೆ ಕೆಲಸ, ಸಾಯಂಕಾಲದ ವರೆಗೆ. ಮನೆಗೆ ಬಂದು ಮುಟ್ಟುವುದರೊಳಗಾಗಿ ಯಮುನಳಿಗೆ ಬವಳಿ ಬರುವ ಹಾಗಾಗಿದ್ದಿತು.

## ತೆರೆ: ಹದಿನಾರು.

ಅಂದಿನಿಂದ ಗಂಡನ ಮನೆಯ ಘೋರ ಬಾಳಿಗಾರಂಭವಾಯಿತು. ಅವರಿವರ ಹೊಲಗಳಲ್ಲಿ ದಿನವಿಡೀ ಕೂಲಿಮಾಡುವುದು, ಕೂಲಿಯ ಗಳಿಕೆಯನ್ನೂ ಕಾಳನ್ನೂ ಸವತಿಯ ಕೈಗೆ ಕೊಡುವದು, ಆಕೆ ಹಾಕುವ ತಂಗುಳ ರೊಟ್ಟಿ, ಹಳಸಿದ ಅಂಬಲಿ ತಿಂದು ಪಡಸಾಲೆಯಲ್ಲಿ ಬಿದ್ದುಕೊಂಡು ರಾತ್ರಿಯನ್ನು ಕಳೆಯುವುದು. ಒಂದು ದಿನವೂ ಸಹ ಹೊಟ್ಟೆ ತುಂಬುವಷ್ಟು ಆಹಾರವು ದೊರೆಯುತ್ತಿರಲಿಲ್ಲ. ತಲೆ ಸುಡುವ ಬಿಸಿಲಿನಲ್ಲಿ ದುಡಿತ. ಸವತಿ ಕೊಡುವ ಎರಡು ರೊಟ್ಟಿ ಯಾವಾಗಲೋ ಕರಗಿ ಹೋಗಿ ವಿಪರೀತ ಹಸಿವಾಗುವುದು. ತವರೂರಿನಲ್ಲಿ ಹೀಗೆಂದೂ ಹಸಿವೆಯಿಂದ ನರಳಿದವಳಲ್ಲ ಯಮುನಾ. ಮನೆಯಲ್ಲಿ ಎಂಥ ಬಡತನವಿದ್ದರೂ ಅವಳ ತಾಯಿ ಮಗಳಿಗೆ ಊಟಕ್ಕೆ ಎಂದೂ ಕೊರತೆಯಾಗದಂತೆ ನೋಡಿಕೊಂಡಿದ್ದಳು. ತಾನು ತಿನ್ನುವುದನ್ನು ಕಡಿಮೆ ಮಾಡಿಯಾದರೂ ಮಗಳಿಗೆ ಹೊಟ್ಟೆತುಂಬ ನೀಡುತ್ತಿದ್ದಳು. ಆದರೆ ಈ ನಿಂಗವ್ವ! ಬೇಕೆಂತಲೇ ಆಕೆ ಯಮುನಳನ್ನು ಪೀಡಿಸುತ್ತಿದ್ದುದು ಸ್ಪಷ್ಟವಾಗಿದ್ದಿತು. ದನದಂತೆ ದುಡಿಸಿ, ಸಾಕಷ್ಟು ಆಹಾರ ಕೊಡದೆ ಗೋಳಾಡಿಸಿದಲ್ಲಿ

ಯಮುನಾ ತಾನಾಗಿಯೆ ಮನೆಬಿಟ್ಟು ಹೋಗಬಹುದೆಂದೂ ನಿಂಗವ್ವ ಲೆಕ್ಕ ಹಾಕಿಕೊಂಡಿದ್ದಳು. ಹಸಿವೆಯಿಂದಾಗಿ ಹೊಟ್ಟೆ ಹೊಡೆದುಕೊಳ್ಳುತ್ತಿದ್ದಾಗ ಲೆಲ್ಲ—"ಇಲ್ಲಿಂದ ಓಡಿಹೋಗಿ ಬಿಡಲಾ ? ಏನು ಸುಖ ಐತಿ ಅಂತ ಇಲ್ಲಿರ ಬೇಕು ನಾ ? ಗೌಡನ ಕೈಯಿಂದ ತಪ್ಪಿಸಬೇಕಂತ ಅವ್ವ ನನ್ನ ಇಲ್ಲಿ ಬಿಟ್ಟು ಹೋದಳು. ಗಂಡನ ಸಂಗಡ ನಾನೂ ಸಂಸಾರ ಮಾಡೇನು ಅಂತ ಅಪ್ಪಗ ಆಸೆಯಿತ್ತು. ಆ ಸಂಸಾರವೂ ನಿಲುಕಲಿಲ್ಲ. ಇಲ್ಲಿಗೆ ಬಂದು ತಿಂಗಳಾಗ್ತ ಬಂತು. ಪಡಸಾಲೆಯೇ ನನ್ನ ಗಂಡ ಆಗೈತಿ. ಒಂದಿನಾನೂ ಅವ ನಿಂಗಿನ್ನ ಬಿಟ್ಟು ನನ್ನ ಸಂಗಡ ಮಲಗಿಕೊಳ್ಳಲಿಲ್ಲ. ಇನ್ನು ಹಿಂಗೇ ಇಲ್ಲಿದ್ದರ ಏನು ಬರತೈತಿ ? ಮೈಮುರಿದು ದುಡಿದರೂ ಹಸಿದು ಸಾಯೂದು ತಪ್ಪೂದಿಲ್ಲ—ನರಳಿ ನರಳಿ ಸತ್ತುಹೋಗೂದಾದರೂ ಯಾಕ ? ಹೋಗಿ ಬಿಡಲಾ ? ಎಲ್ಲ್ಯಾದರೂ ಓಡಿಹೋಗಿ ಬಿಡಲಾ ?" ಎಂದು ಯೋಚಿಸುವಳು ಯಮುನಾ. ಓಡಿಹೋಗುವುದು ? ಸರಿ. ಆದರೆ ಹೋಗುವುದಾದರೂ ಎಲ್ಲಿಗೆ ? ತವ ರೂರಿಗಂತೂ ಹೋಗುವಂತಿಲ್ಲ. ಇನ್ನು........ ಎಂಬ ವಿಚಾರ ಬರುತ್ತಲೂ ಮೊದಲಿನ ಯೋಚನೆ ಅಲ್ಲಿಗೇ ನಿಲ್ಲುವುದು.

ಒಂದು ದಿನ ಸಾಯಂಕಾಲ ದಿನಗೂಲಿ ಮುಗಿಸಿಕೊಂಡು ಮನೆಗೆ ಬರು ತ್ತಿದ್ದವಳಿಗೆ ನಡೆಯಲು ಶಕ್ತಿ ಸಾಲದೆಂದು ತೋರಿತು. ಜೊತೆಗಿದ್ದವರೆಲ್ಲ ಮುಂದೆ ಹೋಗಿದ್ದರು. ಯಮುನಳೊಬ್ಬಳೇ ನಿಧಾನವಾಗಿ ಕಾಲುಗಳನ್ನೆಳೆ ಯುತ್ತ ಸೆಟ್ಟರ ತೋಟದಲ್ಲಿ ಹಾಯ್ದು ಬರುತ್ತಿದ್ದಳು.

ಗುಡ್ಡದ ಆಚೆಗೆ ಸೂರ್ಯ ಮರೆಯಾಗಿದ್ದ. ಕತ್ತಲೆ ನಿಧಾನವಾಗಿ ಸೃಷ್ಟಿಯನ್ನು ತಬ್ಬಿಕೊಳ್ಳುತ್ತಲಿದ್ದಿತು. ಚಿಕ್ಕ ದೊಡ್ಡ ಹಕ್ಕಿಗಳು ಚಿಲಿಪಿಲಿ ಗುಡುತ್ತ ಗೂಡುಗಳ ಕಡೆಗೆ ಹಾರಿಹೋಗುತ್ತಿದ್ದುವು.

ಎದುರಿಗೇ ಯಾತದ ಬಾವಿ. ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತಿದ್ದು ದಣಿವಾರಿಸಿಕೊಂಡು ಹೋದರಾಯಿತೆಂದುಕೊಂಡು ಯಮುನಾ ಯಾತದ ಕಟ್ಟೆಯ ಮೇಲೆ ಕುಳಿತುಕೊಂಡಳು. ಕೆಳಗಡೆ ಬಾವಿಯಲ್ಲಿ ಗಂಭೀರವಾಗಿ ನಿಂತ ನೀರು. ಸುತ್ತಲೂ ಮಬ್ಬುಬೆಳಕು.

ಹಠಾತ್ತಾಗಿ ತಂದೆ ತಾಯಿಗಳ ನೆನಪು ಬಂದು ಅವಳ ಚಿತ್ತವನ್ನು ಕದ ಡಿತು. ಮೊಳಕಾಲುಗಳಲ್ಲಿ ತಲೆ ಹುದುಗಿಸಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿ

ದಳು ಯಮುನಾ.

ಅವಳು ಅಳುವುದನ್ನು ಕೇಳಿ ಯಾರೋ ಬಂದ ಹಾಗಾಯಿತು. ಯಮುನಾ ಕತ್ತೆತ್ತಿ ನೋಡಿದಳು. ಬಾವಿಯ ಬಳಿಯ ಗುಡಿಸಲಿನಲ್ಲಿದ್ದ ಸೆಟ್ಟರ ಆಳುಮಗ ಮಲ್ಲಪ್ಪ. ಕನಿಕರ ಸಹಾನುಭೂತಿ ಬೆರೆತ ಸ್ವರದಲ್ಲಿ ಆತ, "ಯಾಕವ್ವ, ಏನಾಯ್ತು ನಿನಗ? ಯಾಕ ಅಳ್ತೀ?" ಎಂದು ಕೇಳಿದ.

ಚಿಕ್ಕಳ್ಳಿಗೆ ಬಂದಂದಿನಿಂದ ಯಮುನಾ ಅಂಥ ಸಹಾನುಭೂತಿಯ ಮಾತು ಕೇಳಿದ್ದು ಅದೇ ಮೊದಲ ಬಾರಿ. ಲಗುಬಗೆಯಿಂದ ಕಣ್ಣೀರು ಒರೆಸಿಕೊಂಡು ಆತನ ಕಡೆಗೆ ದೃಷ್ಟಿ ತಿರುಗಿಸಿದಳು. ಮಲ್ಲಪ್ಪ ಆಕೆಗೆ ತೀರಾ ಅಪರಿಚಿತನೇನೂ ಆಗಿರಲಿಲ್ಲ. ಸೆಟ್ಟರ ಹೊಲಕ್ಕೊ ತೋಟಕ್ಕೊ ಕೂಲಿಗಾಗಿ ಹೋದಾಗಲೆಲ್ಲ ಆತನನ್ನು ಅನೇಕ ಸಾರಿ ಕಂಡಿದ್ದಳಾಕೆ. ಆತನಿಗೂ ಅವಳಷ್ಟೇ ವಯಸ್ಸಾಗಿರಬಹುದು. ಚೆನ್ನಾಗಿ ತಿಂದು ಬೆಳೆದು ನೋಡಲು ಲಕ್ಷಣವಾಗಿದ್ದ. ಹಿಂದೆ ಕೆಲವು ಸಲ ಅವಳನ್ನು ಕಂಡಾಗ ಅರ್ಥಪೂರ್ಣವಾದ ನಗೆ ಬೀರಿದ್ದ. ಆತನನ್ನು ಕಂಡಾಗಲೆಲ್ಲ ಅವಳ ಎದೆಯಲ್ಲೂ ಏನೋ ಒಂದು ಬಗೆಯ ವಿಚಿತ್ರ ಭಾವ ಸುಳಿದಂತಾಗುತಿತ್ತು. ರಾತ್ರಿ, ಒಬ್ಬಳೇ ಮಲಗಿರುವಾಗ ಆತನ ನಗುಮುಖ ಕನಸಿನಲ್ಲಿ ಕಾಣಿಸಿಕೊಂಡು ತನ್ನನ್ನೇ ಸಾಂತ್ವನಗೊಳಿಸಿದುದರ ನೆನಪೂ ಆಕೆಗಿತ್ತು.

"ಏನಾಯ್ತು ಯಮುನೀ? ಇಲ್ಲ್ಯಾಕ ಕೂತಿ ಒಬ್ಬಳೇ?" ಎನ್ನುತ್ತ ಆತ ಇನ್ನೂ ಹತ್ತಿರ ಬಂದ.

"ಏನೋ ಬಹಾಳ ಬೇಸರಾಯ್ತು, ಕೂತಿದ್ದೆ."

"ಗುಡಿಸಲದಾಗರೆ ಬಾರಲ್ಲ ಮಳ್ಳೀ! ಸ್ವಲ್ಪ ಕುಡಿದು ಹೋದಿಯಂತಿ. ಬೇಸರ ಗೀಸರ ಎಲ್ಲಾ ಹಾ ಹಾ ಅನ್ನೂದರಾಗ ಮಟಾಮಾಯಾಗಿ ಬಿಡುತೈತಿ," ಎಂದು ಆತ ದಿಟ್ಟತನದಿಂದ ಆಹ್ವಾನಿಸಿದ.

ಕುಡಿಯುವುದು! ಯಮುನಳ ಎದೆ ಕಂಪಿಸಿತು. ಅದುವರೆಗೆ ಎಂದೂ ಆಕೆ ಸಿಂದಿ ಸಾರಾಯಿ ಕುಡಿದಿರಲಿಲ್ಲ. ಚಿಕ್ಕಂದು ಒಂದು ಬಾರಿ ತನ್ನ ತಂದೆಯೊಂದಿಗೆ ಹೆಂಡದಂಗಡಿಗೆ ಹೋಗಿದ್ದಾಗ ಆತನ ಬಲವಂತಕ್ಕೊಳಗಾಗಿ ಒಂದು ಗುಟುಕು ಸಾರಾಯಿ ಕುಡಿದುದೆಷ್ಟೋ ಅಷ್ಟೆ. ಅನಂತರ ಒಂದು ಸಲವೂ ಅದರ ರುಚಿ ನೋಡಿದವಳಲ್ಲ. ಅದನ್ನು ಕುಡಿದರೆ ಆಯಾಸ,

ಬೇಸರು, ದುಃಖ ಎಲ್ಲವೂ ಮರೆತು ಹೋಗುವುದು, ಅಂತೆಯೆ ಅನೇಕರು ಅದಕ್ಕೆ ಮೊರೆ ಹೋಗುವರು ಎಂಬುದೇನೋ ಆಕೆಗೆ ಗೊತ್ತಿದ್ದಿತು. ಚಿಕ್ಕಳ್ಳಿಗೆ ಬಂದ ಬಳಿಕ ಒಂದೊಂದು ಸಲ ದಣಿವು, ದುಃಖ ಸಹಿಸಲಸಾಧ್ಯವಾದಾಗಲೆಲ್ಲ 'ತಾನೂ ಕುಡಿಯಲು ಕಲಿಯಲೇ,' ಎಂದೂ ಆಕೆಗೆನ್ನಿಸಿದ್ದಿತು. ಕೂಲಿ ಯಿಂದ ದೊರೆಯುವ ಪಾವು ಜೋಳದಲ್ಲಿ ಸ್ವಲ್ಪ ಬಚ್ಚಿಟ್ಟುಕೊಂಡು ಅಂಗಡಿಗೆ ಹಾಕಿದರೆ ಹೆಂಡ ಸಿಕ್ಕುವುದು, ಕುಡಿದು ಬಂದು ಬಿದ್ದುಕೊಂಡರೆ ದಣಿವು, ಹಸಿವು, ದುಃಖ ದುಮ್ಮಾನ ಎಲ್ಲವೂ ಮರೆತುಹೋಗುವುದು, ಗಂಡ ಬಂದು ಒಂದೆರಡು ಒದೆತ ಕೊಟ್ಟರೂ ನೋವಾಗಲಾರದು, ಪ್ರಪಂಚದ ಕ್ರೌರ್ಯ ವನ್ನೆಲ್ಲ ಮರೆಯಿಸುವ ಇಂಥ ಮಹಾ ಔಷಧ ಇನ್ನಾವುದಿದ್ದೀತು—ಎಂದೆಲ್ಲ ಆಕೆ ಯೋಚಿಸಿದ್ದಳು. ಅಷ್ಟು ದಿನ ಆ ಯೋಚನೆ ಮನಸ್ಸಿನಲ್ಲೇ ಅಲೆದಾ ಡುತ್ತಿತ್ತು. ಇಂದು ತಾನಾಗಿಯೆ ಬಂದು ಕರೆಯುತ್ತಿದೆ ಆ ಮಹಾ ಔಷಧ !

"ಬಾರಾಕಿs ಯಮುನೀ."

ಸಂದೇಹ, ಭಯ ಬೆರೆತದೃಷ್ಟಿಯನ್ನು ಒಮ್ಮೆ ಅತ್ತ ಇತ್ತ ತಿರುಗಿಸಿದಳು ಯಮುನಾ. ಅವಳ ಭಯವನ್ನೆಲ್ಲ ತನ್ನ ಆಲಿಂಗನದಲ್ಲಿ ಕರಗಿಸಿಕೊಳ್ಳುವ ಹಾಗೆ ಕತ್ತಲೆ ಕವಿಯುತ್ತಿದ್ದಿತು. ತೋಟದಲ್ಲಿ ಬೇರೆ ಯಾರೂ ಇಲ್ಲ. ಇಂಥ ಹೊತ್ತಿನಲ್ಲಿ ತಾನೊಬ್ಬಳೇ ಈ ಹರೆಯದ ಆಳುಮಗನೊಂದಿಗೆ ಗುಡಿಸಲಿನಲ್ಲಿ ಸೇರಿದುದನ್ನು ಅಕಸ್ಮಾತ್ತಾಗಿ ಯಾರಾದರೂ ಕಂಡರೇನು ಗತಿ ? ತನ್ನ ಗಂಡ ನಿಗೆ ಈ ವಿಷಯ ಗೊತ್ತಾದರೆ? ಕುಡಿಗೋಲಿನಿಂದ ತನ್ನನ್ನು ಕಡಿದು ಖೂನಿ ಮಾಡದೆ ಬಿಡಲಿಕ್ಕಿಲ್ಲ ಆತ. ಗುಡಿಸಲಿನಲ್ಲಿ ಸೇರುವುದೇ, ಬೇಡವೇ? ಮನಸ್ಸು ಹೊಯ್ದಾಡುತ್ತಲಿದ್ದಿತು. ಆಕೆ ಹಿಂಜರಿಯುವುದನ್ನು ಕಂಡು ಕೊಂಡ ಮಲ್ಲಪ್ಪ ಅವಳ ಕೈಹಿಡಿದು ಒಳಕ್ಕೆಳೆದುಕೊಂಡು ಬಾಗಿಲು ಹಾಕಿದ.

ಈಚಲು ಚಾಪೆಯ ಮೇಲೆ ಅವಳನ್ನು ಕೂಡ್ರಿಸಿ, ಎದುರಿಗಿದ್ದ ಮಗಿ ಯನ್ನು ಹರಿವಾಣಕ್ಕೆ ಬಾಗಿಸಿ ಹೆಂಡ ತುಂಬಿಕೊಟ್ಟ ಮಲ್ಲಪ್ಪ. ಯಮುನಾ ಒಂದು ಗುಟುಕಿಗೇ ಅದನ್ನು ಕುಡಿದು ಮುಗಿಸಿ ಹರಿವಾಣವನ್ನು ಮುಂದೆ ಚಾಚಿದಳು. ನಗುವ ಕಂಗಳಿಂದ ಅವಳನ್ನು ದಿಟ್ಟಿಸುತ್ತ ಆತ ಮಗಿಯಲ್ಲಿದ್ದ ಹೆಂಡವನ್ನೆಲ್ಲ ಅವಳಿಗೇ ಕುಡಿಸಿದ.

ಗಂಡನ ಮನೆ, ಅಲ್ಲಿನ ನಾರಕೀಯ ಬಾಳು, ಹಸಿವೆಯ ಸಂಕಟ, ಅವ

ಮಾನ, ವ್ಯಥೆ ಎಲ್ಲವೂ ಅವಳ ಚಿತ್ತದಿಂದ ಮಾಯವಾಯಿತು. ಎದುರಿಗೆ ನಗುನಗುತ್ತ ಕುಳಿತಿದ್ದ ಮಲ್ಲಪ್ಪನೊಬ್ಬನ್ನುಳಿದು ಪ್ರಪಂಚವೆಲ್ಲ ಸುಳ್ಳು ಎನ್ನಿಸಿತು. ಹೆಂಡದ ಅಮಲಿನಿಂದ ಜಡವಾಗಿದ್ದ ದೃಷ್ಟಿಯಿಂದ ಆತನ ಮುಖವನ್ನು ನೋಡುತ್ತಿದ್ದ ಹಾಗೆ ಅದು ರಾಮನ ಮುಖದಂತೆ ಕಾಣಿಸತೊಡಗಿತು. ರಾಮನ ಬಗೆಗೆ ಅವಳ ಎದೆಯಲ್ಲಿದ್ದ ಮೋಹವೆಲ್ಲಾ ಚಿಮ್ಮಿ ಬಂದಿತು. " ರಾಮಾ, ನನ್ನ ರಾಮಾ, ಇಷ್ಟು ದಿನಾ ನನ್ನ ಬಿಟ್ಟು ಅಲ್ಲೀ ಇದ್ದೀಯಾ ? ಎಂಥಾ ಕಲ್ಲೆದೆ ನಿಂದು ! ಇಂದಾದರೂ ಬಂದೀಯಲ್ಲ. ರಾಮಾ, ಅಯ್ಯೋ ರಾಮಾ........ " ಎಂದು ಬಡಬಡಿಸುತ್ತ ಮಲ್ಲಪ್ಪನ ಕೊರಳಿಗೆ ಕೈಗಳನ್ನು ಸುತ್ತಿ ಆತನ ಎದೆಯ ಮೇಲೆ ಮುಖವಿಟ್ಟಳು. ಆತ ಕೊಂಚ ಚಕಿತನಾದ. ಅವಳ ಬಡಬಡಿಕೆಯ ಅರ್ಥವೇನೆಂಬುದು ಆತನಿಗೆ ತಿಳಿಯುವಂತಿರಲಿಲ್ಲ. ಅಮಲಿನಲ್ಲಿ ಏನೇನೋ ಬಡಬಡಿಸುತ್ತಿರುವಳೆಂದುಕೊಳ್ಳುತ್ತ ಆತ ಅವಳನ್ನು ಬರಸೆಳೆದು ಬಿಗಿಯಾಗಿ ತಬ್ಬಿಕೊಂಡ. ಆತನ ಆಲಿಂಗನದಲ್ಲಿ ತನ್ನ ದೇಹ, ಆತ್ಮ, ವ್ಯಕ್ತಿತ್ವ ಎಲ್ಲವೂ ಕರಗಿ ಹೋದಂತೆ ತೋರಿತು ಯಮುನಳಿಗೆ. ಒಂದು ಗಂಟೆಯವರೆಗೆ ಆಕೆ ಪ್ರಜ್ಞೆಶೂನ್ಯಳಾಗಿ ಬಿದ್ದುಕೊಂಡಿದ್ದಳು. ಅನಂತರ ನಿಧಾನವಾಗಿ ತಿಳಿವು ಬಂದಿತು.

ಹಳ್ಳಿಯ ಮೊದಲನೆಯ ಮನೆಯ ವರೆಗೆ ಮಲ್ಲಪ್ಪ ಅವಳನ್ನು ಕರೆದು ತಂದು ಬಿಟ್ಟು, ತಾನು ಗುಡಿಸಲಿಗೆ ಹಿಂದುರಿಗಿ ಹೋದ. ಊಟದ ಸಮಯಕ್ಕೆ ಸರಿಯಾಗಿ ಆಕೆ ಮನೆಗೆ ಬಂದಳು. ಭೀಮಣ್ಣನಿನ್ನೂ ಬಂದಿರಲಿಲ್ಲ. ಬಾಗಿಲನ್ನು ದೂಡಿ ಒಳಗೆ ಬಂದು ತನ್ನ ಸ್ಥಳದಲ್ಲಿ ದೇಹವನ್ನೊರಗಿಸಿದಳು. ಅಂದು ನಿಂಗವ್ವ ತನ್ನನ್ನೆಬ್ಬಿಸಿ ಊಟಕ್ಕೆ ನೀಡಿದಳೊ ಇಲ್ಲವೊ, ತಾನು ಉಂಡೆನೊ ಇಲ್ಲವೊ—ಯಾವುದರ ನೆನಪೂ ಆಕೆಗುಳಿಯಲಿಲ್ಲ. ಚಿಕ್ಕಳ್ಳಿಗೆ ಬಂದಂದಿನಿಂದ ಒಂದು ರಾತ್ರಿಯೂ ಬಂದಿರದಂಥ ಸುಖನಿದ್ದೆ ಅಂದು ಅವಳಿಗೆ ಬಂದಿತು.

## ತೆರೆ: ಹದಿನೇಳು.

ಅಂದಿನಿಂದ ಅವಕಾಶ ಲಭಿಸಿದಾಗಲೆಲ್ಲ ಸೆಟ್ಟರ ತೋಟದಲ್ಲಿಯ ಆ ಗುಡಿಸಲಿಗೆ ಹೋಗಿ ಬರುವ ಚಟ ಅವಳಿಗಂಟಿಕೊಂಡಿತು. ತನ್ನ ಬದುಕಿ

ನಲ್ಲಿ ಕೊಂಚವಾದರೂ ಸುಖ ಸಿಕ್ಕುವಂತೆ ಮಾಡಲೆಂದು ದೇವರೇ ಆ ಯೋಗ ವನ್ನೊದಗಿಸಿಕೊಟ್ಟಿರಬೇಕೆಂದು ಆಕೆ ಭಾವಿಸಿದಳು. ಆಕೆ ಬರುವ ಹೊತ್ತಿಗೆ ಮಲ್ಲಪ್ಪ ಹೆಂಡದ ಮಗಿಯೊಂದಿಗೆ ಸಿದ್ಧವಾಗಿರುತ್ತಿದ್ದ. ನಂಜಿಕೊಳ್ಳಲು ಮಾಂಸದ ತಿಂಡಿಯೂ ಇರುತ್ತಿತ್ತು. ಆಕೆಗೆ ಅಮಲೇರಬಹುದೆಂಬ ಭಯ ದಿಂದ ಆತ ಹೆಚ್ಚು ಹೆಂಡ ಕುಡಿಸುತ್ತಿರಲಿಲ್ಲ. ಒಂದೆರಡು ಹರಿವಾಣಗಳಲ್ಲೇ ತೃಪ್ತಿಗೊಂಡು ಆಕೆ ಅವನ ತೋಳತೆಕ್ಕೆಯಲ್ಲೊರಗಿಕೊಳ್ಳುವಳು. ಹುಟ್ಟಿ ದಂದಿನಿಂದ ಸುಖವನ್ನೇ ಅರಿಯದಿದ್ದ ಅವಳಿಗೆ ಆತನ ಸಹವಾಸದಲ್ಲಿರುವಷ್ಟು ಹೊತ್ತು ಸಂತೋಷದ ಜೋಕಾಲಿಯ ಮೇಲೆ ಆಡಿದಂತಾಗುವುದು.

ಒಂದೊಂದು ರಾತ್ರಿ ಆತ ಮನೆಗೂ ಬರುತ್ತಿದ್ದ. ಅಡುಗೆಯ ಮನೆ ಯಲ್ಲಿ ಸವತಿಯೊಂದಿಗೆ ಗಂಡ ಗೊರಕೆ ಹೊಡೆಯುತ್ತ ಬಿದ್ದಿದ್ದ ಹಾಗೆ, ಪಡ ಸಾಲೆಯಲ್ಲಿ ಯಮುನಾ ಎಚ್ಚರವಾಗಿರುತ್ತಿದ್ದಳು. ಬಾಗಿಲಿಗೆ ಒಳಗಿನಿಂದ ಚಿಲಕ ಹಾಕದೆ ಹಾಗೇ ಬಿಟ್ಟಿರುತ್ತಿದ್ದಳು. ಮಧ್ಯರಾತ್ರಿಯ ವೇಳೆಗೆ ಆತ ಬಂದು ಕೊಂಚವೂ ಸದ್ದಾಗದಂತೆ ಬಾಗಿಲು ದೂಡಿ, ಮತ್ತೆ ಮುಚ್ಚಿ, ಅವಳ ಪಕ್ಕದಲ್ಲೊರಗಿಕೊಳ್ಳುತ್ತಿದ್ದ. ಆತನನ್ನು ಬಿಗಿಯಾಗಿ ತಬ್ಬಿಕೊಂಡು, ಆತನ ಧೈರ್ಯ ಸಾಹಸಗಳನ್ನು ಕುರಿತು ಯೋಚಿಸುತ್ತ ಆನಂದದ ತೆರೆಗಳ ಮೇಲೆ ತೇಲಿಹೋಗುತ್ತಿದ್ದಳು ಯಮುನಾ.

ಒಂದು ಸಂಜೆ, ಗುಡಿಸಲಿನಲ್ಲಿ ಕೂಡಿದಾಗ ಮಾತಿಗೆ ಮಾತು ಹೊರಟು ಆಕೆ ಕೇಳಿದಳು: "ನಿನಗ ಮದುವಿಯಾಗಿಲ್ಲೇನೋ ಮಲ್ಲಾ ?"

"ಆ ಮಾತು ಯಾಕೀಗ ಯಮುನೀ ?" ಎಂದು ಆತ ಆ ವಿಷಯ ವನ್ನೇ ಮರೆಸಲು ಪ್ರಯತ್ನಿಸಿದ.

"ಎಷ್ಟು ದಿನ ಅಂತ ನಾವು ಹೀಂಗೇ ಕದ್ದುಮುಚ್ಚಿ ಇರೂದಕ್ಕಾದೀತು? ಯಾರಾರೆ ನೋಡಿದರ ಗತಿಯೇನು ?"

"ದೇವರೇ ಗತಿ!" ಎಂದು ನುಡಿದು ಆತ ನಗತೊಡಗಿದ.

"ನನಗ ಸಂಕಟ, ನಿನಗ ನಗಿಯೂಟ. ನೀನೇನೋ ಗಂಡಸು ಪಾರಾಗಿ ಹೋಗಿ ಇನ್ನೆಲ್ಲಾದರೂ ದುಡಿದು ತಿಂದು ಇದ್ದೀ. ನನ್ನ ಜೀವಾನೆ ಉಳೀಲಿಕ್ಕಿಲ್ಲ. ಈ ಸುದ್ದಿ ಗೊತ್ತಾದರ ತುಂಡುತುಂಡು ಮಾಡಿಬಿಟ್ಟಾನು ನನ್ನ ಗಂಡ...."

" ಅಷ್ಟ್ಯಾಕ ಗಾಬರಿಯಾಗುತೀ ? ತಪ್ಪಿಸಿಕೊಂಡು ಹೋದರಾಯ್ತು."

" ತಪ್ಪಿಸಿಕೊಂಡರೂ ಮಂದೀಯೊಳಗ ಮಾರೀ ಎತ್ತಿ ತಿರುಗೂದು ಹೆಂಗ? "

" ಏನೂ ಅರೀದ ಕೂಸು ಮಾಡಿದಾಂಗ ಮಾಡುತೀಯಲ್ಲ ಯಮುನೀ! ನನಗಿಂತ ಮೊದಲು ಯಾರ ಸಂಗಡಲೂ ಮಲಗಿಲ್ಲೇನು ನೀ? " ಎಂದು ಕುತೂಹಲದಿಂದ ಕೇಳಿದ ಮಲ್ಲಪ್ಪ.

" ಇಲ್ಲ. ನಿನ್ನ ಬಿಟ್ಟು ಇನ್ಯಾರನ್ನೂ ಮಾಡಿಲ್ಲ ನಾ. ನಮ್ಮೂರಾಗ ನಿನ್ನ ಹಾಂಗs ಒಬ್ಬ ಆಳುಮಗ ಇದ್ದ—ರಾಮ ಅಂತ. ಅವನೂ ನಾನೂ ಸಣ್ಣವರಿದ್ದಾಗಿಂದ ಕೂಡೇ ಬೆಳೆದವರು. ಅವನ್ನs ಮದುವಿ ಆಗಬೇಕಂತ ಮನಸಿತ್ತು ನನಗ. ಆದರs ನನ್ನ ನಸೀಬದಾಗ ಅದು ಇರಾಕಿಲ್ಲ. ಇವಗ ಕೊಟ್ಟರು. ಅದೂ ನೆಟ್ಟಗಾಗಲಿಲ್ಲ. ಇವ ನಿಂಗೀನ್ನ ಕಟ್ಟಿಕೊಂಡ. ಸೋಡ ಚೀಟೀನಾದರೂ ಸಿಕ್ಕಿದ್ದರ ರಾಮನ ಕೂಡ ಮತ್ತ ಮದುವಿ ಆಗಲಿಕ್ಕೆ ಬರುತ್ತಿತ್ತು. ಅದೂ ಆಗಲಿಲ್ಲ. ಇಲ್ಲಿಗೆ ಬಂದು ಬೀಳಬೇಕಾಯ್ತು...."

" ಭೀಮಣ್ಣನ ಸಂಗಡ ಒಮ್ಮೆಯೂ ಮಲಗಿಲ್ಲೇನೇ ಯಮುನೀ ? "

" ಇಲ್ಲ. ಆ ನಿಂಗಿ ಅವನ್ನ ಬಿಟ್ಟರ ಹೌದಲ್ಲೋ? ಹೋಗಲಿ ಬಿಡು. ಅವನ ಮ್ಯಾಲ ಯಾವಾಗಲೂ ಮನಸಿರಲಿಲ್ಲ ನನಗ. ನನ್ನ ಮನಸೆಲ್ಲಾ ರಾಮನ ಮ್ಯಾಲ ಇತ್ತು. ಇಬ್ಬರೂ ಕೂಡಿ ಎಲ್ಲಾದರೂ ಓಡಿಹೋಗೂಣು ಅಂತ ಹೇಳಿದಿನಿ. ಅವ ಬುದ್ಧಿಗೇಡಿ ಕೋಣ. ಏನೂ ತಿಳೀಲಿಲ್ಲ ಅದಕ್ಕ."

ಮತ್ತೊಂದು ದಿನ ಆಕೆ ಅದೇ ವಿಷಯವನ್ನೆತ್ತಿ— " ನಿನಗ ಮದುವಿ ಆಗೈತ್ಯೋ ಇಲ್ಲೋ ಮಲ್ಲಾ ? " ಎಂದು ಪ್ರಶ್ನಿಸಿದಳು.

ಆತ ಅವಳನ್ನು ತಬ್ಬಿಕೊಂಡು ನಗುತ್ತ ನುಡಿದ. " ಮದುವಿ? ಈಗಲೇ ಆಗುತಾ ಐತ್ಯಲ್ಲ ! "

" ಅಂದರೆ ? "

" ಅಂದರೇನು ಒಡೆದೇ ಹೇಳಬೇಕೇನs ? ನಾನೇ ನಿನ್ನ ಗಂಡ, ನೀನೇ ನನ್ನ ಹೆಂಡತಿ. ಇಷ್ಟೂ ತಿಳಿಯುದಿಲ್ಲೇನ ನಿನಗ ? " ಎನ್ನುತ್ತ ಆತ ಅವಳ ಕೆನ್ನೆಗಳನ್ನು ಚುಂಬಿಸಿದ.

ಆದರೂ ಯಮುನಳಿಗೆ ಸಮಾಧಾನವಾಗಲಿಲ್ಲ. ಮೂರನೆಯ ದಿನ

ಹೊಲದಲ್ಲಿ ಕೆಲಸ ಮಾಡುತ್ತಿದ್ದಾಗ ಸಹಜವಾಗಿ ಕೇಳುವವಳಂತೆ ಇನ್ನೊಬ್ಬ ಕೂಲಿಯವಳನ್ನು ಆ ವಿಚಾರವಾಗಿ ಕೇಳಿದಳು. ಆಕೆ ಯಮುನಳನ್ನು ವಿಚಿತ್ರ ದೃಷ್ಟಿಯಿಂದ ನೋಡುತ್ತ— "ಅದೆಲ್ಲಾ ಯಾಕ ನಿನಗ? ಅವಗ ಮದುವಿ ಆದರೇನು, ಬಿಟ್ಟರೇನು?" ಎಂದಳು.

"ಹಾಂಗಲ್ಲವ್ವ. ನಮ್ಮ ಪೈಕಿ ಒಂದು ಹೆಣ್ಣು ಐತಿ. ಅದಕ್ಕೊಂದು ಗಂಡು ಕೂಡಿಸಬೇಕಾಗೈತಿ. ಮಲ್ಲಪ್ಪ ಆದಾನೇನೋ ಅಂತ ಕೇಳಿದಿನಿ."

"ಅವನೇನು ಆಗತಾನ? ಇನ್ನೊಂದು ನಾಕು ತಿಂಗಳಿಗೆ ಅವನ ಹೆಂಡತೀನೇ ಮನಿಗೆ ಬರುತಾಳ."

ಆಕಾಶವೇ ಕಳಚಿಕೊಂಡು ತನ್ನ ತಲೆಯ ಮೇಲೆ ಬಿದ್ದಂತಾಯಿತು ಯಮುನಳಿಗೆ. ಹೆಂಡತಿ! ಅವನಿಗೊಬ್ಬಳು ಹೆಂಡತಿಯೂ ಇದ್ದಾಳೆ, ಹಾಗಾದರೆ? ಇನ್ನು ನಾಲ್ಕು ತಿಂಗಳಲ್ಲೇ ಬರಲಿದ್ದಾಳೆ! ಆ ದಿನವೆಲ್ಲ ಅವಳ ಮನಸ್ಸು ಮೂಕವಾಗಿ ರೋದಿಸುತ್ತಿದ್ದಿತು. ಹೋರೆ ಮುಗಿಯುತ್ತಲೂ ಗುಡಿಸಲಿಗೆ ಹೋಗಿ ಮಲ್ಲಪ್ಪನನ್ನು ಕೇಳಿದಳು ಆತ ನಗುತ್ತಾ ನುಡಿದ:

"ಮತ್ತೆ! ನನಗೇನು ಸಂಸಾರ ಬ್ಯಾಡಾಗೈತಿ ಅಂತ ತಿಳಿದಿಯೋ ಏನು?"

"ನಾನಿದ್ದೆನಲ್ಲೋ ಮಲ್ಲಾ?"

"ನೀನೇನೋ ಮೊನ್ನಿ ಮೊನ್ನಿ ಬಂದಿ. ನನ್ನ ಮದುವಿ ಆಗಿ ನಾಕು ವರುಷಾಯ್ತು."

"ಈಸು ದಿನ ನನಗ್ಯಾಕ ಹೇಳಲಿಲ್ಲ?"

"ಹೇಳಿ ಮಾಡೂದಾದರೂ ಏನಂತ ಸುಮ್ಮನಿದ್ದೀನಿ."

"ನಾ ಕೇಳಿದಾಗಲೆಲ್ಲ ಮಾತು ಹಾರಿಸಿಬಿಟ್ಟಿ. ನೀ ಹಿಂಗ ನನಗ ಮೋಸ ಮಾಡೀ ಅಂತ ತಿಳಿದಿರಲಿಲ್ಲ." ಎಂದು ಯಮುನಾ ಕೋಪದಿಂದ ನುಡಿದಳು.

"ನಾನೇನು ಮಾಡಿದೆನೇ ನಿನಗ ಮೋಸಾ? ಏನೋ ಪಾಪ, ಗಂಡನಿಂದ ಸುಖಾ ಇಲ್ಲ. ನಾಕು ದಿನಾ ಆದರೂ ನನ್ನ ಸಂಗಡ ಸುಖಾ ಉಣ್ಣಲಿ ಅಂತ ದೊಡ್ಡ ಮನಸು ಮಾಡಿದ್ದೇ ನನ್ನ ತಪ್ಪೇನು?"

"ನೀನೊಬ್ಬ ದೊಡ್ಡ ಮನುಷ್ಯ. ನಾನೇ ಹಲ್ಕಾ ಹೆಣ್ಣು ಅಲ್ಲೇನು?"

"ಹಲ್ಕಾ ಅಲ್ಲದಿದ್ದರ ಇನ್ನೇನು ದೊಡ್ಡ ಪತಿವ್ರತಾ ಏನು, ಸೀತಾ ಸಾವಿತ್ರೀ ಹಂಗ? ಹೆಂಡಾ ತೋರಿಸಿ ಕರೆದ ಕೂಡಲೆ ಬಂದು ಮಲಗಿ ಕೊಂಡು ಬಿಟ್ಟಿ. ನನ್ನದೇನು ತಪ್ಪೈತಿ ಇದರಾಗ?"

"ಹೂಂ, ಅವನದೇನು ತಪ್ಪಿಲ್ಲ," ಎಂದು ಮನಸಿನಲ್ಲಿಯೆ ಹೇಳಿ ಕೊಂಡು ಸುಮ್ಮನಾದಳು ಯಮುನಾ. ತಪ್ಪು ದಾರಿ ತುಳಿದವಳು ತಾನೇ. ಗಂಡನ ಮನೆಯಲ್ಲಾಗುತಿದ್ದ ಸಂಕಟವನ್ನು ಮರೆಯಲೆಂದು ಹೆಂಡಕ್ಕೂ, ಅದ ರೊಂದಿಗೆ ಮಿಂಡನಿಗೂ ಮೊರೆ ಹೋಗಿದ್ದಳು. ಪ್ರಸಂಗ ಬಂದರೆ ಆತ ತನ್ನನ್ನು ಕಾಪಾಡಬಹುದೆಂಬ ಭರವಸೆಯಿಟ್ಟುಕೊಂಡಿದ್ದಳು. ಆದರೆ ಆತ ನೇನೂ ತನಗೆ ಆ ಪ್ರಕಾರ ಮಾತು ಕೊಟ್ಟಿರಲಿಲ್ಲವಲ್ಲ? ಹೌದು, ತಪ್ಪು ತನ್ನದೇ. ಆತನನ್ನು ದೂಷಿಸಲು ಬಾಯಿ ಬರಲಿಲ್ಲ.

ಕೆಲ ದಿನಗಳಲ್ಲಿಯೆ ತಾನು ಗರ್ಭಿಣಿಯಾಗಿರುವುದನ್ನು ಆಕೆ ಕಂಡು ಕೊಂಡಳು. ಮನೆಯವರಿಗೂ ಆ ವಿಷಯ ತಿಳಿಯಲು ಬಹುಕಾಲ ಬೇಕಾಗ ಲಿಲ್ಲ. ನಿಂಗವ್ವ ರೋಷಾವೇಶದಿಂದ ಗಂಡನನ್ನು ಕೆಣಕಿದಳು. ಆತ ದೇವ ರಾಣೆ ಮಾಡಿ—"ಒಂದು ಸಾರಿಯೂ ನಾ ಅವಳನ್ನು ಮುಟ್ಟಿಲ್ಲ" ಎಂದು ಸ್ಪಷ್ಟವಾಗಿ ಹೇಳಿದ. "ಹಂಗಾದರೆ? ಹಂಗಾದರೆ?" ಎಂದು ನಿಂಗವ್ವ ಗೊಣಗುತ್ತಿದ್ದಂತೆಯೆ ಆತ ಯಮುನಳನ್ನು ಝಾಡಿಸಿ ಒದೆದು, "ಯಾರನ್ನು ಇಟ್ಟುಕೊಂಡಿದ್ದೀ? ಬೊಗಳು. ಇಲ್ಲಾಂದರೆ ಕಡದು ಹಾಕ್ತೇನೆ," ಎಂದು ಗದ್ದರಿಸಿದ. ಆಕೆ ಏನೆಂದು ಉತ್ತರವೀಯಬೇಕು? ಒದೆತದ ಮೇಲೆ ಒದೆತ ಬಿದ್ದುವು. ಅವಳ ತಲೆಗೂದಲನ್ನು ಹಿಡಿದು ನಿಂಗವ್ವ ಪೊರಕೆಯಿಂದ ಏಟು ಹಾಕಿದಳು. "ಹಿಂಗೇ ಬಿಟ್ಟರ ನೀ ನಮ್ಮ ಮಾನಕಳೆದು ಮಣ್ಣಾಗ ಹಾಕ್ತೀ. ನಡೀ ಹೋಗು. ಎಲ್ಲಾದರೂ ಹಾಳಾಗಿ ಹೋಗು. ಇನ್ನು ಮ್ಯಾಲ ನನಗೂ ನಿನಗೂ ಏನೂ ಸಂಬಂಧ ಇಲ್ಲ," ಎಂದು ಹೇಳಿ ಭೀಮಣ್ಣ ಅವಳನ್ನೆಳೆದು ಓಣಿಗೆ ದೂಡಿ ಬಾಗಿಲು ಹಾಕಿಕೊಂಡ. ನೆರೆಹೊರೆಯ ಜನರು ನಕ್ಕು ಸುಮ್ಮನಾದರು.

ಗಂಡನ ಮನೆಯ ಋಣವಂತೂ ತೀರಿದಂತಾಗಿದ್ದಿತು. ಓಣಿಯಲ್ಲಿ ನಿಂತುಕೊಂಡಿದ್ದ ಹಾಗೆ ಮುಂದೇನನ್ನು ಮಾಡುವುದೆಂದು ಯೋಚಿಸುತ್ತಿ ದ್ದಳು ಯಮುನಾ. ಕೆಲವು ತಿಂಗಳುಗಳಿಗೆ ಮೊದಲು ಅದೊಂದು ದಿನ

ಆ ಮನೆಯೆದುರಿಗೆ ಹಾಗೆಯೆ ನಿಂತುಕೊಂಡಿದ್ದಳು. ಆಗಲೂ ಬಾಗಿಲು ಮುಚ್ಚಿಕೊಂಡಿದ್ದಿತು. ಆಗ ತನ್ನ ಜೊತೆಗೆ ತಾಯಿಯಿದ್ದಳು. ಈಗ ಯಾರೂ ಇಲ್ಲ.

ರಾತ್ರಿಯ ಹೊತ್ತು, ಮಳೆಗಾಲದ ದಿನಮಾನ ಬೇರೆ. ಕೃಷ್ಣ ಪಕ್ಷ. ಅಲ್ಪ ಸ್ವಲ್ಪ ಬೆಳಕು ನೀಡುವ ತಾರೆಗಳನ್ನೂ ಕಾರ್ಮೋಡಗಳು ಮುತ್ತಿಕೊಂಡಿದ್ದುವು. ಪಶ್ಚಿಮದಿಂದ ತಣ್ಣಗಿನ ಗಾಳಿ ಬೀಸುತ್ತಿತ್ತು. ಮಳೆ ಬರುವ ಲಕ್ಷಣಗಳೂ ಕಾಣಿಸಿಕೊಳ್ಳುತ್ತಿದ್ದುವು. ಯಮುನಾ ಅತ್ತ ಇತ್ತ ನೋಡಿದಳು. ಎಲ್ಲ ಬಾಗಿಲುಗಳೂ ಮುಚ್ಚಿಕೊಂಡಿದ್ದುವು. ಸಹಾನುಭೂತಿಯಿಂದ, ಕನಿಕರದಿಂದ ಆಕೆಯನ್ನು ಬರಮಾಡಿಕೊಳ್ಳುವ ಒಂದು ಮನೆಯೂ ಅಲ್ಲಿರಲಿಲ್ಲ. ಇಂಥ ವೇಳೆಯಲ್ಲಿ ಎಲ್ಲಿಗೆ ಹೋಗುವುದು? ರಾತ್ರಿಯನ್ನೆಲ್ಲಿ ಕಳೆಯುವುದು?

ಸೆಟ್ಟರ ತೋಟದಲ್ಲಿನ ಗುಡಿಸಲಿನ ನೆನಪಾಗುತ್ತಲೂ ಆಕೆಯ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಮಲ್ಲಪ್ಪ ರಾತ್ರಿ ಅಲ್ಲಿಯೇ ಮಲಗಿಕೊಂಡಿರುತ್ತಾನೆ, ಆತನಾದರೂ ತನಗೆ ಆಶ್ರಯ ಕೊಡಬಹುದೇನೋ ಎಂದುಕೊಳ್ಳುತ್ತ ಅಲ್ಲಿಗೆ ಬಂದಳು.

ಗುಡಿಸಲಿನ ಬಾಗಿಲು ಮುಚ್ಚಿಕೊಂಡಿದ್ದಿತು. ಅದನ್ನು ತಟ್ಟುತ್ತ ಯಮುನಾ ಕೂಗಿದಳು: "ಮಲ್ಲಾ, ಏ ಮಲ್ಲಾ...."

ಅಪರಿಚಿತ ಸ್ವರವೊಂದು ಉತ್ತರವಿತ್ತಿತು: "ಮಲ್ಲ ಇಲ್ಲಿಲ್ಲ. ಯಾರವರು ಒದರುವವರು?"

"ಮಲ್ಲ ಎಲ್ಲಿ ಹೋದ?"

"ಮಾವನ ಮನೀಗೆ ಹೋಗಿದಾನ ಹೆಂಡ್ತೀನ ಕರಕೊಂಡು ಬರೂದಕ್ಕ."

ಮುಗಿಯಿತು ಮಲ್ಲಪ್ಪನ ಸಂಬಂಧವೂ ಕೊನೆಗಂಡಾಯಿತು. ಇನ್ನು ಅವನ ಹೆಂಡತಿ ಬರುವಳು. ಆಮೇಲೆ ತನ್ನನ್ನು ಆತ ಕಣ್ಣೆತ್ತಿ ಸಹ ನೋಡಲಿಕ್ಕಿಲ್ಲ.

ನಿಟ್ಟುಸಿರೊಂದು ಹೊರಟಿತು ಅವಳ ಮುಖದಿಂದ. ಭಾರವಾದ ಕಾಲುಗಳನ್ನು ಕಷ್ಟದಿಂದ ಎತ್ತಿ ಇಡುತ್ತ ಕತ್ತಲೆಯಲ್ಲೇ ಸಾಗಿದಳು. ಎತ್ತ

ಹೋಗುವುದು ? ಏನು ಮಾಡುವುದು ? ರಾತ್ರಿಯನ್ನೆಲ್ಲಿ ಕಳೆಯುವುದು ? ಯಾವುದೂ ತಿಳಿಯದು. ಹಾಗೇ ಹೊರಟಿದ್ದಾಳೆ.

ಹೊಲಗಳಲ್ಲಿ ಹಾಯ್ದು ಬರುತ್ತಿದ್ದ ಹಾಗೆ ಮಳೆ ಸುರಿಯತೊಡಗಿತು. ಉಟ್ಟ ಸೀರೆಯನ್ನುಳಿದು ಇನ್ನೇನೂ ಇರಲಿಲ್ಲ ಅವಳ ಹತ್ತಿರ. ಮಳೆಯಿಂದ ಕಾಪಾಡಿಕೊಳ್ಳುವುದು ಹೇಗೆ ? ತೊಯಿಸಿಕೊಳ್ಳದಿರುವದೆಂತು ?

## ತೆರೆ: ಹದಿನೆಂಟು.

ರಾತ್ರಿಯೆಲ್ಲ ಹಾದಿ ತುಳಿದು ತನ್ನ ತವರೂರಿನ ಹತ್ತಿರ ಬಂದಿದ್ದಳು ಯಮುನಾ.

ಮುನ್ನಾ ದಿನದ ರಾತ್ರಿಯಿಂದ ಹೊಟ್ಟೆಗೇನೂ ಬಿದ್ದಿರಲಿಲ್ಲ. ತುಂಬ ಹಸಿವೆಯಾಗಿದ್ದಿತು. ಹೇಗೋ ಅಷ್ಟು ದೂರ ನಡೆದು ಬಂದಿದ್ದಳು.

ಊರ ಹೊರಗಡೆ ಮಾವಿನ ಮರಗಳ ಕೆಳಗಡೆ ನಾಲ್ಕಾರು ಗುಡಿಸಲುಗಳು. ಅವುಗಳಲ್ಲೊಂದರಲ್ಲಿ ಮುದುಕಿ ಬಸಲಿಂಗವ್ವ ಚಹದಂಗಡಿಯಿಟ್ಟುಕೊಂಡು ಜೀವಿಸುತ್ತಿದ್ದಳು. ಯಮುನಳಿಗೆ ಆಕೆ ಅಪರಿಚಿತಳೇನೂ ಅಲ್ಲ. ಆ ಊರಿನಲ್ಲಿ ಎಲ್ಲರಿಗೂ ಪರಿಚಿತಳು ಬಸಲಿಂಗವ್ವ. ಆಕೆಗೆ ಅರವತ್ತುವರ್ಷ ವಯಸ್ಸಾಗುತ್ತ ಬಂದಿದ್ದಿತು. ಗಂಡ ಎಂದೋ ಸತ್ತುಹೋಗಿದ್ದ. ಮಕ್ಕಳೂ ಇರಲಿಲ್ಲ. ಬಸಲಿಂಗವ್ವ ಒಬ್ಬಳೇ ಒಂಟಿಯಾಗಿ ಅಲ್ಲಿ ಜೀವಿಸುತ್ತಿದ್ದಳು. ಆ ಊರಿಗೆಲ್ಲ ಅದೊಂದೇ ಚಹದಂಗಡಿಯಾದುದರಿಂದ ವ್ಯಾಪಾರವೂ ಚೆನ್ನಾಗಿಯೇ ನಡೆಯುತ್ತಿತ್ತು. ಊರಿನ ನಿರುದ್ಯೋಗಿಗಳನೇಕರು ಅಲ್ಲಿ ಕುಳಿತುಕೊಂಡು ಇಸ್ಪೀಟು ಆಟದಲ್ಲಿ ವೇಳೆ ಕಳೆಯುವುದೂ ರೂಢಿಯಾಗಿದ್ದಿತು.

ಚಹದಂಗಡಿಯ ವ್ಯಾಪಾರದೊಂದಿಗೆ ಬಸಲಿಂಗವ್ವ ಇನ್ನೂ ಒಂದು ವ್ಯಾಪಾರವನ್ನು ರಹಸ್ಯವಾಗಿ ನಡಸುತ್ತಿದ್ದಳು. ಹಳ್ಳಿಯಲ್ಲಿ ಎಲ್ಲರಿಗೂ ಆ ವಿಷಯ ಗೊತ್ತಿದ್ದಿತಾದರೂ ಯಾರೂ ಆ ಬಗೆಗೆ ತುಟಿ ಬಿಚ್ಚಿ ಮಾತನಾಡುತ್ತಿರಲಿಲ್ಲ.

ಅಂದು ಯಮುನಾ ಅಲ್ಲಿಗೆ ಬಂದಾಗ ಬಸಲಿಂಗವ್ವ ರೊಕ್ಕದ ಪೆಟ್ಟಿಗೆಯ ಹತ್ತರ ಕುಳಿತುಕೊಂಡು ಪುತಾಣಿ ಕಾಳುಗಳಲ್ಲಿನ ಹರಳುಗಳನ್ನಾರಿಸುತ್ತಿದ್ದಳು.

ಅಂಗಡಿಯಲ್ಲಿ ಗಿರಾಕಿಗಳಾರೂ ಇರಲಿಲ್ಲ.

ಯಮುನಾ ಒಂದು ಕ್ಷಣ ನಿಂತು ಅಂಗಡಿಯ ಕಡೆಗೆ ದೃಷ್ಟಿ ತೂರಿದಳು. ಬಸಲಿಂಗವ್ವನ ಕಪಾಟಿನಲ್ಲಿ ಕುಳಿತು ಕಣ್ಸೆಳೆಯುತ್ತಿದ್ದ ಉಂಡೆ, ಖಾರ ಸೇವು, ಭಜಿಗಳನ್ನು ನೋಡುತ್ತಲೂ ಅವಳ ಬಾಯಲ್ಲಿ ನೀರೂರಿತು. "ಮುದುಕಿ ನನಗೇನಾದರೂ ಕೊಡಬಹುದು. ತಿಂದು ಚಹಾ ಕುಡಿದು ಹೋದರಾಯಿತು." ಎಂದು ಅಂಗಡಿಯೊಳಗೆ ಅಡಿಯಿರಿಸಿದಳು.

ನೊರದ್ದ ಮೇಲೆ ನೆಲಸಿದ್ದ ದೃಷ್ಟಿಯನ್ನು ನಿಧಾನವಾಗಿ ಮೇಲಕ್ಕೆತ್ತಿ ಬಸಲಿಂಗವ್ವ ಬಂದವಳನ್ನು ದಿಟ್ಟಿಸಿ ನೋಡಿದಳು. ಒಣಗಿ ಒಡೆದು ವಿದ್ರೂಪವಾಗಿದ್ದ ಅವಳ ಮುದಿ ತುಟಿಗಳ ಮೇಲೆ ಸಮಾಧಾನದ ನಗೆ ಮೂಡಿದಂತಾಯಿತು. "ಅಯ್ಯs ಇದೇನs ಯಮುನೀ? ಒಬ್ಬಾಕೇ ಬಂದೆಯೇನ ಊರಿಂದ?" ಎನ್ನುತ್ತಾ ಅವಳನ್ನು ಕರೆದು ತನ್ನ ಹತ್ತಿರ ಕೂಡ್ರಿಸಿಕೊಂಡು ಅವಳ ತಲೆಗೂದಲಿನ ಮೇಲೆ ಮೆಲ್ಲನೆ ಕೈಯಾಡಿಸಿದಳು. "ಹಸಿದು ಬಂದೀಯೋ ಏನೋ. ಏನಾರ ತಿನ್ನವ್ವ." ಎಂದು ಹೇಳುತ್ತ, ಎರಡು ಉಂಡೆಗಳನ್ನೂ, ಅವಲಕ್ಕಿ ಸೇವುಗಳನ್ನೂ ತೆಗೆದು ಅವಳ ಮುಂದಿರಿಸಿದಳು.

"ನಮ್ಮ ಅಪ್ಪಗ ಈಗ ಹ್ಯಾಂಗೈತಿ ಅಜ್ಜಿ?"

"ಪಾಪ....ಪಾಪ....ಹೊಳೆಪ್ಪಗ ಕಾಡೂ ಕಾಲ ಬಂದಾಂಗ ಕಾಣುತೈತಿ........" ಎಂದು ನುಡಿದು ಮುದುಕಿ ಮಾತನ್ನು ಅಷ್ಟಕ್ಕೇ ನಿಲ್ಲಿಸಿದಳು.

ಯಮುನಿಗೆ ತಿಂಡಿ ತಿನ್ನಲಾಗಲಿಲ್ಲ. ಆಕೆ ಗಾಬರಿಯಿಂದ ಕೇಳಿದಳು:

"ಯಾಕವ್ವ? ಏನಾಗೈತಿ?"

"ಮೊದಲು ಉಂಡೀ ತಿನ್ನು ಮಗಳೇ. ಚಾ ಕುಡಿ ಆ ಮ್ಯಾಲ ಹೇಳುತೀನಂತೆ."

ಯಮುನಳ ಹಸಿವೆಯೆಲ್ಲ ಎಲ್ಲಿಯೋ ಅಡಗಿದಂತಾಯಿತು. ಕೇಳಿದಳು: "ಏನಾಗೈತಿ ಹೇಳವ್ವ?"

"ಏನು ಹೇಳೂದು ಯಮುನೀ! ಗೌಡರ ಕೂಡ ಜಗಳ ಮಾಡಬಾರದಾಗಿತ್ತು ನಿಮ್ಮ ಅಪ್ಪ. ಅವರು ಹೇಳಿದಾಂಗ ಕೇಳಬೇಕಾಗಿತ್ತು. ಗೌಡರು ಬಂಗಾರದಂಥ ಮನಸಿನವರು. ನಿಮಗೆಲ್ಲಾರಿಗೂ ಸುಖ ಸಿಗಲಿ ಅಂತಲೇ ಬಯಸಿದವರು. ನಿಮ್ಮ ಅಪ್ಪಗ ಬುದ್ಧಿಯಿಲ್ಲ. ಅವರನ್ನ ಎದುರು ಕಟ್ಟಿ

ಕೊಂಡು ಬಿಟ್ಟಳು. ಈಗ ನೋಡು, ಬರಬಾರದ ಬವಣಿ ಬಂದೈತಿ ನಿಮ್ಮ ಅಪ್ಪಗ........"

"ಜಡ್ಡು ಬಹಳ ಹೆಚ್ಚಾಗೈತೇನವ್ವ?"

"ಅದೇನೋ ಮೊದಲಿನಿಂದ ಐತಿ ಅನ್ನು. ಗೌಡರನ್ನ ಎದುರು ಕಟಿಕೊಂಡು ಇರೂ ಮನೀನss ಹೋಯ್ತಲ್ಲ?"

"ಮನಿ ಹೋಯ್ತು? ಆದ್ಯಾಕ?"

"ಆದ್ಯಾಕಂದರ? ಎಂಥಾ ಹುಚ್ಚಿ ಇದ್ದೀ ನೀ? ಗೌಡರ ಹತ್ತಿರ ನಿಮ್ಮವ್ವ ಎರಡುನೂರು ಸಾಲಾ ಮಾಡಿದ್ದಳಲ್ಲ? ಅದನ್ನ ಕೊಡಬೇಕಂತ ಖಟ್ಲೆ ಹಾಕಿಸಿದರು. ಎಲ್ಲಿಂದ ಕೊಡತಾಳ? ಮನಿ ಲಿಲಾವಾಗಿ ಹೋಯ್ತು."

"ಈಗೆಲ್ಲದಾರವ್ವ, ನಮ್ಮ ಅಪ್ಪ ಅವ್ವ?"

"ಇಲ್ಲೇ ಇದಾರ ಒಂದು ಗುಡಸಲದಾಗ. ಒಂದು ವಾರ ಯಾರ ಯಾರ ಮನ್ಯಾಗೋ ಬಿದ್ದಿದ್ದರು. ಆ ಮ್ಯಾಲ ಈ ಗುಡಿಸಲಕ್ಕ ಬಂದರು. ಮಳೆಗಾಲ. ಗುಡಿಸಲೆಲ್ಲಾ ಸೋರುತೈತಿ. ಹೊಳೆಪ್ಪನ ಮೈಯಾಗ ಭಯಂಕರ ಉರಿ. ಹಾಸಾಕ ಹೊರಾಕ ಇಲ್ಲ ತೋಸಿಕೋತಾ ಬಿದ್ದಾನ. ಪಾಪ........ಪಾಪ........ಇಂಥಾ ಗತಿ ಯಾರಿಗೂ ಬರಬಾರದವ್ವ. ನಿಮ್ಮವ್ವಗ ಬುದ್ಧಿ ಇಲ್ಲ. ಗೌಡರು ಹೇಳಿದಾಂಗ ಕೇಳಿದ್ದರ ಇದೆಲ್ಲಾ ಯಾಕಾಗುತಿತ್ತು? ಗಂಡನ ಮನ್ಯಾಗ ನಿನಗಾದರೂ ಏನು ಸುಕಾ ಐತ್ಯೇ? ಇಲ್ಲೇ ಇರುತಿದ್ದೆಯಲ್ಲ ರಾಣೀ ಹಂಗ? ಗೌಡರು ನಿನಗ ಯಾತಕ್ಕೂ ಕಡಿಮೆ ಮಾಡದಂಗ ಸಾಕುತಿದ್ದರು........" ಎಂದು ಮುದುಕಿ ನುಡಿಯುತ್ತಿದ್ದ ಹಾಗೆ ಯಮುನಾ ಎದ್ದು ನಿಂತಳು.

"ಅಯ್ಯss, ಯಾಕ ಹೊಂಟುಬಿಟ್ಟಿ ಹೀಂಗss? ಚಾ ಸ್ವಲ್ಪ ಕುಡಿದು ಹೋಗಲ್ಲ?" ಎಂದಳು ಮುದುಕಿ.

"ಏನು ಚಾನೋ ಬಿಡವ್ವ. ನಮ್ಮ ಅಪ್ಪ ಅವ್ವ ಎಲ್ಲಿದಾರ?"

"ಹಳ್ಳದ ಆಚೀಕಡೆ ರಾಮಾಪುರದವರ ತೋಟದಾಗ ಇದಾರ. ಹಿಂಗ್ಯಾಕ ಅವಸರಾ ಮಾಡುತೀ? ಕುಂಡ್ರಾಕss?"

"ಆ ಮ್ಯಾಲ ಬರ್ತೀನಿ," ಎಂದವಳೇ ಯಮುನಾ ಅಲ್ಲಿಂದ ಹೊರಟು ಬಿಟ್ಟಳು.

"ಸಂಜೀಕಡೆ ಬಾ. ಬಹಾಳ ಮಾತಾಡುವ್ದೈತಿ," ಎಂದು ಮುದುಕಿ ಕೂಗಿ ಹೇಳಿದಳು. ಯಮುನಳಿಗೆ ಅದು ಕೇಳಿಸಿತೋ ಇಲ್ಲವೋ.

ಹಳ್ಳವನ್ನು ದಾಟಿ ಆಕೆ ರಾಮಾಪುರದವರ ತೋಟದ ಕಡೆಗೆ ಸಾಗಿದ್ದ ಹಾಗೆ ಎಡಗಡೆ ಗೌಡರ ತೋಟದಲ್ಲಿ ಕಸ ಕೆತ್ತುತ್ತಿದ್ದ ರಾಮು ಅವಳನ್ನು ಕಂಡು ಮೇಲಕ್ಕೆದ್ದು ನಿಂತ— "ಯಾವಾಗ ಬಂದಿಯೇ ಯಮುನೀ?" ಎಂದು ಕೂಗಿ ಕೇಳಿದ. "ಈಗ ಬಂದಿನಿ," ಎಂದಿಷ್ಟೇ ನುಡಿದು ಆಕೆ ಭರ ಭರನೆ ನಡೆಯುತ್ತ ಮುಂದೆ ಸಾಗಿದಳು.

ಕೈಬೀಸುತ್ತ ಸಾಗಿದ್ದ ಅವಳ ದೇಹದ ಹಿಂಬದಿಯನ್ನು ದಿಟ್ಟಿಸುತ್ತ ರಾಮು ಒಂದೆರಡು ಕ್ಷಣ ಹಾಗೆಯೆ ನಿಂತುಕೊಂಡ. ಅವನ ಹೃದಯದಲ್ಲಿ ಬಯಕೆಯೊಂದು ಮೂಡಿ ಮಾಯವಾದಂತಾಯಿತು. "ಎಷ್ಟುದ್ದ ಬೆಳೆದಾ ಳಲ್ಲ ಯಮುನಿ! ಎಷ್ಟು ಚಂದ ಕಾಣುತಾಳ! ಈ ಕಿನನ್ನಾಕಿಯಾಗಿದ್ದರ!" ಎಂದು ಮನಸ್ಸಿನಲ್ಲೇ ಹೇಳಿಕೊಂಡು ಮತ್ತೆ ಕಸ ಕೆತ್ತತೊಡಗಿದ.

ರಾಮಾಪುರದವರ ತೋಟದಲ್ಲಿಯ ಗುಡಿಸಲಿಗೆ ಬರುವವರೆಗೆ ಯಮು ನಳ ಎದೆ ಡವಡವನೆ ಹೊಡೆದುಕೊಳ್ಳುತಿತ್ತು. ತನ್ನ ತಂದೆ ತಾಯಿಗಳಿಗೆ ಇಂಥ ದುರ್ದೆಸೆಯುಂಟಾಗಲು ತಾನೇ ಕಾರಣಳೆಂದು ಯೋಚಿಸಿ ಆಕೆ ಕೊರಗ ತೊಡಗಿದ್ದಳು. ತನ್ನಂಥ ಪಾಪಿಯನ್ನು ದೇವರು ಯಾಕೆ ಹುಟ್ಟಿಸಿದನೊ. ಇಂಥ ರೂಪವನ್ನು ಯಾಕೆ ನೀಡಿದನೊ. ಇಂಥ ಬಡತನವನ್ನು ಯಾಕೆ ಕೊಟ್ಟನೊ. ಕೈಹಿಡಿದ ಗಂಡ ಹಾಗೆ ಮಾಡಿದ. ಮೆಚ್ಚಿದ ರಾಮನೊಂದಿಗೆ ಕೂಡಲಾಗಲಿಲ್ಲ. ಗೌಡರ ಕಾಗೆಯ ಕಣ್ಣು ತನ್ನ ಮೇಲೆ ಬಿತ್ತು. ಅವರಿಂದ ತಪ್ಪಿಸಿಕೊಳ್ಳಲು ಹೋದುದರಿಂದ ತನ್ನನ್ನು ಹೆತ್ತವರಿಗೆ ಈ ಗತಿ ಬಂತು. ಗಂಡನ ಮನೆಗೆ ಹೋದರೂ ಸಹ ಅಲ್ಲಿ ಶೀಲವನ್ನು ಕಾಯ್ದುಕೊಂಡು ಬಾಳ ಲಾಗಲಿಲ್ಲ. ಹೆಂಡದ ಆಸೆಗೆ ಬಿದ್ದು ಮಿಂಡನನ್ನು ಕಟ್ಟಿಕೊಂಡಂತಾಯಿತು. ಪಾಪದ ಬಸಿರು ಧರಿಸಿದ್ದಾಯಿತು. ಆ ಮಿಂಡನೂ ಕೈ ಬಿಟ್ಟ. ಗಂಡನ ಮನೆಯೂ ಕೈ ಬಿಟ್ಟಿತು. ತವರುಮನೆಯ ಗತಿ ಹೀಗೆ. ಮುಂದೆ? ಮುಂದೆ?

ಗುಡಿಸಲಿನ ಮೂಲೆಯೊಂದರಲ್ಲಿ ಹರಕು ಚಾಪೆಯ ಮೇಲೆ ಹೊಲಸ ಕೌದಿಯೊಂದನ್ನು ಹೊದೆದುಕೊಂಡು ಹೊಳೆಪ್ಪ ಮಲಗಿಕೊಂಡಿದ್ದ. ಆತನ

ಮುಖದ ಮೇಲೆ ನೊಣಗಳ ಹಿಂಡು ಸ್ವಚ್ಛಂದವಾಗಿ ಹಾರಾಡುತ್ತಿತ್ತು.

"ಅಪ್ಪಾ, ಅಯ್ಯೋ ಅಪ್ಪಾ...." ಎಂದು ರೋದಿಸುತ್ತ ಯಮುನಾ ಆತನ ಬಳಿ ಬಂದು ರಕ್ತವಿಲ್ಲದೆ ಮೂಳೆಯಾಗಿದ್ದ ಆತನ ಕೈಯನ್ನು ತನ್ನ ಕೈಗೆ ತೆಗೆದುಕೊಂಡು ಬಿಕ್ಕತೊಡಗಿದಳು.

"ಮಗಳೇ, ಯಮುನೀ...." ಎಂದಿಷ್ಟೇ ನುಡಿದು ಆತ ಸುಮ್ಮನಾದ. ಹೆಚ್ಚು ಮಾತನಾಡುವ ಸಾಮರ್ಥ್ಯ ಆತನಲ್ಲಿರಲಿಲ್ಲ. ಮಗಳ ಮುಖವನ್ನೇ ದಿಟ್ಟಿಸುತ್ತ ಮೌನವಾಗಿ ಒರಗಿಕೊಂಡಿದ್ದ.

ಕೂಲಿ ಕೆಲಸಕ್ಕೆ ಹೋಗಿದ್ದ ಗಂಗವ್ವ, ಸಂಜೆಯಾಗುತ್ತಲೂ ಗುಡಿಸಲಿಗೆ ಬಂದು ಮಗಳನ್ನು ಕಂಡು:—

"ಇದೇನs ? ಒಬ್ಬಾಕೇ ಬಂದಿ ? ಏನಾತು ?" ಎಂದು ಗಾಬರಿಯಿಂದ ಕೇಳಿದಳು.

ಯಮುನಾ ಅಳುತ್ತಳುತ್ತ ನಡೆದುದನ್ನೆಲ್ಲ ವಿವರಿಸಿದಳು. ಮಲ್ಲಪ್ಪನ ವಿಷಯವನ್ನೂ ತಾನು ಬಸಿರಿಯಾದ ಸಂಗತಿಯನ್ನೂ ತಿಳಿಸಲಿಲ್ಲ. "ಆ ಮನಿಯ ಋಣಾ ಮುಗಿವಂಗಾತವ್ವ. ಮೊದಲೇ ನನ್ನ ಕರಕೊಳ್ಳಾಕ ಅವರಿಗೆ ಮನಸಿರಲಿಲ್ಲ. ಇಷ್ಟು ತಿಂಗಳು ಹ್ಯಾಂಗೋ ಇದ್ದಿನಿ. ನಿನ್ನೆ ಮೈಮುರಿ ಬಡದು ಉಟ್ಟ ಸೀರಿ ಮ್ಯಾಲ ಹೊರಗ ಹಾಕಿದರು."

ಗಂಗವ್ವ ಒಲೆಗೆ ಉರಿಯಿಟ್ಟು ಯೋಚಿಸುತ್ತ ಕುಳಿತಳು. ಮಗಳನ್ನು ಗೌಡರಿಗೊಪ್ಪಿಸಲಾರದೆ ಅವರನ್ನೆದುರಿಸಿ ನಿಂತು ಮನೆಯನ್ನು ಕಳೆದುಕೊಂಡು ದಿಕ್ಕಿಲ್ಲದವರಂತೆ ಇಲ್ಲಿಗೆ ಬಂದು ಬಿದ್ದುದಾಯಿತು. ಗಂಡನ ಮನೆಯಲ್ಲಿಯೇ ಆಕೆ ಹೇಗಾದರೂ ಬಾಳಿಯಾಳು ಎಂಬ ಆಸೆಯಿತ್ತು. ಅದೂ ವ್ಯರ್ಥವಾಯಿತು. ಮತ್ತೆ ತವರಿಗೇ ಬಂದಳು ಮಗಳು. ಹಟವಾದಿ ಸ್ವಭಾವದ ಗೌಡರು ಮತ್ತೆ ತನ್ನ ಮಗಳ ಮೇಲೆ ಕಣ್ಣು ಹಾಕದಿರಲಾರರು. ಅವರಿಗೆ ಹಣದ ಬೆಂಬಲವಿದೆ, ಜನದ ಬೆಂಬಲವಿದೆ. ತಮಗೇನಿದೆ ಮಣ್ಣು ? ಏನೂ ಇಲ್ಲ: ರಾಮಾಪುರದವರ ಲಕ್ಕಪ್ಪ ದೊಡ್ಡ ಮನಸುಮಾಡಿ ತನ್ನ ಗುಡಿಸಲು ಕೊಟ್ಟಿದ್ದಾನೆ. ಗೌಡರನ್ನು ಲೆಕ್ಕಿಸದೆ ತಮಗೆ ಆಸರ ನೀಡುವುದಕ್ಕೂ ಬಹಳ ಧೈರ್ಯ ಬೇಕು. ಯಾವ ಗಳಿಗೆಯಲ್ಲಿ ಗೌಡರೇನನ್ನು ಮಾಡುವರೋ

ಹೇಳುವಂತಿಲ್ಲ. ಯಮುನಾ ಈಗ ಇಲ್ಲಿಗೆ ಬರಬಾರದಾಗಿದ್ದಿತು........ ಮುಂದೆ ಏನೇನು ಆಗಲಿದೆಯೋ........

## ತೆರೆ: ಹತ್ತೊಂಬತ್ತು.

ಗಂಗವ್ವ ಯೋಚಿಸಿದ ಹಾಗೆಯೆ ಆಯಿತು.

ಯಮುನಾ ಊರಿಗೆ ಬಂದ ಸಮಾಚಾರ ಗೌಡರಿಗೆ ಗೊತ್ತಾಗುವದಕ್ಕೇನೂ ತಡವಾಗಲಿಲ್ಲ

"ಅವಳು ಬಂದಾಳಂತೆ ಕಾಡೇಶೀ. ಮುಂದ ಹ್ಯಾಂಗ ?" ಎಂದು ಕೇಳಿದರು.

ಕಾಡೇಶಿ ಉತ್ತರವೀಯದಾದ. ಆ ಬಡ ಮನೆತನಕ್ಕೊದಗಿದ ವಿಪತ್ತುಗಳನ್ನು ಕಂಡು ಆತನ ಹೃದಯ ಮರುಗುತ್ತಿದ್ದಿತು. ಇಂದೋ ನಾಳೆಯೋ ಸಾಯುವಂತಿದ್ದ ಹೊಳೆಪ್ಪ ತನ್ನ ಮನೆ ಬಿಟ್ಟು ಬೀದಿಗೆ ಬೀಳುವಂತಾದುದನ್ನು ಕಂಡು ಕಾಡೇಶಿಯ ಕರುಳು ಕೊರೆಯುತ್ತಿದ್ದಿತು. ಗೌಡರ ಸ್ವಭಾವ ಅಷ್ಟು ಕಠೋರವಾಗಿರಬಹುದೆಂದು ಆತ ತಿಳಿದಿರಲಿಲ್ಲ. ಸೇಡು ತೀರಿಸಿಕೊಳ್ಳಲೆಂದು, ಆವರು ಹೊಳೆಪ್ಪನ ಮೇಲೆ ಕಟ್ಲೆ ಹಾಕಿ ಅವನ ಮನೆಯನ್ನು ಲಿಲಾವುಮಾಡಿಸಿದುದು ಕಾಡೇಶಿಗೆ ಸರಿಬಂದಿರಲಿಲ್ಲ. ಅಂತೆಯೆ, ಆತನಿಗೆ ಆ ವಿಷಯವಾಗಿ ಒಳಗೊಳಗೇ ತುಂಬ ಅಸಮಾಧಾನವಿದ್ದಿತು.

"ಏನನ್ನುತ್ತೀ ಕಾಡೇಶೀ ?" ಎಂದು ಗೌಡರು ಪುನಃ ಕೇಳಿದರು. ಆಗಲೂ ಆತ ಉತ್ತರವೀಯಲಿಲ್ಲ.

"ರಾತ್ರಿ ನಾಲ್ಕೈದು ಮಂದೀನ್ನ ಕರಕೊಂಡು ಹೋಗಿ ಆಕೀನ್ನ ಹೊತ್ತುಕೊಂಡು ಬಸಲಿಂಗವ್ವನ ಅಂಗಡಿಗೆ ತಂದು ಒಗೀತಿಯಾ ?"

ಆಗಲೂ ಕಾಡೇಶಿ ಮಾತನಾಡಲಿಲ್ಲ. ಒಳಗೊಳಗೇ ಆತನ ಎದೆ ಕಂಪಿಸಿತು. ಆತ ಉಭಯ ಸಂಕಟವಲ್ಲಿ ಸಿಲುಕಿ ತೊಳಲುತ್ತಿದ್ದ. ಮೃತ್ಯು ಮುಖದಲ್ಲಿರುವ ಬಡಪಾಯಿ ಹೊಳೆಪ್ಪನ ಮಗಳನ್ನು ಹೊತ್ತು ತರುವ ಇಷ್ಟ ಆತನಿಗಿರಲಿಲ್ಲವಾದರೂ ಇಷ್ಟು ದಿನ ಅನ್ನವಿತ್ತು ಸಾಕಿದ ಧಣಿಯ ಮಾತು ಮೀರುವಂತೆಯೂ ಇರಲಿಲ್ಲ.

"ರಾತ್ರಿ ನಾ ಅಂಗಡಿಯೊಳಗ ಇರುತೀನಿ. ರಾಮುನನ್ನ ಸಂಗತ ಕರೆದುಕೋ. ಇನ್ನಿಬ್ಬರು ಆಳುಗಳನ್ನ ತಕ್ಕೊಂಡು ಹೋಗಿ ಗದ್ದಲಾಗದಂಗ ಕೆಲಸ ಮುಗಿಸಿಕೊಂಡು ಬಾ ಹೋಗು." ಎಂದು ಅಪ್ಪಣೆ ಮಾಡಿ ಗೌಡರು ಮೇಲಕ್ಕೆದ್ದರು.

ಅದೇ ಸಮಯದಲ್ಲಿ

ರಾಮಾಪುರದ ಲಕ್ಕಪ್ಪನೊಂದಿಗೆ ಗಂಗವ್ವ ಅದೇ ವಿಷಯವಾಗಿ ಮಾತನಾಡುತ್ತಿದ್ದಳು.

"ಗೌಡರು ಯಾವ ವೇಳೆದಾಗ ಏನು ಮಾಡ್ಯಾರು ಅಂತ ಹೇಳಾಕ ಬರೂದಿಲ್ಲ ಲಕ್ಕಣ್ಣಾ. ಇನ್ನು ಹ್ಯಾಂಗ ಮಾಡೂಣು ?" ಎಂದು ಆಕೆ ತನ್ನ ಗೋಳು ತೋಡಿಕೊಳ್ಳುತ್ತಿದ್ದಳು.

ಲಕ್ಕಪ್ಪ ಅವಳನ್ನು ಸಾಂತ್ವನಗೊಳಿಸುತ್ತ— "ನೀಯೇನೂ ಅಂಜಬ್ಯಾಡ ತಂಗೀ. ನಾವೆಲ್ಲಾ ಏನು ಬಳೀ ತೊಟ್ಟೇವೋ ಏನು ? ಆ ಗೌಡ ದಿನದಿಂದ ದಿನಕ್ಕ ಹೆಚ್ಚಿಚ್ಚು ಸೊಕ್ಕು ಮಾಡಾಕ ಹತ್ತಿದಾನ. ಒಮ್ಮೆ ಅವನ ಸೊಕ್ಕು ಇಳಿಸಾಕs ಬೇಕು. ಇಂದು ನಿನ್ನ ಮಗಳ ಮ್ಯಾಲ ಕೈ ಮಾಡಿದರ ನಾಳೆ ನನ್ನ ಮಗಳ ಮ್ಯಾಲ ಮಾಡ್ಯಾನು. ಈ ಊರಾಗ ಯಾರೂ ಮರ್ಯಾದಿಯಿಂದ ಬಾಳೇವು ಮಾಡದಾಂಗ ಆದೀತಲ್ಲ ? ಒಂದು ಕೈ ನೋಡಿಬಿಡುತೀನಿ ಅವನ್ನ. ನೀ ಅಂಜಬ್ಯಾಡ," ಎಂದು ಹೇಳಿದ.

ಗಂಗವ್ವ ಅಂಜಿಕೊಂಡಿರಲಿಲ್ಲ ಅಂಜಿಕೆಯೆಂಬುದು ಅವಳ ಸ್ವಭಾವದಲ್ಲೇ ಇರಲಿಲ್ಲ ಆದರೂ ಏನೋ ದಿಗಿಲು. ಏನೋ ಆಶಂಕೆ. ಊರಿನಿಂದ ತುಸು ದೂರದಲ್ಲಿ ಒಂಟಿಯಾಗಿದ್ದ ಗುಡಿಸಲಿನಲ್ಲಿರುವವರು ತಾವು. ಹತ್ತಿಪ್ಪತ್ತು ಜನ ಧಡಿಯರೊಂದಿಗೆ ಗೌಡ ಬಂದುಬಿಟ್ಟರೆ ಕಷ್ಟವೇ ಸರಿ— ಎಂಬ ಯೋಚನೆ ಅವಳದು. ಆದರಲ್ಲೂ ತನ್ನ ಗಂಡ ಹಾಸುಗೆ ಹಿಡಿದು ಬಿದ್ದವ. ಮನೆಯಲ್ಲಿ ಬೇರೆ ಗಂಡಾಳುಗಳಿಲ್ಲ....ಅಂಥ ಪರಿಸ್ಥಿತಿಯಲ್ಲಿ.........

"ನೋಡು ಗಂಗವ್ವ. ನಮ್ಮ ಮಂದೀನೆಲ್ಲಾ ಕರದು ಗೌಡನ ಸಂಗತಿ ಹೇಳಿ ಅವರನ್ನ ತಯಾರು ಮಾಡುತೀನಿ. ರಾತ್ರಿ ಅಲ್ಲಿ ಮಲಗಿಕೊಂಡಿರೂದಕ್ಕ ಒಬ್ಬ ಮನಿಸ್ಯಾನ್ನ ಕಳಿಸುತೀನಿ. ಅವ ಒಂದು ಸಿಳ್ಳು ಹಾಕಿದರ ಸಾಕು. ನಾವೆಲ್ಲಾ ಬರುತೀವಿ. ಏನೂ ಗಾಬರಿಯಾಗಬ್ಯಾಡ, ಹೋಗು"

ಎಂದು ಭರವಸೆ ಕೊಟ್ಟು ಕಳುಹಿಸಿದ.

ಸಂಜೆ ಕಳೆದು ಕತ್ತಲಾಯಿತು. ಮಳೆಗಾಲದ ದಿನಗಳಾದುದರಿಂದ ತಾರೆಗಳ ಬೆಳಕಿಗೂ ತಡೆಯೊದಗಿದ್ದಿತು. ಕಾಡೇಶಿ ಊಟ ಮುಗಿಸಿಕೊಂಡು ಕೈಯಲ್ಲೊಂದು ಡೊಣ್ಣೆ ಹಿಡಿದುಕೊಂಡು ಗೌಡರ ತೋಟದಲ್ಲಿನ ಗುಡಸಲಿನ ಕಡೆಗೆ ಬರುತ್ತಿದ್ದ. ಆತನ ಹಿಂದೆ ಇಬ್ಬರು ಆಳುಗಳು ನಿಧಾನವಾಗಿ ಹೆಜ್ಜೆ ಯಿಡುತ್ತ ಬರುತ್ತಿದ್ದರು.

ಗುಡಿಸಲಿನಲ್ಲಿ ಚಿಮಣಿ ದೀಪವುರಿಯುತ್ತಿತ್ತು. ಆದೇ ತಾನೆ ಊಟ ಮಾಡಿ ಬಂದಿದ್ದ ರಾಮು ಬೀಡಿ ಸೇದುತ್ತ ಕುಳಿತಿದ್ದ. ಅಂಥ ಅವೇಳೆಯಲ್ಲಿ ಬಂದ ಕಾಡೇಶಿಯನ್ನೂ ಆಳುಗಳನ್ನೂ ಕಂಡು ಆತನಿಗೆ ಕೊಂಚ ಅಚ್ಚರಿ ಯಾಗದಿರಲಿಲ್ಲ.

"ಬಾ ಕಾಡೇಶೀ. ಕುಂದ್ರು. ಊಟ ಆತೇನು?"

ಈಚಲು ಚಾಪೆಯ ಮೇಲೆ ತನ್ನ ಭವ್ಯ ದೇಹವನ್ನೊರಗಿಸುತ್ತ ಕಾಡೇಶಿ ಬೇಸರದ ಧ್ವನಿಯಲ್ಲಿ ಹೇಳಿದ: "ಆತು ಬಿಡಪ್ಪ. ಏನು ಊಟಾನೋ. ಏನು ಬಾಳೇವೋ. ಎಲ್ಲಾ ಹೊಲಸು...."

ರಾಮು ದಿಗಿಲುಗೊಂಡು ಕಾಡೇಶಿಯ ಮುಖವನ್ನು ಮಿಕಿಮಿಕಿ ನೋಡುತ್ತ ಕುಳಿತ. ಕಾಡೇಶಿಯ ಮಾತು ಆತನಿಗೆ ಅರ್ಥವಾಗಲಿಲ್ಲ.

"ನಾಳೆ ಬೆಳಗಿನಾಗ ನಾ ನಮ್ಮೂರಿಗೆ ಹೋಗಿಬಿಡಬೇಕಂತ ಮಾಡೀನಿ ರಾಮು," ಎಂದ ಕಾಡೇಶಿ.

ರಾಮುನಿಗೆ ಕಳವಳವಾಗದಿರಲಿಲ್ಲ. ಕಾಡೇಶಿ ಊರಿಗೆ ಹೋಗಬೇ ಕೆನ್ನುತ್ತಾನೆ. ಊರಿಗೆ? ಏಕೆ? ಏನಾಯಿತು? ಈ ಊರು ಆತನಿಗೆ ಬೇಸರವಾಯಿತೇ? ಗೌಡರೇನಾದರೂ ಅಂದರೇ? ಇನ್ನೇನಾದರೂ ಆಯಿತೇ? ಕಾಡೇಶಿ ಅಲ್ಲಿಗೆ ಬಂದಂದಿನಿಂದ ರಾಮುನಿಗೆ ಆತನ ಬಗೆಗೆ ತುಂಬ ಪ್ರೀತಿ ಬೆಳೆದು ಬಂದಿದ್ದಿತು. ಸುತ್ತುಮುತ್ತಲಿನ ಸೀಮೆಯಲ್ಲೆಲ್ಲ ಪ್ರಸಿದ್ಧ ಪೈಲವಾನನೆಂದು ಕಾಡೇಶಿ ಹೆಸರು ಗಳಿಸಿದಂದಿನಿಂದ ರಾಮುನಿಗೆ ಹೆಮ್ಮೆಯೂ ಉಂಟಾಗಿದ್ದಿತು. ಕಾಡೇಶಿ ತನ್ನನ್ನು ಅಗಲಿ ಹೋಗುವ ವಿಚಾರವನ್ನೂ ಆತ ಸಹಿಸುವಂತಿರಲಿಲ್ಲ.

"ಯಾಕಣ್ಣಾ, ಹೀಂಗ ಮಾತಾಡುತೀ?" ಎಂದು ಆತ ಕೇಳಿದ.

"ಮತ್ತೇನ ಮಾಡೂದಲೆ! ಮಾಡಬಾರದ ಕೆಲಸಾ ಎಲ್ಲಾ ಮಾಡುತಾ ಮೂಗು ಮುಚ್ಚಿಕೊಂಡು ಬಿದ್ದಿರಬೇಕಲ್ಲ? ಕಾಡೇಶಿಯಿಂದಂತೂ ಆಗದ ಕೆಲಸ ಇದೆಲ್ಲಾ...."

ರಾಮುನಿಗೆ ಆ ಮಾತು ಅರ್ಥವಾಗಲಿಲ್ಲ. ಆತನಿಗೆ ತುಂಬ ದುಃಖ ವಾಯಿತು. ಕಾಡೇಶಿಗೇನಾಗಿದೆ? ಆತ ಹೀಗೇಕೆ ಹುಚ್ಚುಹುಚ್ಚಾಗಿ ಮಾತನಾಡುತಿದ್ದಾನೆ?

"ಇದೊಂದು ದಿನ ಮಾತ್ರ ಇದ್ದು ನಾಳೆ ಬೆಳಗಿನಾಗ ಗೌಡರಿಗೆ ಹೇಳಿ ಹೊಂಟುಹೋಗಿ ಬಿಡುತೀನಿ ರಾಮು," ಎಂದ ಕಾಡೇಶಿ. ಅವನ ಧ್ವನಿ ಭಾರವಾಗಿದ್ದಿತು.

"ಯಾಕಣ್ಣಾ, ಏನಾತು?"

"ಅದನ್ನೆಲ್ಲಾ ಕೇಳಬ್ಯಾಡ ರಾಮು. ಏಳು ನ್ಯಾಲಕ್ಕ. ಗೌಡರು ಒಂದು ಕೆಲಸ ಹಚ್ಚಿದಾರ. ಹೋಗಿ ಬರೂಣು."

ರಾಮು ಮರುಮಾತನಾಡದೆ ಮೇಲಕ್ಕೆದ್ದ. "ಎಲ್ಲಿಗೆ ಹೋಗುವುದು?" ಎಂದು ಆತ ಕೇಳಲಿಲ್ಲ· ಹಾಗೆಲ್ಲ ಕೇಳುವ ಚಟವೂ ಆತನಿಗಿರಲಿಲ್ಲ. ಹೇಳಿದಷ್ಟು ಕೆಲಸ ಮಾಡುವುದು ಆತನ ಪದ್ಧತಿಯಾಗಿತ್ತು.

ದೊಣ್ಣೆಗಳನ್ನು ಹಿಡಿದುಕೊಂಡು ಅವರು ರಾಮಾಪುರದವರ ತೋಟದ ಹತ್ತಿರ ಬರುತ್ತಿದ್ದ ಹಾಗೆ ರಾಮುನ ಮಿದುಳು ಸಾವಕಾಶವಾಗಿ ಕೆಲಸ ಮಾಡ ತೊಡಗಿತು. ಇಂಥ ರಾತ್ರಿಯಲ್ಲಿ ದೊಣ್ಣೆ ಹಿಡಿದುಕೊಂಡು ತಾವು ಅಲ್ಲಿಗೆ ಹೋಗುತ್ತಿರುವದೇತಕ್ಕಾಗಿ? ನಿನ್ನೆ ಯಮುನಾ ಬೇರೆ ಅಲ್ಲಿಗೆ ಬಂದಿದ್ದಾಳೆ. ಯಮುನಾ........

ಲಕ್ಕಪ್ಪನ ಹೇಳಿಕೆಯಂತೆ ಗುಡಿಸಲಿನ ಹೊರಗಡೆ ಮಲಗಿದ್ದ ಆಳು ದೂರದಲ್ಲಿ ನಡೆದುಬರುತ್ತಿದ್ದವರ ಹೆಜ್ಜೆಯ ಸಪ್ಪು ಕೇಳಿಸುತ್ತಲೂ ಎದ್ದು ನಿಂತು ರೈಲುಗಾಡಿಯ ಯಂತ್ರ ಕೂಗಿದ ಹಾಗೆ ಸಿಳ್ಳು ಹಾಕಿದ. ಆ ಸಿಳ್ಳು ಕಿವಿಗೆ ಬೀಳುತ್ತಲೂ ಕಾಡೇಶಿ ತಡೆದು ನಿಂತ. ಗುಡಿಸಲಿನಿಂದಲೇ ಸಿಳ್ಳು ಹೊರಟದ್ದು ಸ್ಪಷ್ಟವಾಗಿದ್ದಿತು. ತಾವು ಗುಡಿಸಲಿನ ಮೇಲೆ ದಾಳಿ ಮಾಡುವ ವಿಚಾರ ಅವರಿಗೆ ಮೊದಲೇ ತಿಳಿದಿದ್ದಿತೇನೋ—ಎಂದುಕೊಂಡ. ಮುಂದೆ ಹೋಗುವುದೇ, ಬೇಡವೇ, ಗೊತ್ತಾದ ಮೇಲೆ ದಾಳಿ ನಡಿಸಿ ಯಮುನಳನ್ನು

ಹೊತ್ತುಕೊಂಡು ಹೋಗುವುದೇ ಬೇಡವೇ ಎಂದು ಯೋಚಿಸುತ್ತ ಒಂದು ಕ್ಷಣ ಅಲ್ಲಿಯೆ ನಿಂತುಕೊಂಡ.

ಸಿಳ್ಳು ಕಿವಿಗೆ ಬೀಳುತ್ತಲೂ ರಾಮುನಿಗೂ ದಿಗಿಲಾಗಿದ್ದಿತು. ಆ ಸಿಳ್ಳು ಯಾರು ಹಾಕಿದರು, ಏಕೆ ಹಾಕಿದರು, ಮುಂದೆ ಏನು ನಡೆಯಲಿದೆ? ಎಂದು ಯೋಚಿಸುತ್ತ ಆತ ಮೂಢನಂತೆ ನಿಂತುಕೊಂಡ. ಕಾಡೇಶಿಯ ಅಕ್ಕಪಕ ದಲ್ಲಿ ನಡೆದುಬರುತ್ತಿದ್ದ ಆಳುಗಳು ಮಾತ್ರ ಹಾಗೆ ನಿಂತುಕೊಳ್ಳಲಿಲ್ಲ. ಕಾರ್ಯ ವನ್ನು ಯಾವ ರೀತಿಯಲ್ಲಿ ಸಾಧಿಸಬೇಕೆಂಬುದರ ಬಗೆಗೆ ಗೌಡರಿಂದ ಅವರಿಗೆ ಮೊದಲೇ ಸೂಚನೆ ದೊರೆತಿದ್ದುವೇನೋ. ಸಿಳ್ಳು ಕೇಳಿಸುತ್ತಲೂ ಅವ ರಿಬ್ಬರೂ ಓಡುತ್ತೋಡುತ್ತ ಹೋಗಿ ಸಿಳ್ಳು ಹಾಕಿದ ವ್ಯಕ್ತಿಯನ್ನು ಹಿಡಿದು ಕೊಂಡು ಆತನ ತಲೆಗೆ ದೊಣ್ಣೆ ಬೀಸಿದರು. ಆತ ಭೀಕರವಾಗಿ ಆಕ್ರೋಶ ಮಾಡುತ್ತ ನೆಲಕ್ಕುರುಳಿದ.

ಕೂಗು ಕೇಳಿ ಗಂಗವ್ವ ಯಮುನಾ ಇಬ್ಬರೂ ಗುಡಿಸಲಿನ ಬಾಗಿಲು ತೆರೆದು ಹೊರಕ್ಕೆ ಬಂದರು. ಆವೇಶ, ಉದ್ರೇಕಗಳಿಂದಾಗಿ ಗಂಗವ್ವನ ಮೈ ಯೆಲ್ಲ ನಡುಗುತ್ತಿತ್ತು. ಜೋಳ ಕೊಯ್ಯುವ ಹರಿತವಾದ ಕುಡಗೋಲನ್ನು ಕೈಯಲ್ಲಿ ಹಿಡಿದುಕೊಂಡು, ಸೆರಗನ್ನು ನಡುವಿಗೆ ಬಿಗಿದು ಆಕೆ ಕಾಳಿಯಂತೆ ಆರ್ಭಟಿಸುತ್ತ— "ಯಾರೋ ಅವ. ಇಂಥಾ ರಾತ್ರಿಯೊಳಗ ಪುಂಡಾಟ ಮಾಡಾಕ ಬಂದಾವ? ಒಳಗ ಕಾಲಾದರೂ ಇಟ್ಟು ನೋಡು. ನಿನ್ನ ರುಂಡಾನೇ ಕಡೀತೀನಿ," ಎಂದು ನುಡಿಯುತ್ತಾ ಬಾಗಿಲಿಗೆ ಅಡ್ಡವಾಗಿ ನಿಂತು ಕೊಂಡಳು.

ದೊಣ್ಣೆ ಹಿಡಿದು ನಿಂತಿದ್ದ ಆಳುಗಳಿಗೆ ಏನು ಮಾಡುವುದೆಂಬುದು ಹೊಳೆಯಲಿಲ್ಲ ಗಂಗವ್ವನನ್ನು ಹೊಡೆಯುವುದೇ ಬೇಡವೇ ಎಂದು ಅವರು ಯೋಚಿಸುತ್ತ ನಿಂತಿದ್ದ ಹಾಗೆಯೆ ದೂರದಿಂದ ಕಂದೀಲು ಹಿಡಿದುಕೊಂಡು ಹತ್ತು ಹನ್ನೆರಡು ಜನರು ಓಡಿ ಬರುವುದು ಕಾಣಿಸಿತು. ಕಂದೀಲಿನ ಮಂದ ಪ್ರಕಾಶದಲ್ಲಿ ಅವರು ಹಿಡಿದಿದ್ದ ಕುಡಗೋಲು, ಕೊಡಲಿಗಳು ಅಸ್ಪಷ್ಟವಾಗಿ ಕಾಣಿಸಿದುವು. ತಮ್ಮನ್ನು ಎದುರಿಸಿ ಯಮುನಳನ್ನುಳಿಸಲೆಂದೇ ಅವರು ಬರುತ್ತಿರುವರೆಂದು ತಿಳಿಯುತ್ತಲೂ ಆಳುಗಳಿಬ್ಬರೂ ಗಂಗವ್ವನನ್ನು ಬಲವಾಗಿ ನೂಕಿ ಯಮುನಳನ್ನು ಹಿಡಿಯಲು ಒಳನುಗ್ಗಿದರು.

ತನ್ನ ಮಗಳನ್ನು ಹೊತ್ತುಕೊಂಡೊಯ್ಯುವರೆಂಬುದು ತಿಳಿಯುತ್ತಲೂ ಹೊಳೆಪ್ಪ ಏಳಲಾರದೆ ಎದ್ದು ಅತ್ತಿತ್ತ ತೂಗಾಡುತ್ತ ಬಾಗಿಲಿನವರೆಗೆ ಬಂದಿದ್ದ. ರೋಗದಿಂದ ಜೀರ್ಣಶೀರ್ಣವಾಗಿದ್ದ ಆ ಅಸ್ಥಿಪಂಜರದಲ್ಲೂ ಆಗ ಅದ್ಭುತ ಆವೇಶ ಬಂದಂತಾಗಿದ್ದಿತು. ಗಂಗವ್ವನನ್ನು ನೂಕಿ ನೆಲಕ್ಕೆ ಕೆಡವಿ ಆಳುಗಳು ಮುನ್ನುಗ್ಗುತ್ತಲೂ ಆತ— "ನನ್ನ ಮಗಳನ್ನ ಮುಟ್ಟಬ್ಯಾಡಿರೋ ಮಂಗ್ಯಾ ಸೂಳೀಮಕ್ಕಳಿರಾ!" ಎಂದು ಆಕ್ರೋಶ ಮಾಡುತ್ತ ಅವರನ್ನು ಹೊಡೆಯಲು ಧಾವಿಸಿ ಬಂದ. "ಅಯ್ಯೋ ಅಪ್ಪಾ, ನೀನ್ಯಾಕ ಎದ್ದಿ?" ಎಂದು ಚೀರಿ ಯಮುನಾ ಆತನನ್ನು ಹಿಡಿದುಕೊಳ್ಳಲು ಹೋದಳು. ಆಳುಗಳಲ್ಲೊಬ್ಬ ದೊಣ್ಣೆಯನ್ನೆತ್ತಿ ಹೊಳೆಪ್ಪನ ತಲೆಗೆ ಬೀಸಿದ. "ಅಯ್ಯೋ" ಎಂದು ಒಂದು ಸಲ ಕೂಗಿ ಆತ ದೊಪ್ಪನೆ ನೆಲಕ್ಕುರುಳಿದ. "ನನ್ನ ಗಂಡನ್ನ ಕೊಂದಿರೇನ್ರ್ಯೋ" ಎನ್ನುತ್ತಾ ಗಂಗವ್ವ ಕುಡಗೋಲನ್ನೆತ್ತಿ ಅವರ ಕಡೆಗೆ ಬೀಸುತ್ತಿದ್ದ ಹಾಗೆಯೆ ಅವರು ಯಮುನಳನ್ನು ಗಟ್ಟಿಯಾಗಿ ಹಿಡಿದುಕೊಂಡು ಗುಡಿಸಲಿನ ಹೊರಕ್ಕೆ ಧಾವಿಸಿದರು.

"ಅಯ್ಯೋ ಅಪ್ಪಾ....ಅಯ್ಯೋ ಅವ್ವಾ....ನಮಪ್ಪನ್ನ ಕೊಂದರೋ...." ಎಂಬ ಯಮುನಳ ಕೂಗು ಕಿವಿಗೆ ಬೀಳುತ್ತಲೂ ರಾಮು ದಿಗಿಲುಗೊಂಡು ಗುಡಿಸಲಿನ ಕಡೆಗೆ ಧಾವಿಸಿದ. ಅವನ ಹಿಂದೆಯೆ ಕಾಡೇಶಿಯೂ ಓಡಿಬಂದ. ಅವರ ಹಿಂದೆಯೆ ಊರ ಜನರೂ ಬಂದರು.

ಯಮುನಳನ್ನು ಹಿಡಿದುಕೊಂಡು ಹೋಗುವ ಉದ್ದೇಶದಿಂದ ತಾವು ಅಲ್ಲಿಗೆ ಬಂದಿರುವ ವಿಷಯ ರಾಮುನಿಗೆ ಗೊತ್ತಿರಲಿಲ್ಲ. ತನ್ನೊಡನೆ ಬಂದಿದ್ದ ಆಳುಗಳು ಆಕೆಯನ್ನು ಹಿಡಿದು ಎಳೆದೊಯ್ಯುತ್ತಿರುವುದನ್ನು ನೋಡಿದಾಗ ಆತನಿಗೆ ಆಶ್ಚರ್ಯವೂ ಆಯಿತು, ಕೋಪವೂ ಉಕ್ಕೇರಿತು. ತಾನೇನನ್ನು ಮಾಡುತ್ತಿರುವೆನೆಂಬುದರ ಅರಿವೂ ಆತನಿಗುಳಿಯಲಿಲ್ಲ. ರೋಷಗೊಂಡ ಹಾವು ಹೆಡೆಯೆತ್ತಿ ಹಾರುವಂತೆ ಆತ ದೊಣ್ಣೆಯನ್ನೆತ್ತಿ ಆಳುಗಳ ಮೇಲೆ ಹಾರಿ ಇಬ್ಬರನ್ನೂ ಥಳಿಸತೊಡಗಿದ. ಅವರ ಹಿಡಿತದಿಂದ ತಪ್ಪಿಸಿಕೊಂಡು ಯಮುನಾ ಓಡಿಹೋಗಿ ಗುಡಿಸಲು ಸೇರಿ, ಗಾಯಗೊಂಡು ಬಿದ್ದಿದ್ದ ತಂದೆಯನ್ನು ಉಪಚರಿಸತೊಡಗಿದಳು. ಗಂಗವ್ವನಿಗೆ ಮಾತ್ರ ಆತನ ಕಡೆಗೆ ಗಮನವಿರಲಿಲ್ಲ. ಆಕೆ ಬಾಗಿಲಲ್ಲಿ ನಿಂತುಕೊಂಡು ಎರಡೂ ಕೈಗಳಿಂದ ಶಂಖ




ವಾದ್ಯ ಮಾಡುತ್ತಿದ್ದಳು.

ಒಂದು ನಿಮಿಷದೊಳಗಾಗಿ ಲಕ್ಕಪ್ಪನೂ ಆತನ ಜೊತೆಗಾರರೂ ಅಲ್ಲಿಗೆ ಬಂದು ಸೇರಿದರು. ಕಾಡೇಶಿಯನ್ನು ಕಂಡು, ಆತನನ್ನು ಹಿಡಿದುಕೊಳ್ಳಲು ಅವರು ಮುಂದುವರಿಯುತ್ತಿದ್ದ ಹಾಗೆ ಹಳ್ಳದ ಕಡೆಯಿಂದ ಗೌಡರು ಎಂಟು ಹತ್ತು ಆಳುಗಳನ್ನು ಜೊತೆಗೂಡಿ ಧಾವಿಸಿ ಬಂದರು. ಎರಡು ಪಂಗಡಗಳಿಗೂ ಕಾಳಗಕ್ಕೆ ಮೊದಲಾಯಿತು. ಕಾಡೇಶಿಗೂ ಕದನದ ಆವೇಶವೇರಿತು. ಆತನೂ ದೊಣ್ಣೆ ಬೀಸತೊಡಗಿದ. ಕುಡಗೋಲುಗಳು ಹಾರಾಡಿದುವು, ಕೊಡಲಿಗಳು ನೆಗೆದಾಡಿದುವು. ಪೆಟ್ಟು ತಿಂದು ಅನೇಕರು ನೆಲಕ್ಕುರುಳಿದರು. ಲಕ್ಕಪ್ಪನ ಚಾಪುಗೊಡಲಿ ಕಾಡೇಶಿಯ ಕುತ್ತಿಗೆಗೆ ತಾಕಿತು. ಆತ 'ಶಿವನೇ' ಎಂದು ಕಿರಿಚಿಕೊಂಡು ನೆಲಕ್ಕುರುಳಿದ. ಚಾಪುಗೊಡಲಿಯ ಹೊಡೆತಕ್ಕೆ ಕುತ್ತಿಗೆಯು ಅರ್ಧ ಭಾಗ ಕಡಿದು ಹೋಗಿ ನೆತ್ತರು ಚಿಮ್ಮತೊಡಗಿತು.

"ಸತ್ತೆನಪ್ಪಾ, ನಾ ಸತ್ತೆನಿ. ಅಯ್ಯೋ ದೇವರೇ...." ಎಂದು ಒಂದು ಸಲ ಆಕ್ರೋಶ ಮಾಡಿ ಕಾಡೇಶಿ "ಹರಹರಾ" ಎಂದ. ಗೌಡರು ಗಾಬರಿಗೊಂಡು ಹೊಡೆದಾಟವನ್ನು ನಿಲ್ಲಿಸಿ ಆತನ ಬಳಿ ಬರುವುದರೊಳಗಾಗಿ ಆತ ಕೊನೆಯುಸಿರು ಹಾಕಿದ್ದ.

## ತೆರೆ: ಇಪ್ಪತ್ತು.

ಮಾರನೆಯ ದಿನ ಮಧ್ಯಾಹ್ನ ಪೋಲಿಸಿನವರು ಆಗಮಿಸಿ ಗೌಡರಲ್ಲಿ ಬಿಡಾರ ಹೂಡಿದರು. ಅವರಿಗೆಲ್ಲ ಕೋಳಿ, ಕೋಳಿತತ್ತಿ, ಉಂಡೆ, ಚಪಾತಿಗಳ ಸರಬರಾಜು ನಡೆಯಿತು. ಮದ್ಯದ ನೈವೇದ್ಯವೂ ಆಯಿತು. ಗೌಡರ ಅತಿಥಿ ಸತ್ಕಾರದಿಂದ ತೃಪ್ತರಾದ ಪೋಲಿಸು ಅಧಿಕಾರಿಗಳು ಲಕ್ಕಪ್ಪ, ಗಂಗವ್ವ, ಹಾಗು ಇನ್ನು ನಾಲ್ಕೈದು ಜನರನ್ನು ಬಂಧಿಸಿದರು. ಅವರ ಪಕ್ಷದ ಜನರನ್ನೆಲ್ಲ ಥಳಿಸಲಾಯಿತು. ಕಾಡೇಶಿಯ ಶವದ 'ಪಂಚನಾಮೆ' ನಡೆಯಿತು. ಹೊಳೆಪ್ಪನ ಹೆಣದ ಕಡೆಗೆ ಅಧಿಕಾರಿಗಳು ಕಣ್ಣು ಹೊರಳಿಸಲಿಲ್ಲ.

"ನನ್ನ ಗಂಡನ್ನ ಇವರೇ ಕೊಂದರು ಸಾಹೇಬರೇ," ಎಂದು ಗಂಗವ್ವ ಆಕ್ರೋಶ ಮಾಡಿದಳು. ಅಧಿಕಾರಿಗಳು ನಕ್ಕು ಸುಮ್ಮನಾದರು.

ಸಾಯಂಕಾಲದ ವೇಳೆಗೆ ಬಂಧಿತರನ್ನು ಕರೆದುಕೊಂಡು ಅಧಿಕಾರಿಗಳು ಹೊರಟುಹೋದರು. ಕಾಡೇಶಿಯ ಶವವೂ ಅವರ ಜೊತೆಗೆ ಹೋಯಿತು.

"ನಮ್ಮ ಅವ್ವನ್ನ ಎಲ್ಲಿಗೆ ಒಯ್ಯುತೀರಪ್ಪಾ...." ಎಂದು ಯಮುನಾ ರೋದಿಸಿದಳು. ಅಧಿಕಾರಿಗಳು ನಕ್ಕು— "ನೀನೂ ಬರಬೇಕಂತ ಮಾಡೀ ಯೇನು?" ಎಂದು ಅಣಕವಾಡಿ ಮುಂದೆ ಸಾಗಿದರು.

ಊರಿನವರಲ್ಲಿ ಕೆಲವರು ಹೊಳೆಪ್ಪನ ಶವವನ್ನು ಹೊತ್ತುಕೊಂಡು ಸ್ಮಶಾನಕ್ಕೆ ಸಾಗಿಸಿದರು. ಮಧ್ಯರಾತ್ರಿಯ ಹೊತ್ತಿಗೆ ಆ ಜರ್ಜರಿತ ದೇಹ ಮಣ್ಣಿನಲ್ಲಿ ಮರೆಯಾಯಿತು. ಸ್ಮಶಾನದ ಹತ್ತಿರದಲ್ಲಿದ್ದ ಜಾಲಿಯ ಗಿಡದ ಕೆಳಗೆ ಕುಳಿತುಕೊಂಡು ಯಮುನಾ ಬಿಕ್ಕಿಬಿಕ್ಕಿ ಅಳುತ್ತಿದ್ದಳು.

ಹೆಣವನ್ನು ಹೂಳಲು ಬಂದವರೆಲ್ಲ ಒಬ್ಬೊಬ್ಬರಾಗಿ ಹೊರಟು ಹೋದರು. ಯಮುನಳೊಬ್ಬಳೇ ಆ ಗಿಡದ ಬುಡದಲ್ಲಿ ಕುಳಿತು ಅಳುತ್ತಿದ್ದುದು ಯಾರ ಗಮನಕ್ಕೂ ಬಂದಿರಲಿಲ್ಲವೇನೋ. ದುಃಖದ ಆವೇಶದಲ್ಲಿದ್ದ ಆಕೆಗೂ ಅವರು ಹೋದುದು ಅರಿವಾಗಲಿಲ್ಲ.

ಎಷ್ಟೋ ಹೊತ್ತಿನವರೆಗೆ ಆಕೆ ಅಲ್ಲಿ ಹಾಗೆಯೆ ಕುಳಿತಿದ್ದಳು. ತಲೆಯೆತ್ತಿ ನೋಡಿದಾಗ ಎದುರಿಗೆ ಆಕೃತಿಯೊಂದು ನಿಂತಂತೆ ಕಾಣಿಸಿತು. ಆ ಕತ್ತಲೆಯಲ್ಲೂ ಅದನ್ನಾಕೆ ಗುರುತಿಸಿದಳು. ರಾಮು........ಆತ ಯಾವಾಗ ಬಂದಿದ್ದನೊ........ಎಷ್ಟು ಹೊತ್ತಿನಿಂದ ಅಲ್ಲಿ ಮೌನವಾಗಿ ನಿಂತುಕೊಂಡಿದ್ದನೊ........

ಆಕೆ ತಲೆಯೆತ್ತಿ ತನ್ನ ಕಡೆಗೆ ಮುಖ ಹೊರಳಿಸುತ್ತಲೂ ಆತ ತಡಬಡಿಸುತ್ತ ಮಾತನಾಡಿದ:

"ಅಳಬ್ಯಾಡ ಯಮುನೀ, ಅತ್ತರೇನು ಬರತೈತಿ? ಏಳು....ಮನಿಗೆ ಹೋಗೂಣು...."

ಮನೆ? ಇನ್ನೆಲ್ಲಿಯ ಮನೆ? ತನಗೂ ಮನೆಯಿಲ್ಲ. ರಾಮುನಿಗೂ ಇಲ್ಲ. ಮನೆ? ಯಾರ ಮನೆಗೆ ಹೋಗುವುದು? ಆಕೆಗೆ ಮತ್ತೆ ಅಳು ಚಿಮ್ಮಿ ಬಂದಿತು.

"ಏಳು ಯಮುನೀ," ಎಂದು ಆತ ಆಕೆಯ ಕೈಹಿಡಿದು ಮೇಲಕ್ಕೆಬ್ಬಿಸಿದ.

" ಎಲ್ಲಿಗೆ ಹೋಗೂದು ? "

" ನನ್ನ ಗುಡಿಸಲಕ್ಕ. "

" ನಾ ನಿನ್ನ ಗುಡಿಸಲಕ್ಕ ಬಂದರ ಗೌಡರು ನಿನ್ನ ಸುಮ್ನನ ಬಿಡ್ತಾರೇನು ? ತೊಗಲು ಸುಲಿದಾರು ? "

ರಾಮುನಿಗೆ ತುಂಬ ಅಚ್ಚರಿಯೆನಿಸಿತು. " ಯಾಕ ? " ಎಂದು ಕೇಳಿದನಾತ.

" ಯಾಕ ? ನಿನಗಿನ್ನೂ ಏನೂ ಗೊತ್ತಾಗಿಲ್ಲೇನು ? " ಎಂದು ನುಡಿದು ಹಣೆ ಬಡಿದುಕೊಂಡಳು ಯಮುನಾ. " ಇಂದು ಇಷ್ಟೆಲ್ಲಾ ಗದ್ದಲ ಆದದ್ದ್ಯಾಕ ಅನ್ನೂದೂ ನಿನಗ ಗೊತ್ತಾಗಿಲ್ಲೇನು ? ನೀಯೇನು ಮನುಷ್ಯಾನೋ ದನಾನೋ ! "

ಆತ ಇನ್ನೂ ತಬ್ಬಿಬ್ಬಾದ. " ಸಿಟ್ಟ್ಯಾಕ ಆಗುತೀಯೆ ಯಮುನಾ ? ಆದದ್ದಾದರೂ ಏನು ? "

" ನೀ ಎಲ್ಲೋ ಎಮ್ಮೆಯ ಹೊಟ್ಯಾಗ ಹುಟ್ಟಿರಬೇಕು. ಕೋಣ ಇದ್ದ್ಹಾಂಗs ಇದ್ದೀ. ನಮ್ಮ ಗುಡಿಸಲ ಮ್ಯಾಲ ಕಾಡೇಶಿ ಯಾಕ ಬಂದಿದ್ದ ಗೊತ್ತಿಲ್ಲೇನು ? ನನ್ನ ಹೊತ್ತುಕೊಂಡು ಹೋಗಿ ಗೌಡರಿಗೆ ಕೊಡೂದಕ್ಕಂತ ಬಂದಿದ್ದ...."

ರಾಮು ತಲೆ ಕೆರೆದುಕೊಂಡು " ಹ....ಹ....ಹೀಂಗೇನ ? ಅಂದರs.... ನಿನ್ನ....ಗೌಡರು...."

" ಈಗಾದರೂ ಗೊತ್ತಾತೋ ಇಲ್ಲೋ ? ಏನು ಇನ್ನೂ ಒಡದೇ ಹೇಳಬೇಕೋ ? ನಿಮ್ಮ ಗೌಡರು ನನ್ನ ರಂಡೀ ಅಂತ ಇಟ್ಟುಕೊಳ್ಳಬೇಕಂತ ಇಷ್ಟೆಲ್ಲಾ ಮಾಡಿಸಿದರು "

ರಾಮುನಿಗೆ ಆಶ್ಚರ್ಯವಾಯಿತು, ವಿಷಾದವಾಯಿತು, ಸಿಟ್ಟುಬಂದಿತು. ಗೌಡರ ಬಗೆಗೂ ಸಿಟ್ಟು, ತನ್ನ ಬಗೆಗೂ ಸಿಟ್ಟು. ತಾನಿಂಥ ಮೂರ್ಖನೇ ? ತನಗೆ ಇಂಥ ಸಣ್ಣ ವಿಷಯವೂ ತಿಳಿಯಲಿಲ್ಲವೆ ? ಯಮುನಾ ಅಂದುದು ಸರಿ. ತಾನು ಕೋಣ. ದಪ್ಪ ಮಿದುಳಿನ ಕೋಣ. ತನ್ನ ಕಣ್ಣೆದುರಿಗೇ ಹೊಡೆದಾಟ ನಡೆಯುತಿದ್ದರೂ ಅದಕ್ಕೆ ಕಾರಣವೇನೆಂಬುದನ್ನು ತಾನು ತಿಳಿದುಕೊಂಡಿರಲಿಲ್ಲ. ತಿಳಿದುಕೊಳ್ಳಲು ಪ್ರಯತ್ನಿಸಿದ್ದಲ್ಲಿ ತಿಳಿಯಬಹುದಾಗ

ದ್ದಿತು. ರಾಮಾಪುರದವರ ಗುಡಿಸಲದ ಕಡೆಗೆ ಹೊರಟಾಗಲೆ ಕಾಡೇಶಿಯನ್ನು ಕೇಳಿದ್ದರೆ ಆತ ಹೇಳಬಹುದಾಗಿದ್ದಿತು. ಯಮುನಳನ್ನು ಹಾರಿಸಿಕೊಂಡು ಹೋಗಲೆಂದು ಅವರು ಹೊರಟಿದ್ದುದು ಆಗಲೆ ತಿಳಿದಿದ್ದರೆ ತಾನು ಅವರೊಂದಿಗೆ ಹೋಗುತ್ತಿರಲಿಲ್ಲ. ಕಾಡೇಶಿಯನ್ನೂ ತಡೆಯಬಹುದಾಗಿದ್ದಿತು. ತನ್ನ ಬಗೆಗೆ ತುಂಬ ಪ್ರೀತಿಯಿದ್ದಿತು ಕಾಡೇಶಿಗೆ. ಆತ ತನ್ನ ಮಾತು ಕೇಳಿದರೂ ಕೇಳಬಹುದಾಗಿದ್ದಿತು. ಆತನ ಜೀವವೂ ಉಳಿಯುತ್ತಿದ್ದಿತೇನೊ. ಎಲಾ, ಎಂಥ ಮೂರ್ಖ ತಾನು !

"ಗೊತ್ತಾತು.... ಈಗ ಗೊತ್ತಾತು.... ಗೌಡರು ಹೀಂಗೆಲ್ಲ ಮಾಡಿದರೇನು ? ನಿನ್ನ ಮ್ಯಾಲ ಕೈ ಮಾಡಿಸಿದರೇನು ? ಎಲಾ........" ಎಂದು ಹೇಳುತ್ತ ರಾಮ ಅಷ್ಟಕ್ಕೇ ತಡೆದು ನಿಂತ. ಆತನ ಶರೀರವೆಲ್ಲವೂ ನಡುಗಿತು. ಗೌಡರ ವಿರುದ್ಧವಾಗಿ ಆತ ಈ ಮೊದಲೆಂದೂ ಧ್ವನಿಯೆತ್ತಿದವನಲ್ಲ. ಅವರ ಬಗೆಗೆ ಆತ ಮಾತನಾಡಿದುದೂ ಅದೇ ಮೊದಲಬಾರಿ. "ಗೌಡರು.... ಗೌಡರು...." ಎಂದು ಆತನ ನಾಲಗೆ ಒಳಗೊಳಗೇ ಗುಣುಗುಣಿಸತೊಡಗಿತು. ಮುಂದೇನು ಮಾಡುವುದೆಂಬುದು ಆತನಿಗೆ ಹೊಳೆಯಲಿಲ್ಲ.

ಕನಸಿನಲ್ಲಿ ನಡೆಯುವವರ ಹಾಗೆ ನಡೆಯುತ್ತ ಆತ ಯಮುನಳನ್ನು ಕರೆದುಕೊಂಡು ಗುಡಿಸಲಿಗೆ ಬಂದ. ಒಳಗಡೆ ದೀಪ ಉರಿಯುತ್ತಿದ್ದಿತು. ಯಮುನಳೊಂದಿಗೆ ರಾಮ ಬಾಗಿಲಲ್ಲಿ ಅಡಿಯಿರಿಸುತ್ತಿದ್ದ ಹಾಗೆ ಒಳಗಡೆ ಸಾರಾಯಿ ಕುಡಿಯುತ್ತ ಕುಳಿತ ಗೌಡರ ಮೂರ್ತಿ ಕಾಣಿಸಿತು ಅವರನ್ನು ಕಂಡೊಡನೆಯೆ ಗೌಡರು ವಿಕಟವಾಗಿ ನಗುತ್ತ ಕೈಯಲ್ಲಿದ್ದ ಬಾಟಲಿಯನ್ನು ಹಾಗೆ ಹೀಗೆ ತೂಗಾಡಿಸುತ್ತ— "ಬಾ, ರಾಮಾ ಕರಕೊಂಡು ಬಂದಿಯೇನು ಯಮುನಿಯನ್ನ ? ಚಲೋ ಕೆಲಸ ಮಾಡಿದೆ ಶಾಬ್ಬಾಸ್. ಇದ್ದರ ನಿನ್ನಂಥ ಆಳುಮಗ ಇರಬೇಕು. ಬಾ ಯಮುನೀ, ಬಾ, ಇತ್ತ ಬಾ," ಎಂದು ಹೇಳುತ್ತ ಅವಳನ್ನು ಹಿಡಿಯಲೆಂದು ಮೇಲಕ್ಕೆದ್ದರು.

"ಅಯ್ಯೋ ರಾಮಾ," ಎಂದು ಚೀರಿ ಆಕೆ ಆತನನ್ನು ತಬ್ಬಿಕೊಂಡು ನಿಂತಳು. ರಾಮನಿಗೆ ವಿಚಿತ್ರ ಆವೇಶ ಬಂದಂತಾಯಿತು. ಒಡೆಯನಿಂದ ನಿಷ್ಕಾರಣವಾಗಿ ಏಟು ತಿಂದು ಕೆರಳಿದ ಸಾಕು ನಾಯಿ ಆತನ ಮೈಮೇಲೆ ಬೀಳುವಂತೆ ರಾಮ ಗೌಡರ ಕಡೆ ನುಗ್ಗಿ—" ಇದೆಂಥಾ ಹೇಸಿ ಕೆಲಸ ಗೌಡರೇ.

ಪಾಪ. ಈಕೀ ಅಪ್ಪನ್ನ ಕೊಂದಿರಿ. ಅವ್ವನ್ನ ಜೇಲಿಗೆ ಕಳಿಸಿದಿರಿ. ಅಪ್ಪನ್ನ ಮಣ್ಣಾಗ ಹಾಕಿ ಇದೇ ಈಗ ಬಂದಾಳ. ಈಗ ಆಕಿಯ ಮೈಮ್ಯಾಲ ಬೀಳುತೀರೇನು ? " ಎಂದು ಗದರಿಸುತ್ತ ಅವರನ್ನು ಹೊಡೆಯಲು ಕೈ ಎತ್ತಿದ.

ಗೌಡರಿಗೆ ಆಶ್ಚರ್ಯದ ಆಘಾತವಾದಂತಾಯಿತು. ರಾಮು ಈ ರೀತಿ ಯಾಗಿ ತಮಗೆ ಎದುರಾಗಿ ನಿಲ್ಲಬಹುದೆಂದು ಅವರು ಕನಸು ಮನಸಿನಲ್ಲೂ ಊಹಿಸಿರಲಿಲ್ಲ ಸಿಟ್ಟಿನಿಂದ ಉರಿಯುತ್ತ ಅವರು ಬಾಟಲಿಯನ್ನು ದೂರ ಬಿಸುಟಿ ಅತ್ತಿತ್ತ ಹೊರಳಿ ನೋಡಿದರು. ಗುಡಿಸಲಿನ ಗಳವೊಂದಕ್ಕೆ ಬಾರ ಕೋಲು ನೇತಾಡುತ್ತಿದ್ದಿತು. ಅದನ್ನು ಕೈಗೆತ್ತಿಕೊಂಡು ಗೌಡರು ರಾಮು ನನ್ನು ಥಳಿಸತೊಡಗಿದರು. " ನನ್ನ ಅನ್ನ ತಿಂದು ನನ್ನ ಮ್ಯಾಲsss ಬೀಳು ತೀಯಾ ಸೂಳೀಮಗನೇ....ನಿನ್ನ ಜೀವಾ ತಗೀತೀನಿ " ಎಂದು ಮೊದಲಾಗಿ ಅವರು ಆರ್ಭಟಿಸತೊಡಗಿದರು. ನಾಲ್ಕು ಏಟುಗಳಿಗೇ ರಾಮ ನೆಲಕ್ಕುರುಳಿದ. ಆತನನ್ನು ಅಂಥಸ್ಥಿತಿಯಲ್ಲಿ ಬಿಟ್ಟುಹೋಗುವ ಇಚ್ಛೆಯಿರದಿದ್ದರೂ ಯಮುನಾ ಅಲ್ಲಿ ನಿಲ್ಲುವಂತಿರಲಿಲ್ಲ. ರಾಮುನನ್ನು ಥಳಿಸಿ ತಣ್ಣಗೆ ಮಾಡಿದ ಬಳಿಕ ಗೌಡರು ತನ್ನ ಮೇಲೆ ಬೀಳುವರೆಂಬುದು ಆಕೆಗೆ ಖಚಿತವಾಗಿದ್ದಿತು. ಅಂತೆಯೇ, ಆಕೆ ಸದ್ದಾಗದಂತೆ ಅಲ್ಲಿಂದ ನುಸುಳಿಕೊಂಡು ಊರಿನ ಕಡೆಗೆ ಓಟ ಬಿಟ್ಟಳು.

ಊರಿನಲ್ಲಿ ಎಲ್ಲರ ಮನೆಗಳ ಬಾಗಿಲೂ ಮುಚ್ಚಿಕೊಂಡಿದ್ದುವು. ಅದೊಂದು ರಾತ್ರಿಯ ಮಟ್ಟಿಗೆ ಯಾರ ಮನೆಯಲ್ಲಾದರೂ ಮಲಗಿದರಾಯಿ ತೆಂದು ಯೋಚಿಸಿ ಗುರುತಿನವರ ಬಾಗಿಲು ತಟ್ಟಿ ಕೂಗಿದುದಾಯಿತು. ಅವಳ ಧ್ವನಿಯ ಗುರುತು ತಿಳಿಯುತ್ತಲೂ ಯಾರೂ ಬಾಗಿಲು ತೆರೆಯಲಿಲ್ಲ. "ಗೌಡ ರನ್ನು ಎದುರು ಕಟ್ಟಿಕೊಂಡು ಈ ಊರಾಗ ಬಾಳೇವು ಮಾಡೂದು ಹ್ಯಾಂಗ? ನೀ ಇಲ್ಲಿ ಇರೂದು ಗೊತ್ತಾದರೆ ಗೌಡರು ನಾಳೆ ನಮ್ಮನ್ನೂ ಪೋಲಿಸರಿಗೆ ಹಿಡಿದುಕೊಟ್ಟಾರು. ಎಲ್ಲಾದರೂ ಹೋಗಿ ಬಿದ್ದುಕೊಳ್ಳವ್ವ.... " ಎಂದು ಒಬ್ಬರು ಉತ್ತರವಿತ್ತರು. ಯಮುನಾ ನಿರಾಶಳಾಗಿ ಹಿಂದಿರುಗಿ, ಊರು ತ್ಯಜಿಸಿ ಹೊರಟಳು.

ಊರಿನಲ್ಲಿ ಯಾರೂ ತನ್ನನ್ನು ಕರೆದುಕೊಳ್ಳಲಿಲ್ಲ.

ಎಲ್ಲಿಗೆ ಹೋಗುವುದು ? ಈ ರಾತ್ರಿಯನ್ನೆಲ್ಲಿ ಕಳೆಯುವುದು ?

ತಂದೆಯ ಗತಿ ಹಾಗಾಯಿತು; ತಾಯಿಯ ಗತಿ ಹೀಗಾಯಿತು. ಆಕೆಗೆ ಏನು ಶಿಕ್ಷೆಯಾಗುವುದೋ ದೇವರೇ ಬಲ್ಲ. ಫಾಸಿ ಆದರೂ ಆದೀತು....

ಫಾಸೀ....

ಯಮುನೆಳ ಎದೆ ಕಂಪಿಸಿತು.

ಕಣ್ಣೆರಿಯುವ ಕತ್ತಲೆಯಲ್ಲಿಯೆ ಹೇಗೋ ಕಾಲುದಾರಿ ಹುಡುಕಿಕೊಂಡು ನಿಧಾನವಾಗಿ ನಡೆಯತೊಡಗಿದಳು.

ಎತ್ತ ಹೋಗುವುದು ? ತಿಳಿಯದು.

ಯಾರ ಮನೆಗೆ ? ತಿಳಿಯದು.

ಹಳ್ಳ ದಾಟಿ ಈಚೆಗೆ ಬಂದ ಬಳಿಕ ಆಕೆಯ ಕಾಲು ಸಹಜವಾಗಿಯೆ ಬಸಲಿಂಗವ್ವನ ಅಂಗಡಿಯತ್ತ ಹೊರಳಿದುವು.

ಆ ಅಂಗಡಿಯಲ್ಲಿ ಯಾರೂ ಇರುವುದಿಲ್ಲ. ಬಸಲಿಂಗವ್ವ ಒಳ್ಳೆಯ ಮುದುಕಿ. ತನ್ನ ಬಗೆಗೆ ಪ್ರೀತಿಯೂ ಇದೆ ಆಕೆಗೆ. ಅಂದು ತಾನು ಗಂಡನ ಊರಿಂದ ಹಸಿದು ಬಂದಿದ್ದಾಗ ಹೇಗೆ ಅಕ್ಕರೆಯಿಂದ ಕಂಡು, ಉಂಡೆ ಖಾರಾ ತಿನ್ನಿಸಿದ್ದಳು.... ಮತ್ತೆ ಬಂದು ಭೆಟ್ಟಿಯಾಗಲೂ ಹೇಳಿದ್ದಳು. ಈಗ ಹೋದರೆ ಆಕೆ ತನ್ನನ್ನು ಖಂಡಿತವಾಗಿಯೂ ಕರೆದುಕೊಳ್ಳುವಳು. ಊರಿನ ವರೆಲ್ಲ ಅಟ್ಟಿದಂತೆ ಅಟ್ಟುವುದಿಲ್ಲ....

ದುಃಖ, ಕಳವಳ, ಬೇಸರು, ಆಯಾಸ, ನಿದ್ರೆ....

ತಿರುಗಿ ತಿರುಗಿ ಕಾಲು ಸೋತು ಹೋಗಿದ್ದುವು. ಕಣ್ಣು ಜಡವಾಗಿ ದ್ದುವು. ಒಂದು ಆಸರ, ಒಂದು ಚಾಪೆ....ಅಷ್ಟಾದರೆ ಸಾಕು.

"ಬಸಲಿಂಗವ್ವ....ಬಸಲಿಂಗವ್ವ...."

"ಯಾರೇ ಅವರು ?"

"ನಾನು....ನಾನು....ಯಮುನಿ...."

"ಅಣ ? ಯಮುನಿ ? ಇಂಥ ರಾತ್ರ್ಯಾಗ ?"

ಬಾಗಿಲು ತೆರೆಯಿತು. ಮೂಲೆಯಲ್ಲಿ ಬಿಡಿಸಿದ್ದ ಚಾಪೆ ಕೈಮಾಡಿ ಕರೆ ಯಿತು. ಯಮುನಾ ಅತ್ತ ಧಾವಿಸಿದಳು.

"ಅಯ್ಯೋ ಪಾಪ....ನಾನೆಲ್ಲಾ ಕೇಳಿದಿನಿ. ಹೀಂಗಾಗಬಾರದಾಗಿತ್ತು."

ಅದು ಬಸಲಿಂಗವ್ವನ ಧ್ವನಿ. ಯಮುನಳಿಗೆ ಆ ಮಾತು ಅರ್ಥವಾಗಲಿಲ್ಲ. ನಿದ್ರೆ.... ನಿದ್ರೆ.... ನಿದ್ರೆ....

ನಿದ್ರೆ ಬಂದು ಅವಳನ್ನು ಕನಸಿನ ಲೋಕಕ್ಕೆ ಸೆಳೆದೊಯ್ದಿತು.

## ತೆರೆ: ಇಪ್ಪತ್ತೊಂದು.

ಮಾರನೆಯ ದಿನ ಬಸಲಿಂಗವ್ವ ಎದ್ದು ಗುಡಿಸಲಿನ ಬಾಗಿಲು ತೆರೆಯುವ ವೇಳೆಗೆ ಯಮುನಳಿಗೂ ಎಚ್ಚರವಾಯಿತು. ಕಳೆದ ದಿನಗಳ ಘಟನೆಗಳನ್ನು ನೆನೆದುಕೊಳ್ಳುತ್ತ ಎದ್ದು ಕುಳಿತಳು.

ಒಲೆಗೆ ಉರಿ ಹಚ್ಚಿ ಬಸಲಿಂಗವ್ವ ಚಹ ಮಾಡಿದಳು.

" ಮಾರೀ ತೊಳಕೋ ಯಮುನೀ. ಚಾ ಕುಡಿ. "

ಯಮುನಾ ಮುಖ ತೊಳೆದಳು. ಚಹ ಕುಡಿದಳು.

ಇನ್ನೇನು ಮಾಡುವುದು ? ಅದೊಂದು ದೊಡ್ಡ ಪ್ರಶ್ನೆ. ಆ ಊರಿನಲ್ಲಂತೂ ಇರುವಂತಿಲ್ಲ. ಹಾಗಾದರೆ ಹೋಗುವುದೆಲ್ಲಿಗೆ ?

ರಾಮನಾದರೂ ತನ್ನನ್ನು ಕಾಪಾಡಿಯಾನು ಎಂಬ ಸಣ್ಣ ಆಸೆಯೊಂದು ಉಳಿದಿತ್ತು; ಅದೂ ಮಾಯವಾಯಿತು.

ಮುಂದಕೆಲ್ಲಿಗೆ ?

" ಗೌಡರನ್ನ ಇದಿರು ಹಾಕಿಕೋಬಾರದಾಗಿತ್ತು ನಿಮ್ಮವ್ವ. ಅವರ ವಿರುದ್ಧ ಹೋಗಿ ಬಾಳೇವು ಮಾಡಾಕಾಗುವದೇನೇ ? ನನಗ ಮೊದಲೇ ಗೊತ್ತಿತ್ತು ಹೀಂಗೆಲ್ಲಾ ಆಗುತೈತಿ ಅಂತ.... ಇನ್ನೇನು ಮಾಡುವಾಕೆ ನೀ ?"

ತಾನಿನ್ನೇನು ಮಾಡುವಾಕೆ ?

" ನಿನ್ನ ನೋಡಿದರ ನನ್ನ ಕರುಳೆಲ್ಲ ಮರುಗುತಾವ ಮಗಳೇ. ಏನು ಮಾಡೂದು ? ಸಾವುಕಾರರ ಮುಂದ ಬಡವರ ಆಟ ನಡೆಯೂ ಹಾಂಗಿಲ್ಲ. ಈ ಪರಪಂಚವೇ ಹೀಂಗ." ಮುದುಕಿ ರಾಗ ಎಳೆದಳು.

ಒಂದೆರಡು ಕ್ಷಣ ಸುಮ್ಮನಿದ್ದು ಮತ್ತೆ ಹೇಳಿದಳು ಮುದುಕಿ: "ನೀನೂ

ಪರದೇಶಿ ಆದಿ. ನಾನೂ ಪರದೇಶಿ ಆಗಿದ್ದೀನಿ. ನೀನಾದರೂ ಎಲ್ಲಿ ಹೋಗುತೀ ? ಯಾರು ನಿನ್ನ ನೋಡತಾರ ? ಇಲ್ಲೇ ಇದ್ದುಬಿಡು ನನ್ನ ಸಂಗಡ. ನನಗೂ ಒಂದು ಆಧಾರ. ನಿನಗೂ ಒಂದು ಆಧಾರ.... ”

ಯಮುನಾ ಮೂಕ ಬೊಂಬೆಯಂತೆ ಕುಳಿತಿದ್ದಳು. ಆಕೆ ಮಾತನಾಡುವುದಾದರೂ ಏನನ್ನು ?

ನಡುಹಗಲು. ಊಟವಾಯಿತು.

ಸಂಜೆಗತ್ತಲು. ಮತ್ತೆ ಊಟ.

ರಾತ್ರಿಯಾಯಿತು. ನಿದ್ರೆ. ಚಾಪೆಯ ಸಹವಾಸ.

ಅರ್ಧ ತಾಸು ಕಳೆದಿರಬಹುದು. ಯಾರೋ ಬಂದು ತನ್ನ ಪಕ್ಕದಲ್ಲಿ ಪವಡಿಸಿದಂತಾಯಿತು. ಭಾರವಾದ ಕೈಗಳೆರಡು ತನ್ನನ್ನು ಬಳಸಿಕೊಂಡಂತಾಯಿತು. ಒರಟು ಕೂದಲು ತನ್ನ ಕೆನ್ನೆಗಳನ್ನು ಕೊರೆದಂತಾಯಿತು. ವಾಸನೆ....ಸಾರಾಯಿಯ ವಾಸನೆ.... ಯಮುನಳ ನಿದ್ರೆ ಹಾರಿಹೋಯಿತು. ಕಣ್ಣು ತೆರೆದು ಸುತ್ತಲೂ ದೃಷ್ಟಿ ಹೊರಳಿಸಿದಳು. ಕತ್ತಲು. ಏನೂ ಕಾಣಿಸದು.

ಬಾಹುಗಳು ತನ್ನನ್ನು ಬರಸೆಳೆದು ತಬ್ಬಿಕೊಳ್ಳುತ್ತಿವೆ. ಒರಟುಕೂದಲು ತನ್ನ ತುಟಿಗಳನ್ನು ತಿವಿಯುತ್ತಿವೆ.

“ ಯಾರವರು ? ” ಎಂದು ಆಕೆ ಗಾಬರಿಯಿಂದ ಕೂಗಿಕೊಂಡಳು.

“ ನಾನು.... ” ಅದು ಗೌಡರ ಧ್ವನಿ.

“ ಆಃ ? ನೀವು ? ” ಎನ್ನುತ್ತ ಆಕೆ ಮೇಲಕ್ಕೇಳಲು ಪ್ರಯತ್ನಿಸಿದಳು. ಏಳಲಾಗಲಿಲ್ಲ.

“ ಸುಮ್ಮನ ಬಿದ್ದುಕೊಳ್ಳೇ ಯಮುನೀ. ಯಾಕ ಗದ್ದಲ ಮಾಡುತೀ ” ಎಂಬ ಕೂಗು ಕೇಳಿಸಿತು. ಆಚೆಯ ಮೂಲೆಯಲ್ಲಿ ಮಲಗಿದ್ದ ಮುದುಕಿಯ ಧ್ವನಿ ಅದು

ಯಮುನವ್ವ ಸುಮ್ಮನೆ ಬಿದ್ದುಕೊಂಡಳು

ಆಕೆ ಇನ್ನೇನನ್ನೂ ಮಾಡುವಂತಿರಲಿಲ್ಲ

# ತೆರೆ: ಇಪ್ಪತ್ತೆರಡು.

ಮೂರು ತಾಸುಗಳ ವರೆಗೆ ಅವಳೊಂದಿಗಿದ್ದು ಗೌಡರು ಹೊರಟು ಹೋದರು. ಹೋಗುವಾಗ— "ಇನ್ನು ಮ್ಯಾಲ ದಿನಾಲೂ ರಾತ್ರಿ ಬರುತಿರುತೀನಿ ನಾನು. ನೀ ಎಲ್ಲಿಗೂ ಹೋಗಬ್ಯಾಡ. ಇಲ್ಲೇ ಇರು ಆರಾಮಾಗಿ. ನಿನಗ ಏನೂ ಕಡಿಮಿ ಆಗದಾಂಗ ಮಾಡುತೀನಿ," ಎಂದು ಹೇಳಿ ಒಂದು ನೋಟನ್ನು ಅವಳ ಕೈಗಿಟ್ಟರು.

ಅನಂತರ ಆಕೆಗೆ ನಿದ್ದೆ ಬರಲಿಲ್ಲ. ಬರುವುದು ಸಾಧ್ಯವಿರಲಿಲ್ಲ.

ಕೊನೆಗೂ ತಮ್ಮ ಹಟವನ್ನು ಸಾಧಿಸಿಕೊಂಡು ಬಿಟ್ಟಿದ್ದರು ಗೌಡರು. ಇಚ್ಛೆಯಿರಲಿಲ್ಲವಾದರೂ ತಾನು ಅವರಿಗೆ ದೇಹವನ್ನೊಪ್ಪಿಸಬೇಕಾಗಿ ಬಂದಿದ್ದಿತು. ತಾನು ಪ್ರತಿಭಟಿಸುವಂತಿರಲಿಲ್ಲ. ಹೊಡೆದಾಡುವಂತಿರಲಿಲ್ಲ. ಬಸಲಿಂಗವ್ವನ ಅಂಗಡಿಯೊಂದು ಸೆರೆಮನೆಯಂತಾಗಿದ್ದಿತು. ಗೌಡರ ಹಿಡಿತದಿಂದ ತಪ್ಪಿಸಿಕೊಂಡು ಅಲ್ಲಿಂದ ಪಾರಾಗಿ ಹೋಗುವುದು ಅಸಾಧ್ಯವಾಗಿದ್ದಿತು.

ಅಂದು ಬೆಳಗಿನಲ್ಲಿ ಬಸಲಿಂಗವ್ವ ಆಡಿದ ಮಾತುಗಳನ್ನು ಮತ್ತೆ ನೆನೆದುಕೊಂಡಳು. "ನೀನೂ ಪರದೇಶಿ. ನಾನೂ ಪರದೇಶಿ. ನನಗೂ ಒಂದು ಆಧಾರ. ನಿನಗೂ ಒಂದು ಆಧಾರ. ಇಲ್ಲೇ ಇದ್ದು ಬಿಡು." ಎಂದು ಹೇಳಿದ್ದಳಾಕೆ. ಅವಳ ಆಧಾರವೆಂದರೆ ಎಂಥದೆಂಬುದು ಈಗ ಗೊತ್ತಾಗಿದ್ದಿತು. ತನ್ನನ್ನು ಗೌಡರ ಸೂಳೆಯನ್ನಾಗಿ ಮಾಡಿ ಸುಖವಾಗಿ ಬದುಕುವ ಹೊಂಚು ಮುದುಕಿಯದು. ಆ ಹೊಂಚಿಗೆ ತಾನು ಬಲಿಬೀಳುವುದೇ ?

ಹಠಾತ್ತಾಗಿ ಆಕೆಗೆ ರಾಮನ ನೆನಹು ಬಂದಿತು. ಗೌಡರಿಂದ ಹೊಡೆತ ತಿಂದು ನೋವಿನಿಂದ ನರಳುತ್ತ ಬಿದ್ದಿರಬಹುದು ಆತ. ಯಮುನಳ ಕಣ್ಣುಗಳಲ್ಲಿ ನೀರೂರಿತು. ಆ ಗುಡಿಸಲಿನಲ್ಲಿರುವುದು ಅಸಹನೀಯವಾಯಿತು.

ಬೆಳಗಿನ ಜಾವದಲ್ಲಿ ಚಾಪೆಯನ್ನು ಬಿಟ್ಟು ಎದ್ದು ಹೆಜ್ಜೆಗಳ ಸದ್ದಾಗದಂತೆ ನಡೆದು ಬಂದು ಬಾಗಿಲು ತೆರೆದಳು. ಸಮೀಪದಲ್ಲಿಯೆ ಮಲಗಿ ಗೊರಕೆ ಹೊಡೆಯುತ್ತಿದ್ದಳು ಬಸಲಿಂಗವ್ವ.

ಹೊರಗಡೆ ತಣ್ಣನೆಯ ಗಾಳಿ ಬೀಸುತ್ತಿದ್ದಿತು. ಸಣ್ಣಗೆ ಜಿನುಗುಮಳೆ ಸುರಿಯುತ್ತಿದ್ದಿತು.

ಸೀರೆಯ ಸೆರಗನ್ನು ತಲೆತುಂಬ ಹೊದೆದುಕೊಂಡು ಗುಡಿಸಲಿನಿಂದ ಹೊರಬಂದಳು ಯಮುನಾ. ಒಂದು ಕ್ಷಣ ಹಾದಿಯಲ್ಲಿಯೆ ನಿಂತುಕೊಂಡು ಯಾವ ದಿಕ್ಕಿಗೆ ಹೊರಡುವುದೆಂದು ಯೋಚಿಸಿದಳು. ಮನಸ್ಸಿನಲ್ಲಿಯೆ ಯಾವುದೋ ನಿರ್ಧಾರಕ್ಕೆ ಬಂದು ಎಡಗಡೆಗೆ ತಿರುಗಿ ಲಗುಬಗೆಯಿಂದ ನಡೆಯ ತೊಡಗಿದಳು.

ಯಾವುದೋ ಹಳ್ಳಿಯೊಂದರ ಬಳಿ ಬರುವ ವೇಳೆಗೆ ಬೆಳಕು ಹರಿಯಿತು. ಊರ ಹೊರಗಿನ ಚಹದಂಗಡಿಗೆ ಹೋಗಿ ನಾಲ್ಕು ಬಾಳೆಯ ಹಣ್ಣು ಕೊಂಡು ತಿಂದು, ಚಹ ಕುಡಿದಳು. ಗೌಡರು ಕೊಟ್ಟಿದ್ದ ರೂಪಾಯಿ ನೋಟು ಕುಪ್ಪುಸ ದಲ್ಲಿತ್ತು. ಅದನ್ನು ತೆಗೆದುಕೊಟ್ಟು, ಚಿಲ್ಲರೆ ಪಡೆದುಕೊಂಡು ಮತ್ತೆ ಮುಂದೆ ಸಾಗಿದಳು.

ಏಕಾಕಿಯಾಗಿ ಹೊರಟ ಈ ತರುಣಿಯನ್ನು ಕಂಡು ಹಾದಿಯಲ್ಲಿ ಅನೇ ಕರು ಕುತೂಹಲದಿಂದ— “ ಎಲ್ಲಿ ಹೊರಟೆವ್ವಾ ಒಬ್ಬಳೇ ?” ಎಂದು ಕೇಳಿ ದರು. ಯಮುನಾ ಯಾರಿಗೂ ಉತ್ತರವೀಯಲಿಲ್ಲ. ಹುಚ್ಚು ಹಿಡಿದವರ ಹಾಗೆ ಮುಂದೆ ಸಾಗಿದಳು.

ಸಂಜೆಯಾಗುವ ವೇಳೆಗೆ ಮತ್ತೊಂದು ಹಳ್ಳಿ ಬಂದಿತು. ಹಳ್ಳಿಯ ಮೊದಲನೆಯ ಮನೆಯೇ ಹೆಂಡದಂಗಡಿ. ಹೆಂಡದ ವಾಸನೆ ಬಡಿದೊಡನೆ ಅವಳ ಮನಸ್ಸು ಅತ್ತ ಧಾವಿಸಿತು. ಬಹಳ ದಿನಗಳಿಂದ ಹೆಂಡ ಸಿಕ್ಕಿರಲಿಲ್ಲ. ಚಿಲ್ಲರೆಯೆಲ್ಲವನ್ನೂ ಹೆಂಡಕ್ಕೆ ಸುರಿದು ತೃಪ್ತಿಯಾಗುವವರೆಗೆ ಕುಡಿದು ಮುಂದೆ ಸಾಗಬೇಕೆಂದು ಯೋಚಿಸಿ ಅಂಗಡಿಗೆ ಹೋದಳು.

ಅಲ್ಲಿ ಇಲ್ಲಿ ಕುಳಿತು ಕುಡಿಯುತ್ತಿದ್ದ ಜನರಿಂದ ತುಸು ದೂರದಲ್ಲಿ ಕುಳಿತುಕೊಂಡು ನಿಧಾನವಾಗಿ ಹೆಂಡವನ್ನು ಸೇವಿಸಿದಳು. ಚಿಕ್ಕಳ್ಳಿಯ ನೆನಪು ಬಂದಿತು. ಸೆಟ್ಟರ ತೋಟ....ಅಲ್ಲಿನ ಗುಡಿಸಲು....ಮಲ್ಲಪ್ಪ........ ಅವನೊಂದಿಗೆ ತಾನು ಕಳೆದ ದಿನಗಳು....

ಪಾಗಿಯಲ್ಲಿನ ಹೆಂಡ ಮುಗಿಯಿತು. ಬಲಗೈಯಿಂದ ಬಾಯಿಯನ್ನೊರೆಸಿಕೊಂಡು ಮೇಲಕ್ಕೆದ್ದಳು. ಅವಳ ತುಟಿಗಳ ಮೂಲೆಗಳಲ್ಲಿ ವಿಚಿತ್ರ ನಗೆ ತುಳುಕಾಡುತ್ತಿತ್ತು.

ಹತ್ತಿರದಲ್ಲಿಯೆ ಕುಳಿತು ಹೆಂಡ ಕುಡಿಯುತ್ತಿದ್ದವನೊಬ್ಬ ಅವಳನ್ನು ಕಂಡು ಕಣ್ಣು ಮಿಟುಕಿಸಿ— "ಬಾರಾಕs ಹುಡುಗೀ? ಎತ್ತಲಾಗ ಹೊಂಟಿ ಇಷ್ಟು ಲಗೂ? ಆಹ್ಹಾ, ಏನ ಚೆಲುವಿ ಇದ್ದೀಯೇ!" ಎಂದು ತೊದಲಿದ. ಕೊಂಚ ದೂರದಲ್ಲಿದ್ದ ಇನ್ನೊಬ್ಬ ಕುಡುಕ ಕೈಯಲ್ಲಿನ ಮಗಿಯನ್ನು ತಲೆಯ ಮೇಲಿಟ್ಟುಕೊಂಡು, ಕೆಂಪಗೆ ಕೆಂಡದಂತಾಗಿದ್ದ ಕಣ್ಣುಗಳನ್ನು ಅವಳ ಕಡೆಗೆ ಹೊರಳಿಸಿ— "ಯಾವೂರಾಕಿ ನಾರಿ, ಏನೆ ಸುಂದರೀ!" ಎಂದು ರಾಗ ಎಳೆದ. ಸುತ್ತಮುತ್ತಲಿದ್ದ ಕುಡುಕರ ಬಳಗವೆಲ್ಲ 'ಹೋಯ್' ಎಂದು ಕೇಕೆ ಹಾಕಿತು. ಕೆಲವರು ನಕ್ಕರು. ಕೆಲವರು ಚಿಟಿಕೆ ಹೊಡೆದರು.

ಯಾವುದರ ಕಡೆಗೂ ಗಮನ ಕೊಡದೆ ಯಮುನಾ ಅಲ್ಲಿಂದ ಹೊರಟುಬಿಟ್ಟಳು. ಹೆಂಡ ಕುಡಿದುದಾಗಿದ್ದಿತು. ಸಂಪೂರ್ಣ ತೃಪ್ತಿಯಾಗಿರದಿದ್ದರೂ ಸಾಕಷ್ಟು ಸಮಾಧಾನವಿದ್ದಿತು.

ಆ ಹಳ್ಳಿಯನ್ನು ದಾಟಿ ಬಂದ ಬಳಿಕ ಕಾಲುದಾರಿ ರೈಲುದಾರಿಯನ್ನು ಕೂಡಿಕೊಂಡಿತು. ನಡಿಗೆಯ ವೇಗವನ್ನು ಕಡಿಮೆ ಮಾಡಿ ನಿಧಾನವಾಗಿ ಹೆಜ್ಜೆ ಹಾಕತೊಡಗಿದಳು.

ಸಂಜೆ ಕಳೆದು ಕತ್ತಲಾಯಿತು. ಮತ್ತೆ ಮಳೆ ಸುರಿಯತೊಡಗಿತು. ಯಮುನಾ ನಡೆಯುತ್ತಲೇ ಇದ್ದಳು.

ಹಿಂದಿನಿಂದ ಸಿಳ್ಳು ಕೇಳಬಂದಿತು. ರೈಲಿನ ಸಿಳ್ಳು. ಇನ್ನೂ ಬಲು ದೂರವಿರಬೇಕು ರೈಲು. ಅರ್ಧ ಹರದಾರಿಯಾದರೂ ದೂರವಿದ್ದೀತು.

ಯಮುನಾ ಅತ್ತಿತ್ತ ಹೊರಳಿ ನೋಡಿದಳು. ಮಿಂಚಿನ ಬೆಳಕಿನಲ್ಲಿ ಆಗಾಗ ಹೊಳೆಯುತ್ತಿದ್ದ ರೈಲು ಕಂಬಿ....ಬಲಗಡೆಗೆ ಅಸ್ಪಷ್ಟವಾಗಿ ಕಾಣಿಸುವ ತಂತಿಕಂಬ. ಜನರ ಸುಳಿವಿರಲಿಲ್ಲ. ಇದೇ ಸರಿಯಾದ ಸ್ಥಳವೆಂದು ತೋರಿತು. ಇನ್ನು ಸ್ವಲ್ಪ ಹೊತ್ತಿನೊಳಗಾಗಿ ರೈಲು ಧಾವಿಸಿ ಬರುವುದು—

ತನ್ನ ಘೋರ ಬಾಳನ್ನು ಕೊನೆಗೊಳಿಸುವ ರೈಲು.

ಇಂದೇ ಕೊನೆಗೊಳಿಸುವುದೇ ಈ ಬಾಳನ್ನು ?

ಹೌದು. ಬದುಕುವುದರಿಂದ ಉಪಯೋಗವಾದರೂ ಏನು ? ತಾನೊಂದು ಹೆಣ್ಣು ಜೀವ. ಪ್ರಾಯದವಳು. ಯಾವ ಆಧಾರವೂ ಇಲ್ಲ. ಯಾವ ಸುಖವೂ ಇಲ್ಲ. ಸಾವಿನಲ್ಲೇ ಸುಖ ಸಿಕ್ಕಬಹುದು. ಸಾವು....

ಸೆರಗನ್ನು ಸೊಂಟಕ್ಕೆ ಬಿಗಿದು ಯಮುನಾ ಸಿದ್ಧವಾದಳು.

# ಎರಡನೆಯ ಅಂಕ.

## ತೆರೆ: ಒಂದು.

"ಸಾಯಬೇಕಂತ ಹೋದಿನಿ. ಸತ್ತರ ಚಲೋ ಆಗುತಿತ್ತು. ಆದ್ರೂ ದೈವದ ಮನಸಿಗೆ ಬರಲಿಲ್ಲೇನೊ. ಮತ್ತೆ ಉಳೀತು ಈ ಪಾಪಿ ಜೀವ. ಇಲ್ಲಿಗೆ ಬಂದಿನಿ," ಎಂದು ಹೇಳಿ ತನ್ನ ಆತ್ಮವೃತ್ತಾಂತವನ್ನು ಮುಗಿಸಿದಳು ಯಮುನಾ.

"ಪಾಪ....ಪಾಪ....ಎಷ್ಟು ಕಷ್ಟ ಸೋಸಿದೆವ್ವಾ! ಇಂಥಾ ಸಂಕಟ ವೈರಿಗೂ ಬರಬಾರದು," ಎಂದಳು ದುರ್ಗವ್ವ. ಯಮುನಳ ವೃತ್ತಾಂತವ ನ್ನಾಲಿಸುತ್ತಿದ್ದ ಹೆಂಗಳೆಯರೆಲ್ಲರ ಕಣ್ಣುಗಳಲ್ಲಿ ನೀರು ಚಿಮ್ಮಿ ಬಂದಿದ್ದಿತು.

ಫಾತಿಮಾ ಪಟ್ಟಣದಲ್ಲಿ ಹುಟ್ಟಿ ಪಟ್ಟಣದಲ್ಲಿಯೆ ಬೆಳೆದವಳು. ಹಳ್ಳಿಯ ಜೀವನವನ್ನಾಕೆ ಅರಿತಿರಲಿಲ್ಲ. ಗೌಡರುಗಳ ವಿಷಯವನ್ನೂ ತಿಳಿದಿರಲಿಲ್ಲ. ಯಮುನಳ ಮುಖದಿಂದ ರುದ್ರಗೌಡರ ವಿಷಯ ಕೇಳಿದಾಗ, 'ಈ ಹಳ್ಳಿಯ ಗೌಡರಿಗೆ ಹೆಂಗಸರನ್ನು ಕೆಡಿಸುವದು, ಹೆಂಡ ಕುಡಿಯುವದು ಬಿಟ್ಟರೆ ಬೇರೆ ಕೆಲಸವೇ ಇಲ್ಲವೇನೊ ಎನ್ನಿಸಿ ಆಶ್ಚರ್ಯವಾಗಿದ್ದಿತು.

ಫಾತಿಮಾ ತನ್ನ ಅಚ್ಚರಿಯನ್ನು ವ್ಯಕ್ತಗೊಳಿಸುತ್ತಲೂ ಯಮುನಾ ಹೇಳಿದಳು: "ಎಲ್ಲಾ ಗೌಡರೂ ಹಿಂಗೇ ಇರುತಾರಂತಲ್ಲ ಫಾತಿಮಾ. ಚಲೋ

ಜನರೂ ಇರುತಾರ. ಆದರ ಹಳ್ಳಿಯೊಳಗ ಇಂಥವರೇ ಬಹಳ ಮಂದಿ. ಅವರಿಗೆ ವತನದ ಹೊಲಾ ಇರುತಾವ. ಕೆಲಸ ಮಾಡಾಕ ಆಳುಗಳಿರುತಾರ. ಈ ಗೌಡರಿಗೆ ಏನೂ ಕೆಲಸ ಇರೂದಿಲ್ಲ. ಆರಾಮಾಗಿ ಇರುತಾರ. ಬಂಚ ಗಿಂಚ ತಿಂದು ಗಂಟೂ ಮಾಡತಾರ. ಗೌಡಿಕೆಯ ಕೆಲಸಸೂ ಹೆಚ್ಚಿಗಿರುಗ ದಿಲ್ಲ. ಬರೆಯೂದು ಓದೂದು ಎಲ್ಲಾ ಕುಲಕರ್ಣಿ ಮಾಡತಿರತಾನ. ಇನ್ನು ಗೌಡರದೇನು ಕೆಲಸ ಹೇಳು. ಕುಡಿಯೂದ ........ ನಮ್ಮಂಥ ಬಡವರನ್ನ ಕಾಡಿಸೂದು...."

"ಒಂದು ಬೀಡೀನಾರೆ ತತಾರೋ ಬಾಬ್ಯಾ," ಎಂದು ಬಾಬುನನ್ನು ಕೂಗಿ ಆತನಿಂದ ಬೀಡಿ ತೆಗೆದುಕೊಂಡು ಹೊತ್ತಿಸಿ ಸೇದುತ್ತ ಮಲ್ಲಿ ಕಟುನಗೆ ಯೊಂದಿಗೆ ನುಡಿದಳು:

"ಈ ಗೌಡರು ಈ ಸಾಹುಕಾರರು ಇವರನ್ನೆಲ್ಲಾ ಕೂಲಿ ಕೆಲಸಕ್ಕ ಹಚ್ಚಬೇಕು ಸರಕಾರ. ಇವರ ಹೊಲಾ ಮನೀ ಎಲ್ಲಾ ಕಸಕೊಳ್ಳಬೇಕು. ಬಡವರನ್ನ ಕಾಡಿಸೊದನ್ನ ಆವಾಗ ಬಿಟ್ಟಾರು ಇವರು. ಈಗ ಏನೂ ಉದ್ಯೋಗ ಇಲ್ಲದ್ದಕ್ಕ ಪುಂಡತನಾನೇ ಒಂದು ಉದ್ಯೋಗ ಆಗೈತಿ ಇವರಿಗೆ. ನಮ್ಮಂಥವರೆಲ್ಲಾ ಸೂಳೇರಾಗಿ ಬಾಳೇವು ಮಾಡೂದಕ್ಕ ಇಂಥಾ ಮಂದೀನೇ ಮೂಲ ಆಗುತಾರ. ಯಮುನಾ ಹೇಳಿದ ಕತಿ ಅವಳೊಬ್ಬಳದೇ ಕತಿ ಅಲ್ಲ. ನಮ್ಮೆಲ್ಲರ ಕತೀನೂ ಸ್ವಲ್ಪ ಸ್ವಲ್ಪ ಹಂಗೇ. ದನಗಳ ಬಾಳೇವು ಬೇಕು. ನಮ್ಮದು ಬ್ಯಾಡ. ನನಗೂ ನಿನ್ನ ಹಾಂಗ ಮದುವಿ ಆಗಿತ್ತು ಯಮುನಾ. ಗಂಡ ಇನ್ನೊಬ್ಬಾಕೀನ್ನ ಇಟ್ಟುಕೊಂಡು ನನ್ನ ಹೊರಗ ಹಾಕಿದ. ಎರಡು ಮಕ್ಕಳಿದ್ದವು. ಅವನ್ನ ಕಟ್ಟಿಕೊಂಡು ಅಲ್ಲಿ ಇಲ್ಲಿ ಕೂಲಿ ನಾಲಿ ಮಾಡಿಕೋತ ನಾಕು ದಿನ ತಿರುಗಿದೆ. ತವರಿನಾಗ ಯಾರೂ ಇರಲಿಲ್ಲ. ಆಗ ನನಗೆ ಒಳ್ಳೆ ಪ್ರಾಯ. ಉಕ್ಕಿ ಬರುವ ಚೆಲುವು. ಬಡವರಿಗೆ ಇದೆಲ್ಲಾ ಇರಬಾರದು. ನನ್ನ ರೂಪ ಒಬ್ಬ ಸಾವುಕಾರನ ಕಣ್ಣು ಸೇರಿತು. ನನಗೂ ಬ್ಯಾರೆ ಯಾರೂ ದಿಕ್ಕಿರುಲಿಲ್ಲ? ಅವನ ಸಂಗಡ ಇರಬೇಕಾತು. ಆಗ ಜಾರಿ ಬಿದ್ದಾಕಿ ಹಂಗs ಜಾರುಜಾರುತಾ ಕಡೀಕ ಇಲ್ಲಿಗೆ ಬಂದು ಬಿದ್ದಿನಿ ಈ ಓಣಿಗೆ......" ಎಂದು ಹೇಳಿ ಬೀಡಿಯನ್ನು ನೆಲಕ್ಕೆಸೆದು ಅದರ ಬೆಂಕಿಯನ್ನಾರಿಸಿದಳು.

"ಮಕ್ಕಳೆಲ್ಲದಾವ ?" ಎಂದು ಕೇಳಿದಳು ಯಮುನಾ.

ಮಲ್ಲಿಯ ಕಣ್ಣುಗಳಲ್ಲಿ ನೀರೂರಿತು. ದುಃಖದಿಂದ ಭಾರವಾದ ಧ್ವನಿಯಲ್ಲಿ ಹೇಳಿದಳು: "ನನ್ನ ಈ ದುಡಿತದಾಗ ಅವನ್ನ ನೋಡಿಕೊಳ್ಳೂದಕ್ಕಾಗಲಿಲ್ಲ. ಎರಡೂ ನನ್ನ ಬಿಟ್ಟುಹೋದವು ತಂಗೀ."

ಈ ದುಡಿತ....ಮಕ್ಕಳು....ತಾನು ನಾಲ್ಕು ತಿಂಗಳ ಬಸಿರಿಯೆಂಬುದರ ನೆನಪಾಗಿ ಯಮುನಳ ಎದೆ ಕಂಪಿಸಿತು. ಸೂಳೆಯರ ಓಣಿಗೆ ಬಂದು ಬಿದ್ದಾಯಿತು. ಇನ್ನು ತಾನೂ ಇವರೆಲ್ಲರಂತೆ ಸೂಳೆಗಾರಿಕೆ ನಡಿಸಬೇಕಾಗುವುದು. ಇದನ್ನು ಬಿಟ್ಟರೆ ಬೇರೆ ದಾರಿಯಿಲ್ಲ. ಸೂಳೆಗಾರಿಕೆ....ಬಸಿರು....

"ನೀನೂ ಈಗs ಹೊಟ್ಟೀ ಇಳಿಸಿಕೊಂಡು ಬಿಡು ಯಮುನವ್ವ. ಮುಂದ ಬಹಳ ತ್ರಾಸಾದೀತು," ಎಂದಳು ದುರ್ಗವ್ವ.

"ಹೌದವ್ವ. ಮುದುಕಿ ಹೇಳೂದು ಬರಾಬರಿ. ನಮ್ಮಂಥವರಿಗೆಲ್ಲಾ ಮಕ್ಕಳ್ಯಾತಕ್ಕ? ನಮಗೂ ತ್ರಾಸ. ಅವಕ್ಕೂ ತ್ರಾಸ........" ಎಂದಳು ಯಶೋದಾ.

ಹೊಟ್ಟೆ ಇಳಿಸುವ ವಿಚಾರವನ್ನು ಫಾತಿಮಾ ಮಾತ್ರ ಒಪ್ಪಲಿಲ್ಲ. "ಮುದುಕಿಯ ಮಾತು ಕೇಳಿಕೊಂಡು ಅಂಥಾದ್ದೇನೂ ಮಾಡಬ್ಯಾಡವ್ವ. ನಮ್ಮ ಈ ಬಾಳಿನಾಗ ಮಕ್ಕಳಿಂದಲೇ ಏನಾರ ಸ್ವಲ್ಪ ಸುಖಾ ಸಿಕ್ಕಬೇಕು," ಎಂದಳು.

"ಎಲ್ಲಾರಿಗೂ ನಿನ್ನಂಥ ಯಜಮಾನರೇ ಎಲ್ಲಿ ಸಿಗುತಾರ ಫಾತಿಮಾ? ನಿನಗೇನೋ ಒಬ್ಬ ಸಾವುಕಾರ ಇದಾನ. ಬಾಬ್ಯಾನೂ ಇದಾನ. ನಡದೈತಿ. ನಮ್ಮ ತ್ರಾಸ ಎಂಥಾದ್ದು ಅನ್ನೂದನ್ನ ನೀನೇ ನೋಡುತಾ ಇದೀಯಲ್ಲ? ಒಪ್ಪೊತ್ತು ರೊಟ್ಟಿ ಸಿಕ್ಕರ ಬಹಳ ಆತು. ಇಂಥಾದ್ದರಾಗ ಮಕ್ಕಳುಮರಿ ಅಂತ ಮತ್ತೊಂದು ಹವ್ಯಾಸ ಯಾಕ? ನಮ್ಮ ಸಂಗಡ ಅವೂ ಉಪವಾಸ ಸಾಯಬೇಕಂತೀಯೋ ಏನು?" ಎಂದಳು ಮಲ್ಲಿ.

ಔಷಧ ತೆಗದುಕೊಂಡು ಹೊಟ್ಟೆ ಇಳಿಸಿಕೊಂಡು ಬಿಡುವುದೇ ಒಳ್ಳೆಯದೆನ್ನಿಸಿತು ಯಮುನಳಿಗೆ. ಫಾತಿಮಳಿಗೆ ಸುದ್ದಿ ತಿಳಿಸದೆ ದುರ್ಗವ್ವನಿಂದ ಔಷಧ ತರಿಸಿ ತೆಗೆದುಕೊಂಡಳು. ಹೆಚ್ಚು ತೊಂದರೆಯಾಗದೆ ಗರ್ಭ ಹಗುರಾಗಿ ಇಳಿದು ಹೋದುದೂ ಆಯಿತು. ನಿಶ್ಶಕ್ತಿಯಿಂದಾಗಿ ಯಮುನಾ ಒಂದು ವಾರ ಹಾಸುಗೆ ಹಿಡಿಯಬೇಕಾಯಿತು. ಅನಂತರ ದೇಹದಲ್ಲಿ ನಿಧಾನ

ವಾಗಿ ಶಕ್ತಿ ಬರತೊಡಗಿತು.

"ನನಗೂ ಏನಾರೆ ಒಂದು ಹಾದೀ ತೋರಿಸು ಫಾತಿಮಾಬೀಬೀ," ಎಂದು ಒಂದು ದಿನ ಆಕೆ ಮಾತು ತೆಗೆದಳು.

"ಈಗ್ಲೆ ಬ್ಯಾಡ ತಂಗೀ. ನಿನ್ನ ಮೈಯಾಗ ಇನ್ನೂ ರಕ್ತ ಬಂದಿಲ್ಲ. ನಾ ಎಷ್ಟು ಹೇಳಿದರೂ ಕೇಳದೆ ಹೊಟ್ಟೆ ಇಳಿಸಿಕೊಂಡು ಬಿಟ್ಟೆ. ಹಸೀ ಮೈ. ಇನ್ನೂ ಒಂದು ತಿಂಗಳೊಪ್ಪತ್ತು ಹೋಗಲಿ. ಆ ಮ್ಯಾಲ ಏನಾದರೂ ಮಾಡಿದರಾಯ್ತು."

"ಏಸು ದಿನ ಅಂತ ಹಿಂಗೇ ನಿನ್ನ ಮ್ಯಾಲ ಭಾರ ಆಗಿ ಬಿದ್ದುಕೊಂಡಿರೂದವ್ವ? ನಾ ಎಂದೂ ಹೀಂಗ ಕೆಲಸ ಇಲ್ಲದ ಮಲಗಿದಾಕಿ ಅಲ್ಲ. ನೀ ದುಡಿಯೂದು, ನಾ ತಿನ್ನೂದು ಅಂದರೇನು?"

"ಇರಲಿ ಬಿಡವ್ವ. ಯಾರು ದುಡಿದರೇನು, ಎಲ್ಲಾ ಒಂದೇ. ಮೊದಲು ನೆಟ್ಟಗಾಗಲಿ ನಿನಗ. ಆ ಮ್ಯಾಲ ಇದ್ದೇ ಐತೆಲ್ಲ ಈ ಪಾಪಿ ಬಾಳೇವು...." ಎಂದು ನುಡಿದು ಫಾತಿಮಾ ಉಸಿರೆಳೆದಳು.

"ಎಷ್ಟು ವರುಷ ಆತವ್ವ ನೀ ಈ ಕೆಲಸಕ್ಕ ನಿಂತು?"

"ನಮ್ಮವ್ವ, ಅಜ್ಜಿ, ಮುತ್ತಜ್ಜಿ ಎಲ್ಲಾರೂ ಇದೇ ಧಂದೆ ಮಾಡುತಾ ಬಂದಾರವ್ವ. ನಾನಾದರೂ ಇದರಿಂದ ಪಾರಾಗಿ ಯಾರಾದರೊಬ್ಬನ್ನ ಮದುವಿ ಆಗಿ ಮರ್ಯಾದಿಯಿಂದ ಇರಬೇಕಂತ ಮಾಡಿದ್ದಿನಿ ಆದರ ನಮ್ಮಂಥವರನ್ನ ಮಾಡಿಕೊಳ್ಳುವವರ್‍ಯಾರು? ಮನಸ್ಸಿನಾಗ ಇರದಿದ್ದರೂ ಒಬ್ಬಾವನ್ನ ಇಟ್ಟುಕೋ ಬೇಕಾಯಿತು. ನನ್ನ ಮ್ಯಾಲ ಬಹಳ ಪ್ರೀತಿ ಇತ್ತು ಅವಗ. ಮುಮ್ತಾಜ್ ಹುಟ್ಟಿದ್ದು ಅವನಿಂದಲೇ...."

"ಮುಮ್ತಾಜ್. ಎಂಥಾ ಮಜಾ ಹೆಸರವ್ವ ಇದು?"

"ಬಹಾಳ ಚಂದ ಹೆಸರು. ನನ್ನ ಯಜಮಾನ ಸ್ವಲ್ಪ ಓದಾಕ ಬರಿಯಾಕ ಕಲಿತಿದ್ದ. ಅವನೇ ಇಟ್ಟಿದ್ದು ಈ ಹೆಸರು. ಮುಮ್ತಾಜ್ ಅಂದರ ಯಾರು ಅನ್ನುದು ಗೊತ್ತೈತೇನು ನಿನಗ?"

"ನನಗ ಹ್ಯಾಂಗ ಗೊತ್ತಾದೀತವ್ವ ಹಳ್ಳೀಮುಕ್ಕಗ?"

"ಮೊಗಲ ಬಾದಷಾನ ಪ್ರೀತಿಯ ಹೆಂಡತಿ ಆಕಿ ಆ ಮುಮ್ತಾಜ್. ಅವಳು ಸತ್ತ ಮ್ಯಾಲ ಅವಳ ನೆನಪಿಗಾಗಿ ಚಂದದ ಗೋರಿ ಕಟ್ಟಿಸಿದ ಬಾದಷಾ.

ಅದರ ಹೆಸರು ತಾಜಮಹಾಲ್...."

ತಾಜಮಹಾಲ್? ಯಮುನಳಿಗೆ ಯಾವುದೂ ಅರ್ಥವಾಗಲಿಲ್ಲ. ಬಾದಷಹ....ಮಮ್ತಾಜ್....ಅವರಿಬ್ಬರ ಪ್ರೀತಿ....ಪ್ರೀತಿ? ರಾಮನ ಬಗೆಗೆ ತನಗಿರುವಂಥ ಪ್ರೀತಿ? ಆತನಿಗೂ ತನ್ನ ಬಗೆಗೆ ಪ್ರೀತಿ ಇತ್ತು. ಆದರೆ ಆತ ಮೂರ್ಖ. ಆತನ ಬುದ್ಧಿಗೇಡಿತನವೇ ತನ್ನನ್ನೀ ಸ್ಥಿತಿಗೆ ತಂದಿಟ್ಟಿತು. ಅಂದು ತಾನು ಬಿದಿರುಮೆಳೆಯ ಹತ್ತಿರ ಹೇಳಿದಂತೆ ಆಗಲೇ ತಾವಿಬ್ಬರೂ ಎಲ್ಲಿಗಾದರೂ ಓಡಿಹೋಗಿದ್ದಲ್ಲಿ ಈ ಗತಿ ಬರುತ್ತಿರಲಿಲ್ಲ ತನಗೆ. ಚಿಕ್ಕಳ್ಳಿಯಲ್ಲಿ ಮಲ್ಲನೊಂದಿಗೆ ತಾನು ವ್ಯಭಿಚಾರ ಮಾಡುವ ಪ್ರಸಂಗವೂ ಬರುತ್ತಿರಲಿಲ್ಲ. ಅಪ್ಪ ಸಾಯುತ್ತಿರಲಿಲ್ಲ, ಅವ್ವ ಜೇಲಿಗೆ ಹೋಗುತ್ತಿರಲಿಲ್ಲ, ತಾನು ಗೌಡರ ಕೈಗೆ ಸಿಕ್ಕು ಬೀಳುತ್ತಿರಲಿಲ್ಲ, ಗಾಡಿಯ ಕೆಳಗೆ ಬೀಳುವ ಪ್ರಸಂಗವೂ ಬರುತ್ತಿರಲಿಲ್ಲ. ಎಂಥ ಬುದ್ಧಿಗೇಡಿ ಆತ ಆ ರಾಮ.

## ತೆರೆ: ಎರಡು.

ರಾತ್ರಿ ಅರ್ಧ ಸೇದಿ ಆರಿಸಿ ಇಟ್ಟಿದ್ದ ಕೊರೆಬೀಡಿಯನ್ನು ಮತ್ತೆ ಕೈಗೆತ್ತಿಕೊಂಡು, ಕಡ್ಡಿ ಗೀಚಿ ಬೆಂಕಿ ಹೊತ್ತಿಸಿ ಒಂದೆರಡು ಸಲ ಹೊಗೆ ಎಳೆದು ಬಾಬು ಹಾಸುಗೆ ಬಿಟ್ಟು ಮೇಲಕ್ಕೆದ್ದ. ಅಷ್ಟು ಹೊತ್ತಿಗಾಗಲೆ ಓಣಿಯಲ್ಲಿ ಚಟುವಟಿಕೆಗಾರಂಭವಾಗಿದ್ದಿತು. ಎದುರಿಗಿದ್ದ ಸಾವಿತ್ರಿಯ ಮನೆಯಲ್ಲಿ ಐದಾರು ಜನರು ಗುಂಪುಗೂಡಿ ಚಹ ಕುಡಿಯುತ್ತ ಇಸ್ಪೀಟು ಆಟದಲ್ಲಿ ತೊಡಗಿದ್ದರು.

"ಇನ್ನೂ ಬೆಳಗಾಗಲಿಲ್ಲ. ಸುರು ಆತೇನು ನಿಮ್ಮ ಆಟ?" ಎಂದು ಕೂಗಿದ ಬಾಬು.

"ಬಾರಾಕೋ ಬಾಬ್ಯಾ, ನೀನೂ ಒಂದು ಆಟ ಆಡಿ ಹೋದೀಯಂತೆ" ಎಂದಳು ಯಶೋದಾ.

"ನನಗ ಅದೊಂದೇ ಕೆಲಸ ಅಂತ ತಿಳಿದೀಯೇನು?" ಎನ್ನುತ್ತಾ ಬಾಬು ಮೇಲಕ್ಕೆದ್ದ.

"ನಿನ್ನ ಕೆಲಸಾನೇ ನಮಗೂ ಮಾಡಂತೀಯೇನು?" ಎಂದು ಅಣಕ

ಮಾಡಿದ ಹಣಮ.

"ಪೋಲಿಸರ ಕಣ್ಣಾಗ ಮಣ್ಣು ಹಾಕಿ ಅಕ್ಕಿ ತರೂದಕ್ಕೂ ಚಾಲಾಕು ಬೇಕು. ನಮ್ಮಂಥವರಿಗೆ ಅದೆಲ್ಲಾ ಹೆಂಗ ಸಾಧಿಸೀತು? ಬಾಬ್ಯಾ ಬೆರಿಕಿ ಎಂಥಾ ಇನಸ್ಪೇಟರಗೂ ದಾದು ಮಾಡೂದಿಲ್ಲ," ಎಂದಳು ದುರ್ಗವ್ವ

"ನಿನ್ನೆ ರಾತ್ರಿ ಎಷ್ಟು ಸೇರು ಅಕ್ಕಿ ತಂದ್ಯೋ ಬಾಬ್ಯಾ?" ಎಂದು ಪ್ರಶ್ನಿಸಿದಳು ಸಾವಿತ್ರಿ.

"ದಿನಾ ಎಲ್ಲಿಂದ ಬರುತೈತೇ? ಏನೋ ವಾರದಾಗ ಎರಡು ಮೂರು ದಿನ ಸಿಕ್ಕರ ಬಹಳ ಆತು. ನನಗೇನು ನಿನ್ನಂಥಾ ಮುದ್ದು ಮುಖ ಐತೇನು ದಿನಾ ಸಿಗೂದಕ್ಕ?"

ಅಂಗಡಿಕಾರ ಚೆನ್ನಪ್ಪನಿಗೆ ಆ ಮಾತು ಕೇಳಿಸಿದೊಡನೆ ಆತ ನಗುತ್ತಾ ರಾಗ ಎಳೆದ: "ಮುದ್ದು ಮುಖದ ನಾರೀss ನಮ್ಮ ಸಾವಿತ್ರಿss"

"ಈ ಚೆನ್ನ್ಯಾ ಬರಬರುತಾ ಕವಿ ಆಗಾಕ ಹತ್ತಿದನಲ್ಲ?" ಎಂದು ನುಡಿದು ಹಣಮ ನಕ್ಕ.

"ಒಂದು ರೂಪಾಯಿಯ ಸಾಮಾನು ತಂದು ನಮಗೆಲ್ಲಾ ಟೊಪಿಗಿ ಹಾಕಿ ಮೂರು ರೂಪಾಯಿ ಲಾಭ ಹೊಡೀತಾನ. ಇನ್ನು ಕವಿಯಾಗದ ಬಿಟ್ಟಾನೇನು?" ಎಂದಳು ಸಾವಿತ್ರಿ.

"ನಿನ್ನ ನೋಡಿದರ ಎಂಥವರೂ ಕವಿ ಆಗುತಾರ," ಎಂದ ಅಂಗಡಿಕಾರ.

"ಸಾಕು ಕುಂಡ್ರೋ ಮೂಳಾ. ತಕ್ಕಡೀ ಹಿಡಿಯೂ ಕೈಗೆ ಇದೆಲ್ಲಾ ಯಾಕೆ?" ಎಂದು ದುರ್ಗವ್ವ ಮೂಗು ಮುರಿದಳು.

ಮುಖ ತೊಳೆದುಕೊಂಡು, ಚಹ ಕುಡಿದು ಬಾಬು ಓಣಿಯನ್ನು ಬಿಟ್ಟು ಈಚೆಗೆ ಬಂದ. ಅಲ್ಲಿದ್ದ ವಿಶಾಲವಾದ ಅಂಗಳದಲ್ಲಿ ಹಳೆಯ ಸಾಮಾನುಗಳ ಪೇಟೆ ನಡೆಯುತ್ತಿದ್ದಿತು. ಆ 'ಮೋಡಕಾ ಬಜಾರ'ದಲ್ಲಿ ಬಾಬುವಿನದೂ ಒಂದು ಅಂಗಡಿ. ಹಳೆಯ ಬಾಟಲು, ಹಳೆಯ ಕಬ್ಬಿಣ ಸಾಮಾನುಗಳ ಅಂಗಡಿ. ಅಂಗಡಿಯೆಂದರೆ ಚಪ್ಪರದ ಅಂಗಡಿಯೇನೂ ಅಲ್ಲ. ಹತ್ತುಹನ್ನೆರಡು ಅಡಿ ಉದ್ದವೂ, ಮೂರು ನಾಲ್ಕು ಅಡಿ ಅಗಲವೂ ಆದ ಹಳೆಯದೊಂದು

ಪೆಟ್ಟಿಗೆ. ಅದರಲ್ಲಿ ಆತನ ಅಂಗಡಿಯ ಸಾಮಾನುಗಳೆಲ್ಲ ಇರುತ್ತವೆ. ಬೆಳಿಗ್ಗೆ ಬಂದವನೆ ಬಾಬು ಅವುಗಳನ್ನೆಲ್ಲ ಒಂದೊಂದಾಗಿ ತೆಗೆದು ನೆಲದ ಮೇಲಿರಿಸಿ ಅಂಗಡಿ ಹೂಡುತ್ತಾನೆ. ಸುಗಂಧದೆಣ್ಣೆ, ಸ್ನೋ, ಪೌಡರು, ಮುಲಾಮು, ಔಷಧಗಳ ಹಳೆಯ ಸೀಸೆಗಳು; ಬಿಳಿ, ನೀಲಿ, ಕಪ್ಪು ಬಣ್ಣಗಳ ಎಣ್ಣೆಯ ಸೀಸೆಗಳು ಒಂದು ಕಡೆ. ಕಬ್ಬಿಣದ ಸಾಮಾನುಗಳು, ಯಾವ ಕೆಲಸಕ್ಕೂ ಬಾರದ ತಗಡಿನ ತುಂಡುಗಳು, ಎಣ್ಣೆಯ ಹಾಗೂ ಪೆಟ್ರೋಲಿನ ಹಳೆಯ ಡಬ್ಬಿಗಳು, ಮೊಳೆಗಳು, ಚಕ್ರಗಳು, ಸಲಾಕೆಗಳು, ಕಂಬಿಗಳು, ತೂತುಬಿದ್ದು ನಿರುಪಯೋಗಿಯಾದ ಬಕೆಟ್ಟುಗಳು, ಅರ್ಧ ಮುರಿದ ಪಟ್ಟಿಗಳು. ಯಾವುದೋ ಒಂದು ಕಾಲಕ್ಕೆ ಮಕ್ಕಳ ಗಾಡಿಯಾಗಿದ್ದು ಈಗ ಅದರ ಅವಶೇಷವಷ್ಟೇ ಉಳಿದ ವಿಚಿತ್ರವಾದೊಂದು ಕೈಗಾಡಿ.

ಬೆಳಗಿನಿಂದ ಸಾಯಂಕಾಲದ ವರೆಗೆ ಅಂಗಡಿ ಹಚ್ಚಿಕೊಂಡು ಕುಳಿತು, ಬೀಡಿ ಸೇದುತ್ತ ಕಾಲ ಕಳೆಯುತ್ತಿರುತ್ತಾನೆ ಬಾಬು. ಅವನಂತೆಯೆ ಅಲ್ಲಿ ಅಂಥ ಸಾಮಾನುಗಳನ್ನೇ ಹರವಿಕೊಂಡು ಕುಳಿತ ಸಹೋದ್ಯೋಗಿಗಳೊಂದಿಗೆ ಹರಟೆ ಹೊಡೆಯುತ್ತಿರುತ್ತಾನೆ ಅವರೆಲ್ಲರಿಗೂ ಬಾಬು ಅಂದರೆ ತುಂಬ ಪ್ರೀತಿ. "ಬಾಟಲೀಕೆ ಬಾಬ್ಯಾ" ಎಂದು ಅವರು ಆತನನ್ನು ಕರೆಯುತ್ತಾರೆ. ಅದೇ ಅವನ ಮುಖ್ಯ ಉದ್ಯೋಗವಲ್ಲ ಎಂಬುದು ಅವರಿಗೆಲ್ಲ ಗೊತ್ತು. ಅವರದೂ ಅಷ್ಟೆ. ರಾತ್ರಿ ಕಾಲದಲ್ಲಿ ಹಳ್ಳಿಗಳಿಗೆ ಹೋಗಿ ಅಕ್ಕಿ ತಂದು, ಪಟ್ಟಣದಲ್ಲಿ ಕಳ್ಳ ಸಂತೆಯಲ್ಲಿ ಮಾರಾಟ ಮಾಡುವುದೇ ಅವರೆಲ್ಲರ ಮುಖ್ಯ ಉದ್ಯೋಗವಾಗಿದೆ. ಹಳೆಯ ಸೀಸೆ, ಜಂಗು ಹತ್ತಿದ ಕಬ್ಬಿಣದ ಸಾಮಾನುಗಳ ವ್ಯಾಪಾರವಾದರೂ ಎಂಥದು. ಒಂದೊಂದು ದಿನ ಸಂಜೆಯ ವರೆಗೂ ಒಂದಾಣೆಯ ವ್ಯಾಪಾರವೂ ಆಗುವುದಿಲ್ಲ. ಅಂತೆಯೆ, ಅವರೆಲ್ಲ ಕಳ್ಳ ಸಂತೆಯ ವ್ಯಾಪಾರಕ್ಕೇ ಅಂಟಿಕೊಂಡಿದ್ದಾರೆ.

ಬಾಬು ಅಕ್ಕಿಯ ಕಳ್ಳ ವ್ಯಾಪಾರದಲ್ಲಿ ತೊಡಗಿರುವ ಸಂಗತಿ ಓಣಿಯ ಹೆಂಗಳೆಯರಿಗೆಲ್ಲ ಗೊತ್ತು. ಬೇರೆ ಕಡೆ ರೂಪಾಯಿಗೆ ಒಂದುವರೆ ಸೇರು ಮಾರುವ ಬಾಬು ಆ ಓಣಿಯಲ್ಲಿ ಮಾತ್ರ ಎರಡು ಸೇರಿನ ಧಾಗೆ ಮಾರುತ್ತಾನೆ. ರೇಶನ್ನಿನಲ್ಲಿ ದೊರೆಯುವ ಅಕ್ಕಿ ಸಾಲದಂತಾದಾಗಲೆಲ್ಲ ಹೆಂಗಳೆಯರು ಬಾಬುವನ್ನೇ ಮೊರೆ ಹೋಗುತ್ತಾರೆ. ಅವರು ಕೇಳಿದಾಗಲೆಲ್ಲ ಅಕ್ಕಿ ಕೊಟ್ಟು

ಅವರು ಕೊಟ್ಟಾಗ ಹಣ ತೆಗೆದುಕೊಳ್ಳುತ್ತಾನೆ ಬಾಬು. ಎಷ್ಟೋ ಜನರಿಂದ ಆತನಿಗೆ ಹಣವೂ ಬರುವುದಿಲ್ಲ. ಆದರೂ ಬಾಬು ಯಾರನ್ನೂ ಪೀಡಿಸದೆ ಯಾರಿಗೂ ಕೆಟ್ಟ ಮಾತು ಆಡದೆ ಒಳ್ಳೆಯ ರೀತಿಯಿಂದ ನಡೆದುಕೊಂಡು ಬರುತ್ತಾನೆ. ಅಂತೆಯೆ, ಆತನನ್ನು ಕಂಡರೆ ಓಣಿಯ ಹೆಣ್ಣುಮಕ್ಕಳಿಗೆಲ್ಲ ಬಹಳ ಪ್ರೀತಿ. ಫಾತಿಮಳಿಗೂ ಅವನಿಗೂ ಎಂದೋ ಒಂದು ದಿನ ಗೆಳೆತನ ಬೆಳೆಯಿತು. ಅವಳ ಮಗಳು ಮಮ್ತಾಜಳೂ ಆತನನ್ನು 'ಬಾಬಾ' ಎಂದು ಕರೆಯತೊಡಗಿದಳು. ಆ ಮುದ್ದು ಮಗುವಿನ ಬಗೆಗೆ ಆತನಿಗೂ ಮೋಹ ಹುಟ್ಟಿತು. ಅಂತೆಯೆ, ಅದು ತನ್ನ ಮನೆಯೆಂದೇ ತಿಳಿದು ಆತ ಹಲವು ವರ್ಷಗಳಿಂದ ಅಲ್ಲಿಯೆ ಇದ್ದಾನೆ. ಸಂಪಾದಿಸಿದ ಹಣವನ್ನೆಲ್ಲ ಫಾತಿಮಳಿಗೇ ಒಪ್ಪಿಸುತ್ತಾನೆ. ಹೆಚ್ಚು ಹಣ ಬರುವುದು ಅಕ್ಕಿಯ ವ್ಯಾಪಾರದಿಂದಲೇ. ಬೇರಾವುದೊಂದು ವ್ಯಾಪಾರ ಮಾಡಿ ಪ್ರಾಮಾಣಿಕತನದಿಂದ ಜೀವಿಸಬೇಕೆಂಬ ವಿಚಾರವೂ ಆಗಾಗ ಬರುತ್ತದೆ ಬಾಬುವಿಗೆ. ಆದರೆ ಆದಕ್ಕೆ ಅಗತ್ಯವಿರುವ ಬಂಡವಲು ತರುವುದೆಲ್ಲಿಂದ ?

ಬಾಬು ಆದಿನ ಬೆಳಿಗ್ಗೆ ಅಲ್ಲಿಗೆ ಬಂದು ಅಂಗಡಿ ಹೂಡುತ್ತಿದ್ದ ಹಾಗೆ ಮಧ್ಯ ವಯಸ್ಸಿನ ಗೃಹಸ್ಥನೊಬ್ಬ ಆತನ ಬಳಿ ಬಂದು ಕೊಡೆಯನ್ನು ನೆಲ ಕ್ಕೂರಿ ನಿಂತು " ಏನು ಬಾಬು, ಹೆಂಗಿದ್ದೀ ? " ಎಂದು ಕೇಳಿದ.

ಬಾಬು ತಲೆಯನ್ನು ಮೇಲಕ್ಕೆತ್ತಿ— " ಓ, ಸಿದರಾಯಪ್ಪನವರೇನು ? ಯಾವಾಗ ಬಂದಿರಿ ಸಾವುಕಾರರೇ ? " ಎಂದು ಕೇಳಿದ.

" ಈಗ ಬಂದಿನಿ ಬೆಳಗಿನ ಗಾಡಿಗೆ. ಎಲ್ಲಾ ಅರಾಮೇನು ಬಾಬು ? "

" ಏನು ಆರಾಮೋ ಬಿಡಿರಿ ಅಣ್ಣಾವರೆ. ಹೀಂಗ ಇದೇನೆ ಅತು. "

" ಏನಾದ್ರೂ ಹೊಸಾ ಸುದ್ದಿ ? "

" ನೀವು ಕೇಳಿದ್ದು ಹೌದಲ್ಲರಿ ? ಹೂಂ. ಒಂದು ಹೊಸಾ ಮಾಲು ಬಂದೈತಿ. ನಿಮಗ ಒಪ್ಪಿಗೆ ಆದೀತೊ ಏನೊ. ಒಳಗ ಹೋಗಿ ನೋಡಿರೆಲ್ಲ. ಫಾತಿಮಾ ಇದ್ದಾಳು.

ಸಿದರಾಯಪ್ಪ ಓಣಿಯಲ್ಲಿ ಅಡಿಯಿರಿಸುತ್ತಲೂ, ಮನೆಯೆದುರಿಗೆ ಕುಳಿತಿದ್ದ ಮಮ್ತಾಜ್ ಆತನನ್ನು ಕಂಡು— " ಸಾವುಕಾರರು ಬಂದರು ಅವ್ವಾ, " ಎಂದು ಕೂಗಿದಳು. ಫಾತಿಮಾ ಬಾಗಿಲಿಗೆ ಬಂದು ಆತನನ್ನು ಬರಮಾಡಿ

ಕೊಂಡಳು.

ಸಿದರಾಯಪ್ಪನಿಗೆ ನಲವತ್ತೈದು ವರ್ಷ ವಯಸ್ಸಾಗಿರಬಹುದು. ಸಿರಿವಂತಿಕೆಯಲ್ಲಿ ಬೆಳೆದ ದೇಹ ರಕ್ತ ಮಾಂಸ ತುಂಬಿಕೊಂಡು ಹೃಷ್ಟಪುಷ್ಟವಾಗಿದ್ದಿತು. ಕಾಂಗ್ರೆಸ್ ಕಾರ್ಯಕರ್ತನಾಗಿದ್ದ ಆತ ಯಾವಾಗಲೂ ಖಾದಿಯ ಬಟ್ಟೆಗಳನ್ನೇ ಧರಿಸುತ್ತಿದ್ದ. ಅಂಗಿ, ಕೋಟು, ಧೋತರ. ತಲೆಗೆ ಖಾದಿಯ ಪಾವುಡ. ಆ ಪಟ್ಟಣಕ್ಕೆ ತುಸು ದೂರದಲ್ಲಿದ್ದ ಹಳ್ಳಿಯೊಂದರಲ್ಲಿ ಆತನಿಗೆ ಸಾಕಷ್ಟು ಭೂಮಿಯಿದ್ದಿತು. ಜತೆಯಲ್ಲೇ ವ್ಯಾಪಾರವನ್ನೂ ಮಾಡುತ್ತಿದ್ದ. ಅದರೊಂದಿಗೆ ಕಾಂಗ್ರೆಸ್ಸಿನ ಕಾರ್ಯಕಲಾಪಗಳಲ್ಲಿ ಭಾಗ ವಹಿಸುತ್ತಿದ್ದ. ವ್ಯಾಪಾರದ ನಿಮಿತ್ತವಾಗಿ ಆತ ವಾರದಲ್ಲಿ ಮೂರು ನಾಲ್ಕು ದಿನ ಪಟ್ಟಣದಲ್ಲಿಯೆ ಇರಬೇಕಾಗುತ್ತಿದ್ದಿತು. ಖಾದಿಧಾರಿಯಾಗಿದ್ದರೂ ಸಿದರಾಯಪ್ಪ ರಸಿಕ. ಹೆಣ್ಣಿನ ಸಹವಾಸವಿಲ್ಲದಿದ್ದರೆ ನಿದ್ದೆಯೇ ಬರುತ್ತಿರಲಿಲ್ಲ ಅವನಿಗೆ. ಅಂತೆಯೆ ಈ ಓಣಿಯಲ್ಲಿ ಎಲ್ಲ ಹೆಂಗಳೆಯರಿಗೂ ಆತ ಪರಿಚಿತನಾಗಿದ್ದ. ಬಾಬು, ಹಣಮು, ಅಂಗಡಿಕಾರ ಚೆನ್ನಪ್ಪ ಎಲ್ಲರೂ ಆತನನ್ನು ಬಲ್ಲರು. ಎಷ್ಟೋ ಸಲ ಆತ ಫಾತಿಮಳ ಮನೆಗೂ ಬಂದಿದ್ದ. ಅವಳಿಗೂ ಅವನಿಗೂ ವಿಶೇಷ ಸಲುಗೆ ಬೆಳೆದು ಬಂದಿದ್ದಿತು.

" ಏನು ಫಾತಿಮಾ, ಹೆಂಗಿದ್ದೀ ? " ಎಂದ ಸಿದರಾಯಪ್ಪ.

" ಅರಾಮ ಇದೀನಿ ಸಾವುಕಾರ್ರೆ. ಇಷ್ಟು ದಿನಾ ಬರಲೇ ಇಲ್ಲವಲ್ರೀ ?"

" ಮುಂಬಯಿಗೆ ಹೋಗಿದ್ದಿನಿ. ಹತ್ತು ಹನ್ನೆರಡು ದಿನ ಅಲ್ಲೇ ಇರಬೇಕಾಗಿತ್ತು. "

" ನಾನೂ ಬರುತೀನ್ರಿ ಮುಂಬಯಿಗೆ," ಎಂದಳು ಮಮ್ತಾಜ್.

" ಹೂಂ, ಯಾಕಾಗಲೊಲ್ಲದು. ಮತ್ತೊಮ್ಮೆ ಹೋಗುವಾಗ ಕರಕೊಂಡು ಹೋಗುತೀನಿ. " ಎಂದು ಹೇಳಿ ಜೇಬಿನಿಂದ ಒಂದು ರೂಪಾಯಿ ತೆಗೆದು ಮಮ್ತಾಜಳ ಕೈಯಲ್ಲಿಟ್ಟು— " ಚಹಾ ಹೇಳಿ ಬಾ ಹೋಗು ತಾಜೀ" ಎಂದು ನುಡಿದು ಸಿದರಾಯಪ್ಪ ಒಂದು ಸಿಗರೇಟು ಹೊತ್ತಿಸಿ, ದಿಂಬಿಗೊರಗಿ ಕುಳಿತುಕೊಂಡು ಸುಖವಾಗಿ ಹೊಗೆಯೆಳೆಯತೊಡಗಿದ.

ಅಡುಗೆಯ ಮನೆಗೆ ಹೋಗಿ ಫಾತಿಮಾ ಯಮುನಳನ್ನು ಕುರಿತು— " ಬ್ಯಾರೆ ಸೀರಿಉಟ್ಟುಕೊಂಡು ತಲೆ ಬಾಚಿಕೊಂಡು ತಯಾರಾಗು ಯಮುನಾ.

ನಿನ್ನ ಯಜಮಾನರಾಗುವವರು ಬಂದಾರ. ದೊಡ್ಡ ಸಾಹುಕಾರರು, " ಎಂದು ಹೇಳಿ, ಗುಲಾಬಿ ಬಣ್ಣದ ಸೀರೆಯೊಂದನ್ನು ಪೆಟ್ಟಿಗೆಯಿಂದ ತೆಗೆದುಕೊಟ್ಟಳು.

ಮುಖ ತೊಳೆದು, ಸೀರೆ ಉಟ್ಟುಕೊಂಡು, ಹಣೆಗೆ ಕುಂಕುಮವಿಟ್ಟು ಕೊಂಡು ಯಮುನಾ ಸಿದ್ಧವಾದಳು. ಅವಳ ಎದೆ ಡವಡವನೆ ಹಾರತೊಡಗಿದ್ದಿತು. ತನ್ನ ಬಾಳಿನ ನಾಟಕದಲ್ಲಿ ಹೊಸ ಅಂಕವೊಂದು ಪ್ರಾರಂಭವಾಗಲಿದೆ. ನಾಟಕ? ಹೌದು. ಸೂಳೆಯ ಬಾಳಿನ ನಾಟಕ. ಯಜಮಾನ ಎಂದರೆ ಹೇಗಿರುವನೊ....ತಾನು ಅವನೊಂದಿಗೆ ಯಾವ ರೀತಿ ವರ್ತಿಸಬೇಕೊ. ಎಲ್ಲವೂ ತನಗೆ ಹೊಸದು. ಚಹ ಬಂದ ಬಳಿಕ ಫಾತಿಮಾ ತನ್ನನ್ನು ಹೊರಗಡೆ ಕರೆಯುಬಹುದು ತಾನು ಆಗ ಹೇಗೆ ವರ್ತಿಸಬೇಕು? ಅವರನ್ನು ಕಂಡೊಡನೆ ಅವರ ಕಾಲಿಗೆರಗಬೇಕೇ? ಹಾಗೇ ನಿಂತುಕೊಂಡಿರಬೇಕೇ, ಇಲ್ಲ, ಕುಳಿತುಕೊಳ್ಳಬೇಕೇ?

" ಯಮುನಾ.... " ಫಾತಿಮಳ ಕರೆ ಬಂದಿತು.

ಸೆರಗನ್ನು ಮುಖದ ಮೇಲೆಳೆದುಕೊಂಡು ಯಮುನಾ ಹೊರಗಿನ ಕೊಟಡಿಯಲ್ಲಿ ಅಡಿಯಿರಿಸಿದಳು. ಸಿದರಾಯಪ್ಪ ಕುತೂಹಲದಿಂದ ಕತ್ತೆತ್ತಿ ನೋಡಿದ. ಹೊಸ ಹರೆಯದ ಸುಂದರ ದೇಹ, ಮುದ್ದಾದ ಮುಖ, ಆಕರ್ಷಕ ಹುಬ್ಬು, ಮನಸೆಳೆವ ಕಣ್ಣು—ಮೂಗು. ಗುಲಾಬಿ ಬಣ್ಣದ ಸೀರೆಯಲ್ಲಿ ಆಕೆ ಇನ್ನೂ ಸುಂದರಿಯಾಗಿ ಕಾಣಿಸುತ್ತಿದ್ದಳು. ಸಿದರಾಯಪ್ಪನ ರಸಿಕ ಮನಸ್ಸು ಒಡನೆಯೆ ಅವಳಿಗೆ ಮಾರುಹೋಯಿತು.

" ನಿನ್ನ ಯಜಮಾನರಿಗೆ ನಮಸ್ಕಾರ ಮಾಡು ಯಮುನಾ. "

ಆಕೆ ತಬ್ಬಿಬ್ಬಾಗಿ ಸಿದರಾಯಪ್ಪನಿಗೆ ಮಣಿದು, ಗೋಡೆಗೊರಗಿ ನಿಂತುಕೊಂಡಳು.

" ಕೂಡ್ರು ಯಮುನಾ. ನಾಚಬ್ಯಾಡ. "

" ನಾಚಬೇಡ, " ಎಂದು ಫಾತಿಮಾ ಹೇಳಿದುದರಿಂದಲೇ ಯಮುನಳಿಗೆ ವಿಪರೀತ ನಾಚಿಕೆಯೆನ್ನಿಸಿತು. ಸೆರಗಿನಲ್ಲಿ ದೇಹವನ್ನು ಮುಚ್ಚಿಕೊಂಡು ಗೋಡೆಯ ಹತ್ತಿರ ಮುದುಡಿ ಕುಳಿತುಕೊಂಡಳು.

ಅವಳ ವರ್ತನೆಯನ್ನು ಕಂಡು ಸಿದರಾಯಪ್ಪನಿಗೆ ಆಶ್ಚರ್ಯವಾಗದಿರಲಿಲ್ಲ.

"ಈಕೆ ಹೊಸಬಳಂತ ಕಾಣುತ್ತೈತಲ್ಲ ಫಾತಿಮಾ?"

"ಹೌದು. ಹೊಸಬಳೇ. ಹಳ್ಳಿಯಿಂದ ಮೊನ್ನೆಮೊನ್ನೆ ಬಂದಾಳ."

ಸಿದರಾಯಪ್ಪನಿಗೆ ಸಂತೋಷವೇ ಆಯಿತು. ಬಹಳ ದಿನಗಳಿಂದಲೂ ಆತ ಅಂಥದೊಂದು ಹಳ್ಳಿಯ ಹೆಣ್ಣಿಗಾಗಿ ಕಾದುಕುಳಿತಿದ್ದ.

"ಚಲೋದೇ ಆತೇಳು ಫಾತಿಮಾ. ನನಗೂ ಇಂಥಾಕಿಯೇ ಬೇಕಾಗಿತ್ತು. ಇಲ್ಲೇ ಒಂದು ಮನಿ ಮಾಡಿಕೊಡುತೀನಿ. ಖರ್ಚು ಎಲ್ಲಾ ನೋಡಿಕೋತೀನಿ. ನಂಬಿಕೆಯಿಂದ ಇದ್ದರ ಆಯ್ತು."

"ಏನಂತೀ ಯಮುನಾ?"

"ನಾ ಏನು ಹೇಳಲವ್ವ? ನೀ ಹೇಳಿದಂಗ ಮಾಡುತೀನಿ." ಎಂದಿಷ್ಟೇ ನುಡಿದು ಯಮುನಾ ಮೌನ ತಳೆದಳು.

ಚಹ ಬಂದಿತು; ಅದರೊಂದಿಗೆ ಮೈಸೂರುಪಾಕು, ಖಾರಾ.

ಸಿದರಾಯಪ್ಪ ಮೈಸೂರುಪಾಕಿನ ಒಂದು ತುಂಡನ್ನು ಕೈಗೆತ್ತಿಕೊಂಡು "ತಗೋ ಯಮುನಾ" ಎಂದು ಅವಳ ಕಡೆ ನೀಡಿದ.

ಕೈಮುಂದೆ ಮಾಡಿ ಅದನ್ನು ತೆಗೆದುಕೊಳ್ಳಲಾಗಲಿಲ್ಲ ಯಮುನಳಿಗೆ ಮುಮ್ತಾಜ್ ಅವಳ ನೆರವಿಗೆ ಬರಬೇಕಾಯಿತು. ಸಿದರಾಯಪ್ಪನ ಕೈಯಿಂದ ಮೈಸೂರುಪಾಕು ತೆಗೆದುಕೊಂಡು ಯಮುನಳಿಗೆ ಕೊಡುತ್ತ ಆಕೆ ನಗುನಗುತ್ತ ನುಡಿದಳು:

"ಏನು ನಾಚುತೀಯವ್ವಾ ನೀ? ನಿನ್ನಷ್ಟು ನಾಚಾಕೀನ್ನ ನೋಡೇ ಇಲ್ಲ ಬಿಡು ನಾ."

ಸಿದರಾಯಪ್ಪ ನಕ್ಕ. ಫಾತೀಮಳೂ ನಕ್ಕಳು. ಯಮುನಳಿಗೂ ನಗೆ ಬಂದಿತು. ವಿಚಿತ್ರ ನಗೆ!

ತಿಂಡಿ ತಿಂದು ಚಹ ಕುಡಿದು ಎಲೆಯಡಿಕೆ ಹಾಕಿಕೊಂಡ ಬಳಿಕ ಸಿದರಾಯಪ್ಪ ಸಿಗರೇಟು ಹೊತ್ತಿಸಿ ಸೇದುತ್ತ ಕುಳಿತ. ಫಾತಿಮಾ ಎದ್ದು ಒಳಗಿನ ಕೋಣೆಗೆ ಹೋಗಿ ಹಾಸುಗೆಯನ್ನು ಸಿದ್ಧಗೊಳಿಸತೊಡಗಿದಳು. ತನ್ನ ಹಿಂದೆ ಹಿಂದೆ ಬಂದ ಯಮುನಳನ್ನು ಕುರಿತು—"ಇಂದಿನಿಂದ ಅವರೇ ನಿನ್ನ ಯಜಮಾನರು. ಏನಂತೀ?" ಎಂದು ಕೇಳಿದಳು.

ಯಮುನಾ ಏನು ಹೇಳಬೇಕು? ಸುಮ್ಮನೆ ಕತ್ತು ಕೊಡಹಿದಳು ಅಷ್ಟೆ.

"ನಾನು ಮಾರ್ಕೆಟ್ಟಿಗೆ ಹೋಗಿ ಕಾಯಿಪಲ್ಯ ತಗೊಂಡು ಬರ್ತೀನಿ." ಎಂದು ಹೇಳಿ ಮಮ್ತಾಜಳನ್ನು ಜತೆಗೆ ಕರೆದುಕೊಂಡು ಫಾತಿಮಾ ಬಾಗಿಲು ಮುಚ್ಚಿಕೊಂಡು ಹೊರಗೆ ನಡೆದಳು. ಬಾಗಿಲಿಗೆ ಒಳಗಿನಿಂದ ಚಿಲಕ ಹಾಕಿ ಸಿದರಾಯಪ್ಪ ಕೋಟು ಪಾವುಡ ತೆಗೆದು ಗೂಟಕ್ಕಿರಿಸಿ ಒಳಗಡೆ ಬಂದ.

ಅಲ್ಲಿ ಹೆಚ್ಚು ಬೆಳಕಿರಲಿಲ್ಲ. ಜಂತೆಯ ಸಂದುಗಳಿಂದ ಇಳಿದು ಬರುತ್ತಿದ್ದ ಅಲ್ಪ ಪ್ರಕಾಶದಲ್ಲಿ ತಲೆ ಕೆಳಕ್ಕೆ ಬಾಗಿಸಿಕೊಂಡು ಮೌನವಾಗಿ ಕುಳಿತಿದ್ದ ಯಮುನಳನ್ನು ಕಂಡೊಡನೆ ಆತನಿಗೆ ಕೊಂಚ ಕನಿಕರವುಂಟಾಯಿತು. ಹಾಸುಗೆಯ ಮೇಲೆ ಕುಳಿತುಕೊಂಡು, ಮೆಲ್ಲಗೆ ಕೈನೀಡಿ, ಬಳ್ಳಿಯಿಂದ ಹೂ ಕಿತ್ತುಕೊಳ್ಳುವ ಹಾಗೆ ನಯವಾಗಿ ಅವಳನ್ನು ಎಳೆದುಕೊಂಡ.

ಕೆಳಕ್ಕೆ ಬಾಗಿದ್ದ ಅವಳ ಮುಖವನ್ನು ಬಲಗೈಯಿಂದ ಮೇಲಕ್ಕೆತ್ತಿ ಆತ ಮಮತೆ ಬೆರೆತ ಸ್ವರದಲ್ಲಿ ಕೇಳಿದ:

"ಯಾಕ ಯಮುನಾ, ಹೀಂಗ ಕೂತಿದ್ದೀ? ನನ್ನ ಸಂಗಡ ಇರೂದಕ್ಕ ನಿನಗ ಮನಸು ಐತ್ಯೋ ಇಲ್ಲೋ?"

ಆದುವರೆಗೆ ಆಕೆ ಅತ್ಯಂತ ಕಷ್ಟದಿಂದ ತಡೆಹಿಡಿದುಕೊಂಡಿದ್ದ ದುಃಖವೆಲ್ಲವೂ ಒಮ್ಮೆಲೆ ಉಕ್ಕಿ, ಬಿಕ್ಕುಗಳ ರೂಪದಲ್ಲಿ ಹರಿಯತೊಡಗಿತು.

"ಏನಾತು ಯಮುನಾ ನಿನಗ? ಒಮ್ಮೆಲೆ ಯಾಕ ಅಳಾಕ ಹತ್ತಿದಿ"? ಎಂದು ಆತ ಕೊಂಚ ಗಾಬರಿಯಿಂದಲೇ ಕೇಳಿದ.

ತಾನು ಅಳುತ್ತಿರುವುದೇಕೆ? ತನಗಾದುದೇನು? ತನ್ನ ಎದೆಯಲ್ಲಿ ಗದ್ದಲಕ್ಕಾರಂಭಿಸಿದ್ದ ಭಾವಗಳನ್ನು ಆತನಿಗೆ ವಿವರಿಸುವುದು ಹೇಗೆ? ತನ್ನ ಒಡೆದ ಬಾಳು....ಒಡೆದ ಸಂಸಾರ....ಒಡೆದ ಪ್ರೀತಿ....ನರಳಿ ನರಳಿ ಸತ್ತ ಅಪ್ಪ....ಸೆರೆಮನೆ ಸೇರಿದ ತಾಯಿ....ಗೌಡರು....ರಾಮು....ತನ್ನ ಪ್ರೀತಿಯ ರಾಮು....ಅಳು....ಮತ್ತೆ ಅಳು....ಕಣ್ಣೀರು.

ಸಿದರಾಯಪ್ಪ ಅವಳ ತಲೆಗೂದಲಿನ ಮೇಲೆ ಕೈ ಆಡಿಸುತ್ತ ಸಂತಯಿಸುವ ಸ್ವರದಲ್ಲಿ—

"ನನ್ನ ಸಂಗಡ ಇರಾಕ ನಿನಗ ಮನಸಿರದಿದ್ದರ ಹೇಳು. ಒತ್ತಾಯ

ಮಾಡುವ ಮನುಷ್ಯ ಅಲ್ಲ ನಾ. ಈ ಅಳೂದನ್ನ ನಿಲ್ಲಿಸು, ಮೊದಲು ನಿಲ್ಲಿಸು. ನಿನಗ ಬ್ಯಾಡಾಗಿದ್ದರ ನಾ ಹೊಂಟು ಹೋಗ್ತೀನಿ. ಏನು ? ಎಂದು ನುಡಿದ.

ಯಮುನಾ ಅಳುವನ್ನು ತಡೆದು ಸೆರಗಿನಿಂದ ಕಂಬನಿಗಳನ್ನೊರೆಸಿ ಕೊಂಡಳು. ತಾನು ಅಳಬಾರದಾಗಿದ್ದಿತು. ಮಾತನಾಡಿದಂತೆ ಇವರು ಎದ್ದು ಹೊರಟುಬಿಡುವರೋ ಏನೋ. ಮನುಷ್ಯ ಒಳ್ಳೆಯವನೆಂದೇ ತೋರು ತ್ತಾನೆ. ಗೌಡರಂಥ ಕ್ರೂರತನವಿಲ್ಲ. ಸಮಾಧಾನದಿಂದಲೇ ಮಾತನಾಡು ತ್ತಾನೆ. ಸಧ್ಯಕ್ಕಾದರೂ ತನ್ನೆಲ್ಲ ದುಃಖವನ್ನು ಮರೆತು ಸಂತೋಷವನ್ನು ನಟಿಸಬೇಕು. ಹೂಂ. ಇನ್ನು ನಟಿಸುವುದೇ ನನ್ನ ಕೆಲಸ. ಸೂಳೆಯ ಪಾತ್ರದ ನಟನೆ. ಫಾತಿಮಳ ಮನೆಯಲ್ಲಿಯೆ ಇದ್ದುಕೊಂಡು ಪುಕ್ಕಟೆಯಾಗಿ ಅನ್ನ ತಿನ್ನುವುದು ಎಷ್ಟು ದಿನ ? ಅವಳ ಹಾಗೇ ತಾನೂ ಒಬ್ಬ ಸಾಹು ಕಾರನ ಸೂಳೆಯಾಗಲೇ ಬೇಕು, ಬೇರೆ ಮನೆ ಹೂಡಬೇಕು, ಹೇಗೋ ಸುಖ ಹಚ್ಚಿಕೊಂಡು ಕಾಲ ತಳ್ಳಬೇಕು....

" ಯಾಕ ಅಳು ಬಂತು ಯಮುನಾ ? " ಮತ್ತೆ ಪ್ರಶ್ನಿಸಿದ ಸಿದ ರಾಯಪ್ಪ.

" ಹಿಂದಿನದೆಲ್ಲಾ ನೆನಪಾಗಿ ಉಕ್ಕಿ ಬಂತು. "

" ಬಹಳ ಕಷ್ಟಪಟ್ಟಿದ್ದೀಯಂತ ಕಾಣುತೈತಿ. ಪಾಪ....ಪಾಪ........ ಇನ್ನಮ್ಯಾಲ ನಿನಗೇನು ಕಷ್ಟ ಆಗದಾಂಗ ನೋಡಿಕೋತೀನಿ ನಾ. ಹೂಂ. ಸ್ವಲ್ಪ ನಗು ನೋಡೂಣು....ನಗು...."

ಯಮುನಾ ನಗಲು ಪ್ರಯತ್ನಿಸಿದಳು. ಆ ಪ್ರಯತ್ನಕ್ಕೆ ಫಲ ದೊರೆ ಯಲಿಲ್ಲ ಸಿದರಾಯಪ್ಪನಿಗೆ ಅವಳ ಬಗೆಗೆ ಇನ್ನೂ ಕನಿಕರ ಬಂದಿತು. ಅವಳ ತಲೆಯನ್ನು ತನ್ನ ತೊಡೆಗಳ ಮೇಲೆ ಮಲಗಿಸಿಕೊಂಡು ಅವಳ ನುಣ್ಣ ಗಿನ ಕೆನ್ನೆಗಳ ಮೇಲೆ ಕೈ ಆಡಿಸುತ್ತ ಹೇಳಿದ:

" ಇಲ್ಲಿಯ ತನಕ ಏನೇ ಆಗಿದ್ದರೂ ಅದನ್ನೆಲ್ಲಾ ಮರತು ಬಿಡು ಯಮುನಾ. ಇನ್ನು ಮ್ಯಾಲ ಸುಖದಿಂದ ಇರು. ನಿನಗೆ ಸೀರೆ ಕುಬುಸ, ವಸ್ತ ಒಡವೆ ಏನು ಬೇಕೋ ಎಲ್ಲಾ ತೆಗೆದುಕೊಡ್ತೇ. ವಾರದಾಗ ಮೂರು ನಾಲ್ಕು ದಿನ ನಾ ಇಲ್ಲಿರುತೀನಿ ನೀನೂ ಆನಂದದಿಂದ ಇದ್ದು ನನಗೂ

ಸ್ವಲ್ಪ ಆನಂದ ಆಗುವ ಹಾಂಗ ಮಾಡಿದರ ಸಾಕು. ಹೆಚ್ಚಿಗೇನೂ ಬೇಡ. ಹೇಳು. ಏನಂತೀ ? "

" ಯಮುನಾ ಏನನ್ನೂ ಹೇಳಲಿಲ್ಲ ಮೌನವಾಗಿಯೆ ಇದ್ದಳು.

" ಒಪ್ಪಿಗೆಯಲ್ಲ ಹಂಗಾದರ ? " ಎನ್ನುತ್ತಾ ಆತ ಅವಳ ಕೆನ್ನೆಗಳನ್ನು ಚುಂಬಿಸಿದ.

## ತೆರೆ: ಮೂರು.

ಓಣಿಯಲ್ಲಿ ತೆರವಾಗಿದ್ದ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಸಿದರಾಯಪ್ಪ ಅಲ್ಲಿ ಯಮುನಳ ಸಂಸಾರವನ್ನು ನೆಲೆಗೊಳಿಸಿದ. ಮನೆಗೆ ಅಗತ್ಯವಿರುವ ಸಾಮಗ್ರಿಗಳನ್ನೆಲ್ಲ ಕೊಂಡು ತಂದುದಾಯಿತು. ಮಂಚಗಿಂಚ ಇತ್ಯಾದಿ ಆಡಂಬರಕ್ಕೆ ಬೀಳದೆ, ಸಾದಾ ಹಾಸುಗೆಯೊಂದನ್ನು ತರಿಸಿದ ಸಿದ ರಾಯಪ್ಪ. ಅದರೊಡನೆ ಎರಡು ಜತೆ ಮಗ್ಗಲು ಹಾಸಿಗೆ, ಎರಡು ರಗ್ಗು. ನಾಲ್ಕು ಸೀರೆ, ನಾಲ್ಕು ರವಕೆ, ರವಕೆಯೊಳಗಡೆ ಧರಿಸಲು ತೆಳುವಾದಬಟ್ಟೆಯ ಒಳವಸ್ತ್ರ, ಒಂದೆರಡು ಚಿಕ್ಕ ಒಡವೆಗಳು, ಸ್ನೋ, ಪೌಡರು ಡಬ್ಬಿಗಳು, ಸುಗಂಧದೆಣ್ಣೆ, ದೊಡ್ಡ ಕನ್ನಡಿ, ಬಣ್ಣದ ಬಾಚಣಿಗೆ, ಹೇರ್ ಪಿನ್ನು ಎಲ್ಲ ವನ್ನೂ ತಂದುಕೊಟ್ಟ.

ಯಮುನಾ ಬೆಕ್ಕಸ ಬೆರಗಾದಳು. ಇವುಗಳಲ್ಲಿ ಅನೇಕ ವಸ್ತುಗಳನ್ನು ಆಕೆ ಈ ಮೊದಲೆಂದೂ ಕಂಡವಳಲ್ಲ ಇನ್ನು ಅವುಗಳನ್ನುಪಯೋಗಿಸುವ ದಂತೂ ದೂರವೇ ಉಳಿಯಿತು. ಹಳ್ಳಿಯಲ್ಲಿರುವವರೆಗೆ ಆಕೆಗೆ ಮಲಗಲು ದೊರೆಯುತ್ತಿದ್ದುದು ಈಚಲ ಚಾಪೆ, ಹೊದೆಯಲು ಕೌದಿ. ಗಂಡನ ಮನೆ ಯಲ್ಲಿದ್ದ ಕೆಲವು ತಿಂಗಳುಗಳವರೆಗೆ ಚಾಪೆಯೂ ಇರಲಿಲ್ಲ. ಮೆತ್ತಗಿನ ಗಾದಿಯ ಸಹವಾಸ ಆಕೆಗೆ ತೀರ ಹೊಸದು. ತಲೆದಿಂಬುಗಳನ್ನು ಕಂಡವ ಳಲ್ಲ ಆಕೆ. ಮಗ್ಗಲು ಹಾಸಿಗೆಗಳನ್ನಂತೂ ಆಕೆ ನೋಡಿಯೆ ಇರಲಿಲ್ಲ. ಸುಗಂಧ ದೆಣ್ಣೆ....ಸ್ನೋ....ಪೌಡರ್....ಪಟ್ಟಣದ ಸ್ತ್ರೀಯರು ಅಂಥ ವಸ್ತುಗಳನ್ನುಪ ಯೋಗಿಸುವರೆಂದು ಆಕೆ ಕೇಳಿ ತಿಳಿದಿದ್ದಳಾದರೂ ಅವುಗಳನ್ನು ಒಮ್ಮೆಯೂ ಆಕೆ ನೋಡಿರಲಿಲ್ಲ. ಅವುಗಳನ್ನು ತಾನೂ ಉಪಯೋಗಿಸಬೇಕೆಂಬ ಬಯ ಕೆಯೂ ಆಕೆಗೆ ಉಂಟಾಗಿರಲಿಲ್ಲ. ಎರಡು ಹೊತ್ತು ಹೊಟ್ಟೆತುಂಬಾ ಊಟ

ಸಿಕ್ಕಿದರೆ, ಉಟ್ಟುಕೊಳ್ಳಲು ಎರಡು ಸೀರೆಗಳಿದ್ದರೆ ಸಾಕಾಗಿದ್ದಿತು ಆಕೆಗೆ. ಹೆಚ್ಚಿನ ಆಸೆ ಅವಳಿಗಿರಲಿಲ್ಲ. ಈ ಓಣಿಗೆ ಬಂದು ಬಿದ್ದ ಬಳಿಕ ಸಹ ಆಕೆ ಆಶಿಸುತ್ತಿದ್ದುದು ಹೊಟ್ಟೆಬಟ್ಟೆಗಳ ವ್ಯವಸ್ಥೆಯನ್ನು ಮಾತ್ರ. ಸ್ನೋ ಪೌಡರು ಹಚ್ಚಿಕೊಂಡು ಮೆರೆದಾಡಬೇಕೆಂಬ ವಿಚಾರ ಅವಳಿಗೆಂದೂ ಬಂದಿರಲಿಲ್ಲ.

"ನನಗಿದೆಲ್ಲಾ ಯಾಕ? ಇವನ್ನ ಹಚ್ಚಿಕೊಳ್ಳೊದಕ್ಕೂ ಬರೂದಿಲ್ಲ ನನಗ," ಎಂದು ಆಕೆ ಹೇಳಿದಾಗ ಸಿದರಾಯಪ್ಪ ನಕ್ಕು— "ನನ್ನ ಮನಸ್ಸು ಆನಂದದಿಂದಿರಬೇಕಾದರ ನೀನು ಎಲ್ಲಾ ಹಚ್ಚಿಕೊಳ್ಳಾಕs ಬೇಕು," ಎಂದು ಹೇಳಿ ತಾನೇ ಆಕೆಯ ಕೆನ್ನೆ, ಗದ್ದಗಳಿಗೆ ಸ್ನೋ ಹಚ್ಚಿ ಪೌಡರು ಸವರಿದ. ಹೊಸ ಸೀರೆಯನ್ನುಟ್ಟುಕೊಂಡು ತಲೆಗೂದಲನ್ನು ಅಂದವಾಗಿ ಬಾಚಿಕೊಂಡು ಹಣೆಯ ನಡುವೆ ಚಿಕ್ಕದಾಗಿ ಕುಂಕುಮ ಇಟ್ಟುಕೊಂಡು ಕನ್ನಡಿಯಲ್ಲಿ ಪ್ರತಿಬಿಂಬ ನೋಡಿಕೊಂಡು ಬೆರಗಾಗಿ ನಿಂತಳು ಯಮುನಾ. ತಾನಿಷ್ಟು ಚೆಲುವೆಯೇ? ಎಂದು ಅಚ್ಚರಿಪಟ್ಟುಕೊಂಡಳು.

ಅಂದು ಸಂಜೆ ಹೊಸಮನೆಯಲ್ಲಿಯೇ ಅಡುಗೆ ಮಾಡಿದಳು. ಸಿದರಾಯಪ್ಪನೂ ಅಲ್ಲಿಯೇ ಊಟಮಾಡಿ, "ನಿನ್ನ ಚೆಲುವಿಕೆಯಂತೆ ಅಡಿಗೆಯೂ ಚೆಂದಾಗೈತಿ" ಎಂದು ಹೊಗಳಿದ.

"ರೊಟ್ಟಿ ಎಷ್ಟು ಚಲೋ ಮಾಡಿದಿಯಲ್ಲ ಯಮುನಾ?"

"ಏನು ಚಲೋನೋ ಬಿಡಿರಿ. ಇದೇನು ದೊಡ್ಡ ಕೆಲಸ? ಸಣ್ಣವಳಿದ್ದಾಗಿನಿಂದ ಮಾಡಿ ಮಾಡಿ ರೂಢಿಯಾಗೈತಿ."

"ನಮ್ಮ ಮನೆಯಲ್ಲಿ ಕೂಡ ಇಷ್ಟು ಚಲೋ ರೊಟ್ಟಿ ಆಗುವದಿಲ್ಲ ನೋಡು."

ತನ್ನ ಮನೆಯ ಸುದ್ದಿಯನ್ನಾತ ಅವಳೆದುರಿಗೆ ಎತ್ತಿದುದು ಅದೇ ಮೊದಲು. ಆಕೆ ಕುತೂಹಲದಿಂದ ಕೇಳಿದಳು:

"ಮನಿಯೊಳಗ ಯಾರ್ಯಾರು ಇದಾರ್ರೀ?"

ಆತ ನಿರುತ್ಸಾಹದ ಧ್ವನಿಯಲ್ಲಿ ಹೇಳಿದ.

"ಇದ್ದಾರ ಎಲ್ಲರೂ ಇದ್ದಾರ. ತಾಯಿ, ಹೆಂಡತಿ, ಮಕ್ಕಳು...."

"ಎಷ್ಟು ಮಂದಿ ಮಕ್ಕಳು?"

"ಮೂರು ಮಂದಿ ಇದ್ದಾರ. ಎರಡು ಹೆಣ್ಣು, ಒಂದು ಗಂಡು."

" ದೊಡ್ಡವರಾಗಿದ್ದಾರೇನ್ರಿ ? "

" ದೊಡ್ಡ ಮಗಳಿಗೆ ಹನ್ನೆರಡು ವರ್ಷ. ಉಳಿದವರೆಲ್ಲಾ ಇನ್ನೂ ಸಣ್ಣವರು "

ಮೂರು ಮಕ್ಕಳ ತಂದೆಯಾದ ಆತ ತನ್ನಂಥವಳನ್ನು ಇಟ್ಟುಕೊಳ್ಳುವು ದೇಕೆಂಬುದೊಂದು ಸಮಸ್ಯೆಯಾಯಿತು ಯಮುನಳಿಗೆ ರಾತ್ರಿ, ಮಲಗಿದ್ದಾಗ ಆತನೇ ಆ ವಿಷಯವಾಗಿ ಸ್ಪಷ್ಟೀಕರಣ ಮಾಡತೊಡಗಿದ.

"ನೋಡು ಯಮುನಾ. ನಾನು ಮಕ್ಕಳೊಂದಿಗ. ಹೆಂಡತಿಯೂ ಇದ್ದಾಳ. ಹಣಕ್ಕೂ ಕೊರತೆಯಿಲ್ಲ. ಏನಿದ್ದರೂ ಜೀವಕ್ಕ ಮಾತ್ರ ಸುಖಾ ಇಲ್ಲ. ಏನೋ ಕಡಮಿಯಾದಾಂಗ ಅನಿಸುತೈತಿ. ಅದಕ್ಕs ಇಲ್ಲಿಗೆ ಬಂದಾಗ ಸ್ವಲ್ಪಾದರೂ ಸುಖಾ ಸಿಕ್ಕೀತೇನೋ ಅಂತ ಇಷ್ಟೆಲ್ಲ ಪ್ರಯತ್ನ ಮಾಡುತೀನಿ. ಇಷ್ಟು ದಿನ ಇಲ್ಲೂ ಸುಖ ಇರಲಿಲ್ಲ. ನನ್ನ ಮನಸ್ಸಿಗೊಪ್ಪುವ ಒಂದು ಹೆಣ್ಣೂ ಇರಲಿಲ್ಲ ಈ ಓಣಿಯೊಳಗ. "

" ಯಾಕ ಮಲ್ಲಿಗೇನಾಗೈತಿ ? ಬಹಳ ಚೆಲುವಿ ಅದಾಳಲ್ಲ ? "

" ಚೆಲುವಿ ! " ಎಂದು ನಕ್ಕು ನುಡಿದ ಸಿದರಾಯಪ್ಪ. " ಎಲ್ಲಾ ಮ್ಯಾಲುಮ್ಯಾಲಿನ ಚೆಲುವಿಕಿ ಅವಳದ್ದು. ಒಳಗ ಎಲ್ಲಾ ಹೊಲಸೇ. ಎಂಥೆಂಥ ರೋಗ ಅದಾವೋ ಶಿವನೇ ಬಲ್ಲ ಅವಳ ಮಾರೀ ಮ್ಯಾಲಿನ ಕಲೆ ನೋಡಿದರ ಗೊತ್ತಾಗೂದಿಲ್ಲೇನು ? ಪಾಪ....ಅವರ ತಪ್ಪೂ ಇರೂದಿಲ್ಲ ಇದರಾಗ ಹೊಟ್ಟೆಗಾಗಿ ಎಂಥೆಂಥವರದೋ ಸಂಗ ಮಾಡಬೇಕಾಗುತೈತಿ. ರೋಗ ಬರದೇನು ಮಾಡಿಯಾವು ? "

" ಇಂಥಾವರ ಹತ್ತರ ನೀವಾದರೂ ಯಾಕ ಹೋಗುತೀರಿ ? ಏನು ಸುಖಾ ಐತಿ ಅದರಾಗ ? "

" ಏನು ಸುಖಾನೋ ದೇವರೇ ಬಲ್ಲ. ನನಗೂ ಒಂದೊಂದು ಸಲ ನನ್ನ ಬಗ್ಗೇ ಹೇಸಿಕೆಯಾಗುತೈತಿ. ಇದೆಂಥ ಹುಚ್ಚು ನನ್ನದು ಅಂತ. ನಾನು ಸಾಧಾರಣ ಕಲಿತವ. ಪುಸ್ತಕ-ಗಿಸ್ತಕ ಓದಿಕೊಂಡವ. ಕಾಂಗ್ರೆಸ್ಸಿನಾಗ ಸೇರಿ ಗಾಂಧೀ ಶಿಷ್ಯನಾದವ. ಒಂದು ಸಲ ಜೇಲೂ ಕಂಡು ಬಂದಿದ್ದೇನೆ. ನನ್ನಂಥವನು ಸೂಳೆಯರ ಸಂಗ ಮಾಡಬಾರದು. ಅದು ತಪ್ಪು. ಅದು ಪಾಪ. ಎಲ್ಲಾ ಗೊತ್ತು ನನಗ. ಆದರೂ ಮನಸ್ಸು ತಡೆಯುವದಿಲ್ಲ

ಮತ್ತೆ ಈ ಪಾಪಕೂಪಕ್ಕೇ ಬಂದು ಬೀಳುತ್ತೇನೆ.... " ಎಂದು ಸಿದರಾಯಪ್ಪ ತನ್ನಷ್ಟಕ್ಕೆ ತಾನೇ ನಕ್ಕ.

" ನಾ ಹೇಳಿದ್ದೆಲ್ಲಾ ತಿಳಿಯಿತೇ ನಿನಗ ? "

" ನನಗ ಹ್ಯಾಂಗ ತಿಳೀಬೇಕು ? ಹೇಳಿಕೇಳಿ ಹಳ್ಳಿಯವಳು.... "

" ಹೋಗಲಿ ಬಿಡು. ಆ ತತ್ವಜ್ಞಾನದ ಮಾತೆಲ್ಲಾ ಯಾಕ ? ನೀ ಮಾತ್ರ ಬಹಳ ಹುಷಾರಿಯಿಂದ ಇರು. ರೋಗ ಗೀಗ ಹಚ್ಚಿಕೊಳ್ಳಬ್ಯಾಡ. ಬಹಾಳ ಭಯಂಕರ ರೋಗ ಅವು. ಪ್ರಾಣ ಹಿಂಡಿ ಬಿಡುತಾವ. ನಾನು ಊರಾಗ ಇಲ್ಲದಾಗ ಬ್ಯಾರೆಯವರ ಸಂಗ ಮಾಡೂದಕ್ಕ ಹೋಗದಿದ್ದರಾಯಿತು. ಹೇಳು. ನಂಬಿಕೆಯಿಂದ ಇರುತೀಯಾ ನನ್ನ ಕೂಡ ? "

" ಇದೇನು ಮಾತು ನಿಮ್ಮದು ? ಬ್ಯಾರೆ ಸೂಳೇರ ಹಾಂಗಲ್ಲ ನಾ. ಈ ಕೆಲಸನೂ ಹೊಸಾದು ನನಗ. ಏನೋ ನನ್ನ ಕಾಡುವ ಕಾಲ. ಇದರಾಗ ಬಂದು ಬಿದ್ದೀನಿ. ನಿಮ್ಮಂಥಾವರಿಗೆ ಮೋಸಾ ಮಾಡಿ ಯಾವ ನರಕಕ್ಕೆ ಹೋಗಲಿ ನಾ ? "

" ಇಲ್ಲ. ಇಲ್ಲ. ನೀ ಮೋಸ ಮಾಡೀಯಂತ ನಾನೇನು ಹೇಳಲಿಲ್ಲ ನನ್ನದೊಂದು ಸ್ವಭಾವ. ನಂಬಿದರ ಪೂರಾ ನಂಬಿ ಬಿಡುತೀನಿ. ನೀನೂ ನನ್ನ ನಂಬಿಕೊಂಡೇ ಇರಬೇಕು. "

ಮತ್ತೊಂದು ರಾತ್ರಿ ಆತ ಕೇಳಿದ:

" ನಿನಗ ಕುಡಿಯುವ ಚಟ ಗಿಟ ಐತೇನು ಯಮುನಾ ? "

ಆತನಿಗೆ ಆ ಚಟವಿರಲಿಲ್ಲವೆಂಬ ವಿಷಯವನ್ನು ಈಗಾಗಲೆ ಆಕೆ ಅರಿತುಕೊಂಡಿದ್ದಳು. ತನಗೆ ಆ ಚಟವಿದೆಯೆಂದು ಹೇಳಿದಲ್ಲಿ ಆತನಿಗೆ ಅಸಮಾಧಾನವುಂಟಾಗಬಹುದೆಂದೂ ಆಕೆಗೆನ್ನಿಸಿದ್ದಿತು. ಆದರೂ ಆತನೆದುರಿಗೆ ಸುಳ್ಳ ಹೇಳಲು ಅವಳ ಮನಸ್ಸು ಒಪ್ಪಲಿಲ್ಲ.

" ಚಟ ಅಂತೇನೂ ಇಲ್ಲ. ಆದರ ಊರಾಗ ಇದ್ದಾಗ ಒಮ್ಮೊಮ್ಮೆ ಕುಡೀತಿದ್ದಿನಿ. ಇಲ್ಲಿಗೆ ಬಂದ ಸ್ಯಾಲ ಮಾತ್ರ ಮುಟ್ಟಿಲ್ಲ. "

" ಚಲೋ ಆಯ್ತು. ಈ ಓಣಿಯೊಳಗ ಚಹಾ ಕಾಫಿ, ಸೆರೆ ಸಿಂದಿ ಎಲ್ಲಾ ಒಂದೇ. ಎಲ್ಲರೂ ಕುಡಿಯುವವರೇ. ನಿನ್ನ ಕೈಯಾಗ ರೊಕ್ಕ ಇರೂದನ್ನ ನೋಡಿ ನಿನಗೂ ಕಲಿಸಲು ಬಂದಾರು. ಆ ಆಸೇಕ್ಕ ಬೀಳಬ್ಯಾಡ.

ಬಹಾಳ ಕೆಟ್ಟ ಚಟಾ ಅದು. ಆದರ ಹಿಂದೆ ಹಿಂದೆ ಎಲ್ಲಾ ಚಟಾನೂ ಬರುತಾವ" ಎಂದು ನುಡಿದು ಒಂದು ಕ್ಷಣ ತಡೆದು ಆತ ಕೇಳಿದ: "ಮಾಂಸ ಗೀಂಸ ತಿಂತಿಯೋ ಏನು ಮತ್ತೆ? ಇಲ್ಲಿಯ ತನಕ ಕೇಳೇ ಇಲ್ಲ ನಾ ನಿನ್ನ. ನಿನ್ನದು ಯಾವ ಜಾತಿ?"

"ಜಾತಿ ತಗೊಂಡೇನು ಮಾಡ್ತೀರಿ ಬಿಡಿರಿ. ನಿಮ್ಮ ಜಾತಿಯವಳಂತೂ ಅಲ್ಲ ನಾನು. ಹೊಲೆಯರವಳೂ ಅಲ್ಲ. ಇಷ್ಟು ಹೇಳಿದರ ಸಾಕಲ್ಲ? ನಮ್ಮ ಜಾತಿಯೊಳಗ ಮಾಂಸ ಎಲ್ಲಾರು ತಿಂತಾರ. ನಾನೂ ಒಮ್ಮೊಮ್ಮೆ ತಿಂದೀನಿ."

"ಈಗ ನಿನಗ ಮಾಂಸ ಇರದಿದ್ದರ ನಡೀತೈತ್ಯೋ ಇಲ್ಲೋ?"

ಆಕೆ ನಗುತ್ತ ನುಡಿದಳು: "ಏನೂ ಇರದಿದ್ದರೂ ನಡಿತೈತಿ ಬಿಡಿರಿ. ಒಂದೆರಡು ರೊಟ್ಟಿ ಇದ್ದರ ಸಾಕು."

"ಈ ಮದ್ಯಮಾಂಸ ಅಂದರ ನನಗ ಇಸ್ಸೀ ಅನಿಸುತೈತಿ ಯಮುನಾ. ಜಾತಿ ಗೀತಿ ಅಂತ ನನಗೇನೂ ಭೇದಭಾವ ಇಲ್ಲ. ಯಾರಲ್ಲಾದರೂ ಊಟಾ ಮಾಡುತೀನಿ. ಆದರ ಅವರು ಮದ್ಯ ಮಾಂಸ ಸೇವಿಸುವದು ತಿಳಿದಾಗ ಮಾತ್ರ ಮನಸ್ಸಿಗೆ ಅಸಹ್ಯ ಆಗುತೈತಿ. ನನಗಿರುವ ಚಟ ಅಂದರ ಎರಡೇ ನೋಡು."

"ಯಾವುದು?"

"ಒಂದು—ಸಿಗರೇಟು...."

"ಇನ್ನೊಂದು?"

"ಇದು...." ಎಂದು ಹೇಳುತ್ತಾ ಆತ ಅವಳ ಕೆನ್ನೆಯನ್ನು ಮೆಲ್ಲನೆ ಚಿವುಟಿದ.

ಒಂದು ರಾತ್ರಿ ಬಹಳ ಹೊತ್ತಾದರೂ ಅವರಿಗೆ ನಿದ್ದೆ ಬಂದಿರಲಿಲ್ಲ. ಹೊರಗಡೆ ಮಳೆ ಸುರಿಯುತ್ತಲಿದ್ದಿತು. ಕೊರಳಿನ ವರೆಗೂ ರಗ್ಗು ಹೊದೆದುಕೊಂಡು ಪವಡಿಸಿದ್ದಳು ಯಮುನಾ. ಸಿದರಾಯಪ್ಪ ತನ್ನ ಜೀವನದ ಬಗೆಬಗೆಯ ಅನುಭವಗಳನ್ನು ಆಕೆಗೆ ವಿವರಿಸಿ ಹೇಳುತ್ತಿದ್ದ. ಇವುಗಳನ್ನೆಲ್ಲ ಇವರು ತನಗೇಕೆ ಹೇಳುತ್ತಿರುವರೋ ಎಂದು ಆಕೆಗೆ ಆಶ್ಚರ್ಯವಾಗುತ್ತಿತ್ತು.

ಆತ ಉನ್ಮಾದಿತನಾದವನಂತೆ ಮಾತನಾಡುತ್ತಿದ್ದ.

" ನಿನ್ನಿಂದ ಸಿಕ್ಕಷ್ಟು ಸುಖ ಇದುವರೆಗೆ ಇನ್ನಾರಿಂದಲೂ ಸಿಕ್ಕಿಲ್ಲ ನನಗ ಯಮುನಾ. ನಿನ್ನಲ್ಲಿ ಯಾವ ಜಾದೂ ಐತ್ಯೋ ಯಾರು ಬಲ್ಲರು ? ನನ್ನ ನಿನ್ನ ಸಂಬಂಧ ಎಷ್ಟು ಜನ್ಮದ್ದೋ ಯಾರಿಗೆ ಗೊತ್ತು. ನನ್ನ ನಿನ್ನ ಇಲ್ಲಿ ಕೂಡಿಸಬೇಕಂತ ದೇವರ ಮನಸ್ಸಿನಾಗ ಇತ್ತೋ ಏನೋ.... "

ಯಮುನಳಿಗೆ ನಗುವನ್ನು ತಡೆಯಲಾಗಲಿಲ್ಲ. ಗಂಡುಸರನ್ನು ಹುಚ್ಚರನ್ನಾಗಿ ಮಾಡಬಲ್ಲ ಸಾಮರ್ಥ್ಯ ತನ್ನೀ ದೇಹದಲ್ಲಿದೆಯೆ— ಎಂದುಕೊಂಡು ನಕ್ಕಳು. ತನ್ನಿಂದ ಸುಖ ಸಿಗುತ್ತಿದೆಯಂತೆ ಆತನಿಗೆ ಸುಖ! ಆತನಿಂದ ತನಗೇದಾದರೂ ಸುಖ ಸಿಗುತ್ತಿದೆಯೆ? ಸಂತೋಷವಾಗುತ್ತಿದೆಯೆ ? ಆತನ ಗಾಢಾಲಿಂಗನದಲ್ಲಿ ತನ್ನ ದೇಹ ಸಿಲುಕಿರುವಾಗ, ಆತನ ತುಟಿ ತನ್ನ ತುಟಿಗಳನ್ನು ಮರ್ದಿಸುತ್ತಿರುವಾಗ ಬಾಳಿನ ಅನಂದ ಲಭಿಸುತ್ತದೆಯೆ ತನಗೆ ? ಆತನಿಗೂ ತನಗೂ ಜನುಮಜನುಮಗಳ ಋಣಾನುಬಂಧವಿರಬಹುದೆಂದು ಭ್ರಮೆಯಾಗುತ್ತಿದೆಯೆ ? ಇಲ್ಲ.... ಇಲ್ಲ.... ಏನೂ ಇಲ್ಲ. ಯಾವ ಆನಂದವೂ ಇಲ್ಲ ಈ ಸಂಯೋಗದಲ್ಲಿ. ಇದೊಂದು ಆಟ....ವಿಚಿತ್ರ ಆಟ........ ದೇವರ ಆಟವೇ ಇರಬೇಕು ಇದೆಲ್ಲ. ತನ್ನ ಪ್ರೀತಿಯ ರಾಮುನಿಂದ ತನ್ನನ್ನು ಅಗಲಿಸಿ, ಎಲ್ಲೆಲ್ಲಿಗೋ ಕರೆದೊಯ್ದು ಈಗ ಈ ಸಾಹುಕಾರನ ಸೂಳೆಯಾಗಿ ಮಾಡಿದ ಆಟ....ಯಮುನಾ ಮತ್ತೆ ನಕ್ಕಳು.

ಅವಳು ನಗುವುದನ್ನು ಕಂಡು ಸಿದರಾಯಪ್ಪನಿಗೆ ಇನ್ನೂ ಆನಂದವಾಯಿತು. ಅವಳ ಸಂಗದಿಂದ ತನಗೆ ಹರ್ಷವಾಗುವಂತೆ ತನ್ನ ಸಂಗದಿಂದ ಅವಳಿಗೂ ಆಗಿದೆಯೆಂದು ತಿಳಿದು ಆತ ಹಿಗ್ಗಿದ. ಅವಳ ಅಂತರಾಳದಲ್ಲಿ ಕುದಿಯುತ್ತಿದ್ದ ಭಾವನೆಗಳನ್ನು ಆತ ಹೇಗೆ ತಾನೆ ಅರಿತುಕೊಂಡಾನು ?

ಆತ ಊರಿನಲ್ಲಿಲ್ಲದಾಗ ಒಂದು ಸಲ ಫಾತಿಮಾ ಕೇಳಿದಳು:

" ಏನು ಯಮುನಾ, ಹ್ಯಾಂಗೈತಿ ಸಂಸಾರ ? ಸಾಹುಕಾರ ಹ್ಯಾಂಗಿದ್ದಾನ ? ಸುಖದಿಂದ ಇದೀಯಾ ? "

" ಏನು ಸುಖಾನೋ ಬಿಡವ್ವ. " ಯಮುನಳ ಬಾಯಿಂದ ನಿಟ್ಟುಸಿರೊಂದು ಹೊರಹೊರಟಿತು.

" ಯಾಕೇ ? ಹೀಂಗ ಮಾತಾಡುತೀ ? ನಿನಗೇನು ಕಡಮಿಯಾಗೈತಿ ? "

“ಏನೂ ಕಡಿಮಿಯಾಗಿಲ್ಲ ಖರೆ. ಸಾಹುಕಾರರೂ ಚಲೋ ಮನುಷ್ಯರು. ಆದರss”

“ಏನು ?”

“ಏನೂ ಇಲ್ಲವ್ವ. ಜೀವಕ್ಕ ಸಮಾಧಾನ ಇಲ್ಲ. ನನ್ನ ಅಪ್ಪಗೇನಾಗೈತೋ, ನನ್ನ ರಾಮಗೇನಾಗೈತೋ........ ?”

“ಆಗೂದೆಲ್ಲಾ ಆಗಾಕss ಬೇಕಲ್ಲ ತಂಗೀ. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಂಡು ಕೊರಗಬಾರದು. ಹೆಣ್ಣಿನ ಬಾಳೇವು ಅಂದರ ಹೀಂಗss. ಇರೂದರಾಗss ಸಮಾಧಾನ ಮಾಡಿಕೋಬೇಕು ನಾವು ಬಯಸಿದ್ದೆಲ್ಲಾ ಸಿಗುತೈತೇನು ಪರಪಂಚದಾಗ ?” ಎಂದು ಸಂತವಿಸಿದಳು ಫಾತಿಮಾ.

ಒಂದೊಂದು ದಿನ ಮಲ್ಲಿ ಬಂದು ಹರಟೆಗೆ ಕೂಡ್ರುತ್ತಿದ್ದಳು. ದುರ್ಗವ್ವ, ಸಾವಿತ್ರಿ, ಯಶೋದಾ ಮೊದಲಾದವರೂ ಬರುತ್ತಿದ್ದರು. ಅವರ ಸಂಗದಲ್ಲಿ ಇಸ್ಪೀಟು ಆಟವನ್ನೂ ಕಲಿತುಕೊಂಡಳು ಯಮುನಾ. ಹಣ ಹಚ್ಚಿ ಆಡುವುದೂ ಅಭ್ಯಾಸವಾಗುತ್ತ ಬಂದಿತು. ಸಾಯಂಕಾಲ ತಿರುಗಾಡುವುದಕ್ಕೂ ಹೋಗಿ ಬರುತ್ತಿದ್ದರು. ಒಂದೊಂದು ದಿನ ಸಿನಿಮಾ ನೋಡಿ ಬರುತ್ತಿದ್ದರು. ಪಟ್ಟಣದ ಬೆಡಗಿನ ಜೀವನದಲ್ಲಿ ತನ್ನ ಬಾಳಿನ ಕಹಿ ನೆನಪುಗಳನ್ನು ಮರೆಸಿ ಬಿಡಲು ಪ್ರಯತ್ನಿಸುವಳು ಯಮುನಾ. ಆವಳ ಪ್ರಯತ್ನ ಯಶಸ್ವಿಯಾಗುತ್ತಿರಲಿಲ್ಲ. ರಾತ್ರಿ ಒಬ್ಬಳೇ ಮಲಗಿದಾಗ ಮನೆ ಬಿಕೋ ಎನ್ನುತಿತ್ತು. ತಂದೆಯ ನೆನಪು....ತಾಯಿಯ ನೆನಪು....ರಾಮನ ನೆನಪು. ಕೊರಳು ಬಿಗಿದು ಬರುತ್ತಿತ್ತು. ಕಣ್ಣಲ್ಲಿ ನೀರು ಚಿಮ್ಮುತ್ತಿತ್ತು. ರಾತ್ರಿಯೆಲ್ಲಾ ನಿದ್ದೆ ಬರುತ್ತಿರಲಿಲ್ಲ. ಆದರಿಂದಾಗಿ ಹಗಲೆಲ್ಲ ತಲೆಶೂಲೆ, ಆಯಾಸ, ಆಲಸ್ಯ.

“ಯಾಕೇ ಹೀಂಗ ಸಪ್ಪಗಿದ್ದೀ ? ಏನಾಗೈತಿ ನಿನಗ ?” ಎಂದು ಮಲ್ಲಿ ಆಗಾಗ ಪ್ರಶ್ನಿಸುವಳು.

“ಏನೋ ಬಿಡವ್ವ. ಬಹಳ ಬೇಸರು.”

“ಯಜಮಾನ ಇಲ್ಲ ಅಂತ ಬೇಸರೋ ಏನೋ.” ಎಂದು ನಗುತ್ತ ನುಡಿಯುವಳು ಮಲ್ಲಿ.

“ಹಂಗೇನೂ ಅಲ್ಲ ಮಲ್ಲೀ. ಈ ಬದುಕೇ ಬ್ಯಾಸರಾಗೈತಿ. ಯಾವದರಾಗೂ ಸಮಾಧಾನ ಇಲ್ಲ. ಅವೊತ್ತು ಗಾಡಿಯ ಬುಡಕ್ಕ ಬಿದ್ದಾಗ ಬಾಬು

ನನ್ನ ಉಳಿಸಿಕೊಂಡು ಬರದಿದ್ದರೇ ಚಲೋ ಆಗುತ್ತಿತ್ತು, ಎಲ್ಲಾದರಿಂದ ಪಾರಾಗುತಿದ್ದೆ."

ಯಮುನಾ ಹಾಗೆ ಮಾತಾಡಿದಾಗಲೆಲ್ಲ ಮಲ್ಲಿಗೆ ಕೊಂಚ ಕೋಪವೇರುವುದು. ಆಕೆ ಸಿಗರೇಟನ್ನು ಬಲವಾಗಿ ಎಳೆಯುತ್ತ ಹೇಳುವಳು.

"ಇಲ್ಲಿಗೆ ಬಂದು ಇಷ್ಟು ದಿನ ಆದರೂ ಇನ್ನೂ ನಿನ್ನ ಹುಚ್ಚು ಹೋದಾಂಗ ಕಾಣುವದಿಲ್ಲ. ಸುಖ ಇಲ್ಲಂತ! ಸಮಾಧಾನ ಇಲ್ಲಂತ! ನಿನಗೊಬ್ಬಳಿಗೇ ಏನು ದುಃಖ ಇರೂದು ಈ ಪರಪಂಚದಾಗ? ನಮಗೆಲ್ಲಾ ಏನು ಮನಸ್ಸೇ ಇಲ್ಲಾ, ನಾವೆಲ್ಲಾ ದನಗಳು ಅಂತ ತಿಳಿದೀಯೋ ಏನು? ನಿನ್ನಂಗs ನಾವು ಬೇಕಾದಷ್ಟು ಕಷ್ಟ ದುಃಖಾ ಕಂಡೀವಿ. ಸಾಕಷ್ಟು ನರಳೀವಿ. ಈ ಓಣಿಯೊಳಗ ಇರುವವರೊಳಗ ಒಬ್ಬಳೂ ತಾನಾಗೇ ಸಂತೋಷದಿಂದ ಸೂಳೆಗಾರಿಕೆ ಮಾಡುತಾ ಇಲ್ಲ. ತಿಳೀತೇನು? ಒಬ್ಬೊಬ್ಬಳಿಗೆ ಒಂದು ಸಂಕಟ ಬಂದದ್ದರಿಂದ ಈ ನರಕಕ್ಕೆ ಬಂದು ಬಿದ್ದೀವಿ. ಜೀವ ಇರೂತನಕ ಹ್ಯಾಂಗೋ ಸಮಾಧಾನ ಮಾಡಿಕೊಂಡು ಬದುಕಬೇಕು. ಸಿಗರೇಟು ಬೀಡಿ ಸೇದೂದನ್ನಾದರೂ ಕಲಿ. ಇದರಿಂದ ಚಿಂತಿಗಿಂತಿ ಎಲ್ಲಾ ಮರತು ಹೋಗುತ್ತೈತಿ. ಹೂಂ....ಇದೇ ಕೆಟ್ಟ ಕಾಲ ಯಾವಾಗಲೂ ಇರೂದಿಲ್ಲ. ನಮಗೂ ಒಂದು ಚಲೋ ಕಾಲ ಬಂದೀತು."

"ಏನು ಚಲೋ ಕಾಲೋ ಏನೋ. ನಾವೆಲ್ಲಾ ಹೀಂಗs ಕೊಳೆತು ಸತ್ತು ಹೋದ ಮ್ಯಾಲ ಚಲೋ ಕಾಲ ಬಂದೀತೊ ಏನೊ."

ಮೂಗಿನ ಹೊರಳೆಗಳ ಮೂಲಕ ಸಿಗರೇಟಿನ ಹೊಗೆಯನ್ನು ಹೊರಗೆ ಹಾಕುತ್ತ ಮಲ್ಲಿಯೆನ್ನುವಳು:

"ಬರೀ ಸಾವು....ಸಾವು........ಸಾವು........ಯಾವಾಗ ನೋಡಿದರೂ ಸಾವಿಂದೇ ಮಾತು ತಗೀತಿಯಲ್ಲ? ನಿನ್ನ ತಲ್ಯಾಗ ಬ್ಯಾರೆ ಏನೂ ವಿಚಾರವೇ ಇಲ್ಲೇನು? ಸಾವಂದರ ಹುಡುಗಾಟ ಅಲ್ಲ ಯಮುನೀ. ಹಾಂಗೆಲ್ಲ ಸರಸ ಮಾಡಾಕ ಹೋಗಬಾರದು ಅದರ ಸಂಗಡ. ಏನೋ ಹುಟ್ಟಿ ಬಂದೀವಿ. ಸಾವೇನು ಬರೂ ವೇಳೇಕ್ಕ ಬರುತ್ತೈತಿ. ಯಾರನ್ನೂ ಬಿಟ್ಟಿದ್ದಲ್ಲ ಅದು. ಅಷ್ಟಕ್ಕs ಸಾವು ಸಾವು ಬಾಬಾ ಅಂತ ಜಪ ಮಾಡ್ತಾ ಕೂಡ್ರಬಾರದು. ಹುಟ್ಟಿ ಬಂದಿರೂದು ಬದುಕೂದಕ್ಕ. ಸಾಯೂದಕ್ಕಲ್ಲ."

"ಸುಡಲಿ ಈ ಬದುಕನ್ನ!"

ಮಲ್ಲಿ ನಕ್ಕು ಮೌನ ತಳೆಯುವಳು. "ಇನ್ನೂ ಸಣ್ಣಾಕಿ ನೀನು. ಈ ಕೆಲಸಕ್ಕೂ ಹೊಸಬಿ. ಇನ್ನೊಂದೆರಡು ವರ್ಷ ಹೋಯ್ತಂದರ ನಮ್ಮಂಗs ಆಗುತೀಯೇಳು. ಸಿಗರೇಟು ಪಗರೇಟು ಸೇದಾಕ ಕಲಿ. ಬ್ರಾಂಡಿ ಗೀಂಡಿ ರುಚಿ ನೋಡು. ಸ್ವಲ್ಪಿಲ್ಲ ಸ್ವಲ್ಪ ಆದರೂ ಸುಖಾ ಸಿಕ್ಕೀತು."

"ಶೀ! ನೀ ಹೆಂಗೆರೆ ಆ ಸಿಗರೇಟು ಸೇದುತೀಯೋ ಏನೊ."

"ಹೆಂಗ ಅಂದರ ಹೀಂಗ! ಯಾಕ ಸೇದಬಾರದು? ಗಂಡಸರೇ ಸೇದಬೇಕು ಅಂತ ಕಾಯಿದೆಯೊಳಗೇನೂ ಹೇಳಿಲ್ಲವಲ್ಲ? ಚಹಾ ಕಾಫಿ ಸೆರೆ ಹೆಂಗಸರೂ ಕುಡಿಯೂದಿಲ್ಲೇನೇ? ಸಿಗರೇಟು ಬೀಡಿ ಅಷ್ಟs ಯಾಕ ಬಿಡಬೇಕು?" ಎಂದು ನುಡಿದು ಹುಬ್ಬು ಮೇಲಕ್ಕೇರಿಸಿ, ಕಣ್ಣು ಅರಳಿಸಿ, ತುಂಟ ನಗು ಬೀರುವಳು ಮಲ್ಲಿ.

## ತೆರೆ: ನಾಲ್ಕು.

ರಾತ್ರಿಯಲ್ಲೆಲ್ಲ ಬಿಟ್ಟೂಬಿಡದೆ ಸುರಿಯುತ್ತಿದ್ದ ಮಳೆ ಬೆಳಗಾಗುವ ಹೊತ್ತಿಗೆ ನಿಂತು ಹೋಗಿದ್ದಿತು. ಯಮುನಾ ಸ್ನಾನಮಾಡಿ, ಚಹ ಕುಡಿದು ಕಾಯಿಪಲ್ಯ ಕೊಂಡುತರಲು ಮಾರುಕಟ್ಟೆಗೆ ಹೊರಟಿದ್ದಳು.

ತಮ್ಮ ಮನೆಯೆದುರಿಗೆ ಕುಳಿತು ಕೋಳಿಗಳಿಗೆ ಕಾಳು ತಿನಿಸುತ್ತಲಿದ್ದಳು ಮುಮ್ತಾಜ್. ಯಮುನಾ ಅವಳನ್ನು ಕಂಡು—"ನೀನೂ ಬರ್ತೀ ಏನೇ ತಾಜೀ?" ಎಂದಳು.

"ಎಲ್ಲಿಗೆ ಯಮುನಕ್ಕಾ?"

"ಪ್ಯಾಟೆಯ ಕಡೆಗೆ."

"ಹೋಗಿ ಬರಲೇನೇ ಅವ್ವ!" ಎಂದು ತಾಯಿಯನ್ನು ಕೂಗಿ ಕೇಳಿದಳು ಮುಮ್ತಾಜ್. ಆಕೆ "ಹೋಗಿ ಬಾ," ಎನ್ನುತ್ತಲೂ ಲಂಗದ ಅಂಚನ್ನು ಕೈಯಲ್ಲಿ ಹಿಡಿದುಕೊಂಡು ಓಣಿಗಿಳಿದಳು.

ಓಣಿಯನ್ನು ಬಿಟ್ಟು ಅವರಿಬ್ಬರೂ ಮೋಡಕಾ ಬಜಾರಿನ ಬಳಿ ಬಂದಾಗ ಅಲ್ಲಿದ್ದ ಬಯಲಿನಲ್ಲಿ ನೂರಾರು ಜನರು ಸೇರಿದ್ದುದು ಕಾಣಿಸಿತು.

ಉತ್ತರ ದಿಕ್ಕಿನಲ್ಲಿದ್ದ ಮೇಜಿನ ಮೇಲೆ ನಿಂತುಕೊಂಡು ಯುವಕನೊಬ್ಬ ಆವೇಶದಿಂದ ಮಾತನಾಡುತ್ತಲಿದ್ದ. ಆತನ ಪಕ್ಕದಲ್ಲಿ ಕೆಂಪು ಬಣ್ಣದ ಬಾವುಟವೊಂದನ್ನು ಹಿಡಿದುಕೊಂಡು ಇನ್ನೊಬ್ಬ ಯುವಕ ನಿಂತುಕೊಂಡಿದ್ದ. ಬೆಳಗಿನ ಎಳೆ ಬಿಸಿಲಲ್ಲಿ ಆ ಬಾವುಟ ರಕ್ತದಲ್ಲಿ ಅದ್ದಿದ ಬಟ್ಟೆಯಂತೆ ಕಾಣು ತ್ತಿತ್ತು. ಕೈಗಳಲ್ಲಿ ಬುಟ್ಟಿಗಳನ್ನೂ ಪೊರಕೆಗಳನ್ನೂ ಹಿಡಿದುಕೊಂಡಿದ್ದ ಸ್ತ್ರೀ ಪುರುಷರು ಅಲ್ಲಿ ಗುಂಪುಗೂಡಿದ್ದರು.

ಆತನಾಡುತ್ತಿದ್ದ ಮಾತುಗಳ ಅರ್ಥವೇನೆಂಬುದು ಯಮುನಳಿಗೆ ಹೊಳೆ ಯಲಿಲ್ಲ. "ಮುನಿಸಿಪಾಲ್ಟಿಯ ದಬ್ಬಾಳಿಕೆ....ಬಂಡವಾಳಶಾಹಿ....ಸಂಪು.... ಮುಷ್ಕರ....ಹೋರಾಟ....ಸಮಾಜವಾದ...." ವಿಚಿತ್ರ ಶಬ್ದಗಳು. ವಿಚಿತ್ರ ಭಾಷೆ.

ನಗರದಲ್ಲಿಯೇ ಹುಟ್ಟಿ ಅಲ್ಲಿಯೆ ಬೆಳೆದಿದ್ದ ಮುಮ್ತಾಜಳಿಗೆ ಮಾತ್ರ ಆ ಯುವಕನ ಮಾತು ಕೂಡಲೆ ಅರ್ಥವಾದಂತೆ ತೋರಿತು. ಆಕೆ ಕೈತಟ್ಟುತ್ತ "ಅದು ನೋಡೇ ಯಮುನಕ್ಕ. ಸಭಾ ನಡದೈತಿ." ಎಂದಳು. ಸಭೆ ಯೆಂದರೇನೆಂಬುದು ಅವಳಿಗೆ ಗೊತ್ತಿದ್ದಿತು. ನೋಡಕಾ ಬಜಾರಿನ ಬಯ ಲಲ್ಲಿ ನಡೆಯುತ್ತಿದ್ದ ಅನೇಕ ಸಭೆಗಳನ್ನಾಕೆ ಕಂಡಿದ್ದಳು.

ಸಭೆಯೆಂದರೇನೆಂಬುದು ಯಮುನಳಿಗೆ ತಿಳಿಯುವಂತಿರಲಿಲ್ಲ. ಅಲ್ಲಿ ಗುಂಪುಗೂಡಿದ ಜನರು ಯಾರೆಂಬುದನ್ನು ಮಾತ್ರ ಆಕೆ ಬಲ್ಲಳು. ನಗರದ ಬೀದಿಗಳನ್ನು ಗುಡಿಸಿ ಶುಚಿಗೊಳಿಸುವ ಝಾಡಮಾಲಿಗಳವರು. ತಮ್ಮ ಕೆಲಸ ಬಿಟ್ಟು ಬಂದು ಅವರೆಲ್ಲ ಏತಕ್ಕಾಗಿ ಇಲ್ಲಿ ನಿಂತಿದ್ದಾರೆ? ಆ ಯುವಕ ಅವ ರಿಗೆ ಏನು ಹೇಳುತ್ತಿದ್ದಾನೆ?

"ಇದೆಲ್ಲಾ ಏನೇ ತಾಜೀ?"

ತನ್ನ ಜಾಣತನವನ್ನು ಪ್ರದರ್ಶಿಸಲು ಸಂದರ್ಭವೊದಗಿದುದಕ್ಕೆ ಸಂತೋಷಪಟ್ಟುಕೊಳ್ಳುತ್ತ ಉತ್ಸಾಹದಿಂದ ಹೇಳಿದಳು ಮುಮ್ತಾಜ್.

"ಸಂಪು ನಡದೈತಿ ಯಮುನಕ್ಕಾ. ಕಸ ಹೊಡೆಯುವವರ ಸಂಪು."

"ಅಂದರ?" ಯಮುನಕ್ಕನ ಅಜ್ಞಾನವನ್ನು ಕಂಡು ಕನಿಕರವೆನ್ನಿಸಿತು ಮುಮ್ತಾಜಳಿಗೆ. "ಅಂದರ ಅಷ್ಟೂ ಗೊತ್ತಿಲ್ಲೇನು ನಿನಗ? ಸಂಪು ಅಂದರ ಕೆಲಸ ಮಾಡೂದು ಬಿಟ್ಟುಬಿಡೂದು......." ಎಂದು ಆಕೆ ಹೇಳುತ್ತಿದ್ದ ಹಾಗೆ

ಭಾಷಣ ಮಾಡುತ್ತಿದ್ದ ಯುವಕ ಅವರ ಕಡೆ ಹೊರಳಿ— "ನಗರದ ಹೊಲಸನ್ನೆಲ್ಲ ತೆಗೆದು ನಮ್ಮ ಆರೋಗ್ಯವನ್ನು ಕಾಪಾಡುವ ಈ ಕೂಲಿಕಾರ ಬಂಧು ಭಗಿನಿಯರಿಗೆ ತಿಂಗಳಿಗೆ ಎಪ್ಪತ್ತು ರೂಪಾಯಿಯಾದರೂ ಬೇಡವೇನು ಸಂಬಳ? ಮುನಿಸಿಪಾಲ್ಟಿ ಇವರಿಗೆ ಕೊಡುವ ಮೂವತ್ತು ರೂಪಾಯಿಗಳಲ್ಲಿ ಇವರು ಹೊಟ್ಟೆಗೇನು ತಿನ್ನಬೇಕು? ಬಟ್ಟೆ ಏನು ತೊಡಬೇಕು? ಒಂದು ಹೊತ್ತು ಊಟ. ಇನ್ನೊಂದು ಹೊತ್ತು ಉಪವಾಸ. ಇದೆಂಥ ಅನ್ಯಾಯ.... ನಾವಿನ್ನು ಇದನ್ನು ಸಹಿಸಲಾಗದು. ಹೋರಾಟ ಮುಂದುವರಿಯಬೇಕು. ಎಲ್ಲರೂ ಇದಕ್ಕೆ ಬೆಂಬಲ ಕೊಡಬೇಕು. ಸಂಪಿನ ನಿಧಿಗೆ ಸಹಾಯ ಮಾಡಬೇಕು...." ಎಂದು ಹೇಳಿದ. ತನ್ನಂತೆಯೆ ಇವರದೂ ಹೊಟ್ಟೆಯಹೋರಾಟವೆಂಬುದನ್ನರಿತುಕೊಂಡಳು ಯಮುನಾ. ಈಗ ಇವರಿಗೆ ಸಿಗುವ ಸಂಬಳ ಸಾಲುವುದಿಲ್ಲವೆಂದು ಸಂಪು ಹೂಡಿದ್ದಾರೆ. ಹೊಟ್ಟೆಗೆ ಬೇರೆ ದಾರಿಯಿಲ್ಲವೆಂದೇ ತಾನು ಮಲ್ಲಿ ಮೊದಲಾದವರೆಲ್ಲ ಸೂಳೆಯರಾಗಿ ಬಿದ್ದಿರುವುದು ಈ ಕಸಗುಡಿಸುವವರ ಹಾಗೆ ತಾವೂ ಸಂಪು ಹೂಡಲು ಬರುವುದಿಲ್ಲವೆ?—ಎಂಬುದೊಂದು ಯೋಚನೆಯೂ ಅವಳ ತಲೆಯಲ್ಲಿ ಸುಳಿಯಿತು.

ಆ ದಿನವೆಲ್ಲ ಅದೇ ಯೋಚನೆ ಅವಳ ಮಿದುಳನ್ನು ಕೊರೆಯುತ್ತಿತ್ತು. ಸಾಯಂಕಾಲದ ವೇಳೆಗೆ ಹೆಂಗಳೆಯರೆಲ್ಲ ಕಟ್ಟೆಗಳ ಮೇಲೆ ಕುಳಿತು ಹರಟೆಗಾರಂಭಿಸಿದಾಗ ಯಮುನಾ ಆ ಯೋಚನೆಯನ್ನು ಅವರೆದುರಿಗಿರಿಸಿದಳು.

ಸಂಪು.... ಸೂಳೆಯರ ಸಂಪು!

ಹೆಂಗಳೆಯರ ಬಳಗವೆಲ್ಲ ಬಿದ್ದುಬಿದ್ದು ನಕ್ಕಿತು, ಹೊಟ್ಟೆ ಹಿಡಿದುಕೊಂಡು ನಕ್ಕಿತು. ನಕ್ಕು ನಕ್ಕು ಕೆಮ್ಮಿತು, ಕೆಮ್ಮಿ ಕೆಮ್ಮಿ ಕಣ್ಣೀರು ಸುರಿಸಿತು. ಮುಮ್ತಾಜ್ ಕುಣಿಕುಣಿದು ನಕ್ಕಳು. ಸೇದುತ್ತಿದ್ದ ಸಿಗರೇಟನ್ನು ತೂರಾಡುತ್ತ ಮಲ್ಲಿ ಕೇಕೆ ಹಾಕಿದಳು. ದುರ್ಗವ್ವ: "ಅಯ್ಯs ಹುಚ್ಚ ಭೋಸಡೀ! ಎಂಥಾ ತಲೀನೇ ನಿಂದು? ಅಯ್ಯ ಶಿವನೇ!" ಎನ್ನುತ್ತಾ ನಕ್ಕಳು. ಯಮುನಳಿಗೆ ಮಾತ್ರ ನಗೆ ಬರಲಿಲ್ಲ. ಅವರೆಲ್ಲರೂ ನಗುವುದೇಕೆಂಬುದೂ ತಿಳಿಯಲಿಲ್ಲ.

ನಗೆಯ ರಭಸವಿಳಿದ ಬಳಿಕ ಯಶೋದಾ ಹೇಳಿದಳು.

"ಸಂಪು! ಚಲೋ ವಿಚಾರನೇ ಮಾಡಿದ್ದೀಯಲ್ಲೇ! ಇನ್ನೇನು

ನೀನೂ ಒಬ್ಬಾಕಿ ಪುಢಾರಿ ಆಗೂದಷ್ಟು ಉಳೀತು...."

"ಯಜಮಾನ ಕಾಂಗರೇಸ ಪುಢಾರಿ ಆಗಿರುವಾಗ ಇವಳು ಯಾಕಾಗ ಬಾರದು? ಚಲೋ ಜೋಡಿ ಕೂಡಿದಾಂಗಾತೇಳು. ಗೆಣೆಯನೂ ಪುಢಾರಿ. ಗೆಣತೀನೂ ಪುಢಾರಿ," ಎಂದಳು ಸಾವಿತ್ರಿ.

"ಗೆಣೆಯಾ ಪುಢಾರೀ
ಗೆಣತೀ ಪುಢಾರೀ
ರಾಮಕೃಷ್ಣ ಹರೀ" ಎಂದು ಹಾಡಿ ನಕ್ಕ ಅಂಗಡಿಕಾರ. ಹೆಂಗಳೆಯರೆಲ್ಲ ಮತ್ತೆ ನಗತೊಡಗಿದರು. ಯಮುನೆಳಿಗೂ ನಗೆ ಬಂದಿತು.

ಅವರೆಲ್ಲ ನಗೆಯಲ್ಲಿ ಮಗ್ನರಾಗಿದ್ದ ಹಾಗೆ ಬಾಬು, ಹಣಮ ಇಬ್ಬರೂ ಶುಭ್ರವಸ್ತ್ರಧಾರಿಗಳಾದ ಯುವಕರೊಂದಿಗೆ ಓಣಿಯಲ್ಲಿ ಅಡಿಯಿರಿಸಿದರು. ಒಡನೆಯೆ ನಗೆಯನ್ನು ನಿಲ್ಲಿಸಿ ಹೆಂಗಳೆಯರೆಲ್ಲ ಅತ್ತ ಹೊರಳಿದರು. ಆ ಯುವಕರಿಬ್ಬರನ್ನೂ ಒಡನೆಯೆ ಗುರುತಿಸಿದಳು ಯಮುನಾ. ಒಬ್ಬ ಅಂದ ಬೆಳಿಗ್ಗೆ ಭಾಷಣ ಮಾಡುತ್ತಿದ್ದವ, ಇನ್ನೊಬ್ಬ ಬಾವುಟ ಹಿಡಿದು ನಿಂತಿದ್ದವ. ಮಮ್ತಾಜಳೂ ಅವರನ್ನು ಗುರುತಿಸಿ— "ಪುಢಾರಿ ಬಂದ್ರು ಪುಢಾರೀ" ಎಂದು ಕೂಗಿ ಕೈ ತಟ್ಟಿದಳು.

ಬೆಳಿಗ್ಗೆ ಭಾಷಣ ಮಾಡಿದ ಯುವಕ ಮುಗುಳುನಗೆ ಬೀರುತ್ತ ಹೇಳಿದ: "ನಾನೇನು ಕಾಂಗ್ರೆಸ್ ಪುಢಾರಿಯಲ್ಲ ತಂಗೀ," ಎಂದು ನುಡಿಯುತ್ತ ಮುಂದೆ ಬಂದ.

"ನಮ್ಮ ನಿಮ್ಮನ್ನು ಬಡಿದು ತಿನ್ನುವ ಪುಢಾರಿಗಳವರು. ಇವರು ಹಾಂಗಲ್ಲ. ನಮ್ಮಂಥ ಬಡವರಿಗಾಗಿ ಕೆಲಸ ಮಾಡುವ ಮಂದಿ. ಕಸಗುಡಿಸುವವರ ಸಂಪು ನಡದೈತೆಲ್ಲ—ಅದಕ್ಕ ರೊಕ್ಕ ಕೂಡಿಸುದಕ್ಕ ಬಂದಾರ. ನಿಮನಿಮಗ ತಿಳಿದಷ್ಟು ಕೊಡಿರಿ." ಎಂದು ಹೇಳಿದ ಬಾಬು.

ಓಣಿಯಲ್ಲಿನ ಮನೆಗಳಲ್ಲೆಲ್ಲ ಕೊಂಚ ದೊಡ್ಡದಾಗಿದ್ದುದೆಂದರೆ ಯಶೋದಳದು. ಬಾಬು ಆ ಯುವಕರನ್ನು ಅಲ್ಲಿಗೇ ಕರೆದೊಯ್ದು ಕೂಡ್ರಿಸಿದ. ಹೆಂಗುಸರೆಲ್ಲ ಸುತ್ತಲೂ ಗುಂಪುಗೂಡಿದರು. ಯಮುನೆಳೂ ಬಂದು ಒಂದೆಡೆ ಕುಳಿತುಕೊಂಡಳು.

"ನೀವು ಬರೂದಕ್ಕ ಮೊದಲು ಇದೇ ಈಗ ಇದೇ ಸುದ್ದೀನೇ

ಹೊಂಟಿತ್ತು ನೋಡಪ್ಪ. ಕಸಗುಡಿಸುವವರ ಹಾಂಗ ನಾವೂ ಯಾಕ ಸಂಪು ಮಾಡಬಾರದು ಅಂತ ನಮ್ಮಲ್ಲಿ ಒಬ್ಬಾಕಿ ಹುಚ್ಚು ಭೋಸಡಿ ಅಂತಿದ್ದಳು, " ಎಂದಳು ದುರ್ಗವ್ವ.

" ಯಾರಪಾ ಆ ಜಾಣಿ ? " ಎಂದು ಕೇಳಿದ ಹಣಮ. " ಮಲ್ಲಿ ಯೇನೂ ಅನ್ನಲಿಲ್ಲ ಹೌದಲ್ಲೊ ? "

" ಆಕಿಗೇನು ವಿಚಾರ ಬರತೈತಿ ಇಂಥಾದ್ದೆಲ್ಲ ? ಹೀಂಗ ಅಂದವಳು ಯಮುನಿ. "

ಹಣಮ ಯಮುನಳ ಕಡೆ ಹೊರಳಿ— " ವಾಹವ್ವಾ " ಎಂದ. ಬಾಬು " ಶಹಬ್ಬಾಸ್ " ಎಂದ. ಯುವಕರಿಬ್ಬರೂ ಅವಳ ಕಡೆ ದೃಷ್ಟಿ ತಿರುಗಿಸಿದರು. ಯಮುನ ಸಂಕೋಚದಿಂದ ತಲೆ ತಗ್ಗಿಸಿದ್ದಳು.

" ಏನಂಕೀಯಪ್ಪ ? ನಾವೂ ಮಾಡೋಣೇನು ಒಂದು ಸಂಪು ? " ಎಂದು ನಗುತ್ತ ಕೇಳಿದಳು ದುರಗವ್ವ.

ಯುವಕ ಗಂಭೀರವಾದ ಧ್ವನಿಯಲ್ಲಿ ಹೇಳತೊಡಗಿದ:

" ಚೇಷ್ಟೆಯ ಮಾತಲ್ಲ ಇದು ತಾಯಿ. ನೀವೂ ಸಂಪು ಹೂಡುವ ಕಾಲವೂ ಒಂದು ಬರುತ್ತದೆ. ಇಂದಿಲ್ಲ ನಾಳೆ ಇಷ್ಟರಲ್ಲೇ ಬರುತ್ತದೆ. ಗಿರಣಿ ಕಾರಖಾನೆ, ಹೊಲಗಳಲ್ಲಿ ದುಡಿಯುವ ಕೂಲಿಕಾರರು, ಕಸಗುಡಿಸುವವರು, ಭಂಗಿಗಳು, ಬತ್ತ ಕುಟ್ಟುವವರು, ಬೀಡಿ ಕಟ್ಟುವವರು ಇನ್ನಿತರ ಶ್ರಮಜೀವಿ ಗಳು ಮತ್ತು ನೀವು ಎಲ್ಲಾ ಒಂದೇ ವರ್ಗಕ್ಕೆ ಸೇರಿದವರು. ಅವರೆಲ್ಲ ತಮ್ಮ ಶಕ್ತಿಯನ್ನು ಮಾರಿಕೊಳ್ಳುತ್ತಾರೆ. ನೀವು ಶರೀರವನ್ನೇ ಮಾರಿಕೊಳ್ಳುತ್ತೀರಿ. ನೀವೆಲ್ಲ ಈ ಸ್ಥಿತಿಯಲ್ಲಿರಲು ಒಂದು ದೊಡ್ಡ ಕಾರಣ ಇದೆ. ಆ ಕಾರಣ ವನ್ನು ತೆಗೆದುಹಾಕದಿದ್ದರೆ ಯಾರಿಗೂ ಸುಖವಿಲ್ಲ. ಅದಕ್ಕಾಗಿ ಇಷ್ಟರಲ್ಲೇ ದೊಡ್ಡ ಹೋರಾಟವೊಂದು ಆರಂಭವಾಗುವದು. ದುಡಿಯುವವರೆಲ್ಲ ಅದ ರಲ್ಲಿ ಭಾಗ ವಹಿಸುವರು. ನೀವೂ ಅವರಿಗೆ ಸಹಾಯ ಮಾಡಬೇಕಾಗು ವದು. "

" ದೊಡ್ಡ ಸಂಪಾಗುವದೇನ್ರೀ ? " ಎಂದು ಕೇಳಿದಳು ಯಶೋದಾ.

" ಹೌದವ್ವ. ದೊಡ್ಡ ಸಂಪು. ಮಹಾ ಭಯಂಕರ ಸಂಪು. ನೂರು ಜನರ ಸಾವಿರ ಜನರ ಸಂಪಲ್ಲ ಅದು. ಕೋಟಿಗಟ್ಟಲೆ ಜನರ ಸಂಪು.

ಪ್ರಚಂಡ ಸಂಪು. ಆ ಸಂಪು ಸುರುವಾದಾಗ ಸಿರಿವಂತರೆಲ್ಲ ತತ್ತರಿಸುವರು. ಆಳುವವರು ನಡುಗುವರು. ಓಣಿ ಓಣಿಗಳಲ್ಲಿ, ನಗರ ನಗರಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ ಜನರು ಸೇರಿ ಬೊಬ್ಬಿರಿಯುವರು. ಮೈಲು ಮೈಲುದ್ದ ಮೆರವಣಿಗೆ. ಲಕ್ಷ ಲಕ್ಷ ಜನರ ಸಭೆ. ಸಾವಿರಾರು ಜನರ ಭಾಷಣ ಜೇಲುಗಳೆಲ್ಲ ಮುರಿದು ಬೀಳುವವು. ಕಚೇರಿಗಳು ಕೆಲಸ ನಿಲ್ಲಿಸುವವು. ನ್ಯಾಯಾಸ್ಥಾನಗಳು ತಟಸ್ಥವಾಗುವವು. ಆಳುವವರ ಕಿವಿ ಕಿವುಡಾಗುವಂತೆ ಜನಕೋಟಿ ಗದ್ದರಿಸುವದು. ಕ್ರಾಂತಿಯ ಹೊಳೆ ಹರಿಯುವದು. ಅದರ ರಭಸಕ್ಕೆ ಸುಲಿಗೆಗಾರರೆಲ್ಲ ಕೊಚ್ಚಿ ನಾಶವಾಗಿ ನಿರ್ನಾಮವಾಗಿ ಹೋಗುವರು. ಅನಂತರ ಗದ್ದಲ ನಿಲ್ಲುವದು. ಶಾಂತಿ ಬರುವದು. ಸಮತೆಯ ಶಾಂತಿ...."

ಯುವಕ ಹಠಾತ್ತನೆ ಮಾತು ನಿಲ್ಲಿಸಿದ. ಆತನ ಕಣ್ಣು ಬೊಂಬೆಗಳೆರಡೂ ಉಜ್ವಲ ತೇಜದಿಂದ ಕಳಕಳಿಸುತ್ತಿದ್ದುವು ಮಾತು ಕೇಳುತ್ತಿದ್ದವರೆಲ್ಲ ಅದೃಶ್ಯ ಶಕ್ತಿಯೊಂದರಿಂದ ಪ್ರಭಾವಿತರಾದವರಂತೆ ಮೂಕವಾಗಿ ಕುಳಿತಿದ್ದರು.

" ಶಂಕರಣ್ಣ ಅಂದ ಮಾತು ಖರೆ. " ಹಣಮನ ಕರ್ಕಶ ಸ್ವರ ಕೇಳಬಂದಿತು ಎಲ್ಲರೂ ವಿಸ್ಮಯದಿಂದ ಅವನತ್ತ ತಿರುಗಿದರು. ಕನಸಿನಲ್ಲಿ ಮಾತನಾಡುವವರ ಹಾಗೆ ಆತ ಮಾತನಾಡತೊಡಗಿದ.

" ಕ್ರಾಂತಿ....ಕ್ರಾಂತಿ ಬರುತೈತಿ ಅಂತಾರ ಅವರು. ಕ್ರಾಂತಿ ಅಂದರೇನು ಗೊತ್ತೈತೇನು ನಿಮಗ? ಈ ಬಡತನ, ಈ ಸಂಕಟ, ಈ ದುಃಖ ಇದನ್ನೆಲ್ಲಾ ನೆಲಸಮ ಮಾಡೂದು ಕ್ರಾಂತಿ " ಅವನ ಕಂಠದಲ್ಲಿ ಗೊರಗೊರ ಎಂದು ಸದ್ದಾಯಿತು. ಉಗುಳು ನುಂಗಿ ಒಂದು ಕ್ಷಣ ತಡೆದು ಆತ ತೀವಗೊಂಡ ಧ್ವನಿಯಲ್ಲಿ ಮುಂದುವರಿಸಿದ: " ಈ ಪೈಲ್ವಾನ ಹುಂಬಗ ಇದೆಲ್ಲಾ ಏನು ತಿಳಿದೀತು ಅಂತ ನಕ್ಕೀರಿ ನೀವು. ಎಲ್ಲಾ ತಿಳೀತೈತಿ ನನಗೂ. ಐದಾರು ವರ್ಷದ ಹಿಂದ ದೊಡ್ಡ ಚಳವಳಿ ನಡೀತಲ್ಲಾ, ಅದರಾಗ ಸೇರಿದ್ದಿನಿ ನಾನೂ. ಆ ಕೆಂಪು ಮಾರಿ ಸರಕಾರಾ ಹೊರಗ ಹಾಕಬೇಕು. : ಮಾಡಬೇಕು ಇಲ್ಲಾ ಸಾಯಬೇಕು ಅಂದಿದ್ದನಲ್ಲಾ ಗಾಂಧೆಪ್ಪ.... ಕ್ರಾಂತಿ ಕ್ರಾಂತಿ ಅಂತ ಒದರಿದ್ದರಲ್ಲಾ ಕಾಂಗರೇಸಿನವರು.... ಇನ್ಕಲಾಬ್ ಜಿಂದಾಬಾದ್ ಅಂದರು. ಹುಂಬ ಸೂಳೀಮಗಾ ನನಗೂ ಹುರುಪು ಬಂತು. ಬೋಲೋ ಭಾರತ ಮಾತಾಕಿ

ಅನ್ನುತಾ ನಾನೂ ಜಿಗಿದಿನಿ ಚಳವಳಿಯೊಳಗ. ಒಂದು ವರ್ಷದ ತನಕ ಹಳ್ಳೀ ಹಳ್ಳೀ ಗುಡ್ಡಾ ಗಿಡ್ಡಾ ತಿರುಗಿ ಉಪವಾಸ ವನವಾಸ ಮಾಡಿದಿನಿ. ಕೆಂಪು ಮಾರೀ ಸರಕಾರ ಹೊಂಟುಹೋತು. ಯಾರಿಗೂ ಸುಖಾ ಬರಲಿಲ್ಲ. ಬಡತನ ಹೋಗಲಿಲ್ಲ...."

"ಆಗ ಆದದ್ದು ಕ್ರಾಂತಿಯಲ್ಲ ಹಣಮಣ್ಣಾ. ಅದು ಬರೇ ಸ್ವಾತಂತ್ರ್ಯದ ಹೋರಾಟ. ಕ್ರಾಂತಿ ಇನ್ನೂ ದೂರ ಇದೆ. ಅದು ಬಂದ ಬಳಿಕ ನೀವೂ ಎಲ್ಲರಂತೆ ಮರ್ಯಾದೆಯಿಂದ ಬಾಳಲು ಸಾಧ್ಯವಾಗುವದು." ಎಂದು ಹೇಳಿದ ಶಂಕರ.

"ಇನ್ನೂ ಎಂದು ಬರತ್ತೈತೆಪ್ಪ ಆ ಕರಾಂತಿ?" ಎಂದು ಪ್ರಶ್ನಿಸಿದಳು ದುರ್ಗವ್ವ.

"ನೀನೆಲ್ಲಾ ಮನಸು ಮಾಡಿದರೆ ನಾಳೆಯೇ ಬಂದೀತು."

"ಝೂಡಮಾಲಿಗಳಿಗಾಗಿ ರೊಕ್ಕ ಕೂಡಿಸಾಕ ಬಂದಾರ. ಏನೇನಾರೆ ಕೊಡಿರಿ," ಎಂದು ಹೇಳಿ ಬಾಬು ಜೇಬಿನಿಂದ ಎಂಟಾಣೆಯ ನಾಣ್ಯವೊಂದನ್ನು ತೆಗೆದು ಶಂಕರನ ಎದುರಿಗಿರಿಸಿದ. ಹಣಮ ಒಂದು ರೂಪಾಯಿ ಕೊಟ್ಟ. ಹೆಂಗುಸರು ಎದ್ದು ತಮ್ಮ ತಮ್ಮ ಮನೆಗಳಿಗೆ ಹೋಗಿ ಹಣ ತಂದು ಸಲ್ಲಿಸಿದರು. ಯಮುನಾ ಒಂದು ರೂಪಾಯಿ ಇಟ್ಟು, ಶಂಕರನ ಕಾಲು ಮುಟ್ಟಿ ನಮಸ್ಕರಿಸಿದಳು.

ಆತ ತಬ್ಬಿಬ್ಬಾಗಿ ತಲೆಯೆತ್ತಿ ಅವಳನ್ನು ದಿಟ್ಟಿಸುತ್ತ—"ಕಾಲು ಯಾಕೆ ಹಿಡಿದೆಯವ್ವ? ಹಾಗೆಲ್ಲಾ ಮಾಡಬಾರದು. ನಾವು ಸೋಶಲಿಸ್ಟರು. ಎಲ್ಲರೂ ಒಂದು, ಎಲ್ಲರೂ ಸಮಾನರು ಎಂಬ ತತ್ವದವರು."

"ಏನೋ. ಅದೆಲ್ಲಾ ನಮಗೇನು ತಿಳಿದೀತು ಬಿಡಿರಿ. ನಿಮ್ಮ ಮಾತು ಕೇಳಿದ ಬಳಿಕ ನಮಸ್ಕಾರ ಮಾಡಬೇಕು ಅನಿಸಿತು. ನಮ್ಮಂಥಾ ರಂಡೇರಿಗೆ ಚಲೋ ಕಾಲ ಬರಲಿ ಅಂತ ಕೆಲಸ ಮಾಡುತಾ ಇದೀರಿ. ನಮ್ಮ ಪಾಲಿಗೆ ದೇವರಿದ್ದಾಂಗ ನೀವು."

ಹಣವನ್ನು ಕೈಚೀಲಕ್ಕೆ ತುಂಬಿ ಶಂಕರ ಎದ್ದು ನಿಂತು, "ಕಸಗುಡಿಸುವವರ ಸಂಪು ಇನ್ನೂ ತಿಂಗಳೆರಡು ತಿಂಗಳು ನಡೆದೀತು. ಅಲ್ಲಿಯ ತನಕ

ನೀವು ಬದುಕಿರಲು ನಿಮ್ಮೀ ಹಣದಿಂದಲೂ ಸಹಾಯವಾಗುವದು. ಬಹಳ ಉಪಕಾರ ಮಾಡಿದಿರಿ," ಎಂದು ಹೇಳಿ ಎಲ್ಲರಿಗೂ ವಿನಯದಿಂದ ಕೈಮುಗಿದು ಆತ ಅಲ್ಲಿಂದ ಹೊರಟ. "ಮತ್ತ ರೊಕ್ಕ ಬೇಕಾದರ ಬರ‍್ರಿ ಅಣ್ಣಾ." ಎಂದಳು ಮಲ್ಲಿ. ಯಮುನಳ ಕಣ್ಣಂಚಿನಲ್ಲಿ ನೀರು ತುಳುಕುತ್ತಿತ್ತು.

## ತೆರೆ: ಐದು.

ಗೌಡರಿಂದ ಹೊಡೆತ ತಿಂದ ಬಳಿಕ ಎಂಟು ಹತ್ತು ದಿನ ಗುಡಿಸಲಲ್ಲಿಯೆ ನರಳುತ್ತ ಬಿದ್ದಿದ್ದ ರಾಮು. ಬೆನ್ನಿನ ಮೇಲಾದ ಗಾಯಗಳಿಂದ ರಕ್ತ ಬಸಿದು ಕೀವು ಹುಟ್ಟಿಕೊಂಡಿದ್ದಿತು. ತನ್ನನ್ನು ಚಿಕ್ಕ ವಯಸ್ಸಿನಲ್ಲಿಯೆ ಅನಾಥನನ್ನಾಗಿ ಮಾಡಿಹೋದ ತಂದೆತಾಯಿಗಳನ್ನು ನೆನೆದುಕೊಳ್ಳುತ್ತ ಕಣ್ಣೀರು ಸುರಿಸಿದ. ಗೌಡರ ಬಗೆಗೆ ಹೇಸಿಕೊಂಡಿತ್ತು ಅವನ ಮನಸು. ಇನ್ನು ಅವರಲ್ಲಿ ಚಾಕರಿ ಮಾಡಬಾರದು, ಎಲ್ಲಿಗಾದರೂ ಹೊರಟು ಹೋಗಿ ಬಿಡಬೇಕು ಎಂಬ ಯೋಚನೆ ಬಲಗೊಳ್ಳುತ್ತಿತ್ತು.

ಯಮುನಾ ಹಳ್ಳಿಯನ್ನು ತೊರೆದು ಹೋದ ಸಂಗತಿ ತಿಳಿದಾಗ ಆತನ ಯೋಚನೆಯಿನ್ನೂ ದೃಢವಾಯಿತು. ಎಲ್ಲಿ ಹೋಗಿರಬಹುದು ಯಮುನಾ— ಎಂದು ತಲೆ ಕೆರೆದುಕೊಂಡ. ಚಿಕ್ಕಳ್ಳಿಗಂತೂ ಆಕೆಯಿನ್ನು ಹೋಗುವಂತಿಲ್ಲ. ಬೇರೆ ಕಡೆಗೆ ಅವರ ಸಂಬಂಧಿಕರೂ ಇಲ್ಲ. ತಾಯಿಯಂತೂ ಪೋಲೀಸರ ಕೈಗೆ ಬಿದ್ದಳು. ತನ್ನಂತೆಯೆ ಈಗ ಯಮುನಳೂ ಪರದೇಶಿ. ಎಲ್ಲಿಗೆ ಹೋಗಿರಬಹುದು ಆಕೆ? ಜೀವಕ್ಕೆ ಬೇಸತ್ತು ಬಾವಿಗೀವಿ ಬಿದ್ದಿರಬಹುದೇ? ಹಾಗೂ ಆಗಿರಲಾರದು. ಹಾಗಾಗಿದ್ದಲ್ಲಿ ಇಷ್ಟು ಹೊತ್ತಿಗಾಗಲೆ ಸುದ್ದಿಯಾಗುತ್ತಿತ್ತು. ಯಾರಾದರೂ ಜೀವ ಕೊಟ್ಟರಾಯಿತು. ಅಡವಿಯ ಬೇಗೆಯಂತೆ ಹರಡುತ್ತದೆ ಸುದ್ದಿ.

ನೋವಿನಿಂದ ನರಳುತ್ತ ಅಲ್ಲಿ ಬಿದ್ದುಕೊಂಡಿದ್ದ ಹಾಗೆ ಆತನಿಗೆ ಯಮುನಳೊಂದಿಗೆ ತಾನು ಕೂಡಿ ಕಳೆದ ಎಳೆತನದ ದಿನಗಳ ನೆನಪು ಬಂದಿತು. ತಾವಿಬ್ಬರೂ ಜತೆಯಾಗಿ ದನ ಕಾಯುದ್ದು, ಮದುವೆಯಾಟದಲ್ಲಿ ಗಂಡಹೆಂಡಿರಾಗಿ ಮೆರೆದುದು, ಮಳೆಗಾಲದಲ್ಲಿ ಗುಬ್ಬಿಮನೆ ಮಾಡಿ, ಅದು ತಮ್ಮ ಮನೆಯೆಂದೇ

ತಿಳಿದು ನಲಿದುದು, ಗುಡ್ಡದಲ್ಲಿ ಗಿಡದ ನೆರಳಲ್ಲಿ ಕುಳಿತು ಬುತ್ತಿ ತಿಂದುದು, ಹಾವು ಕಂಡು ಅವಳೊಮ್ಮೆ ಅಂಜಿ ನಿಂತಿದ್ದಾಗ ತಾನು ಅದನ್ನು ಕೊಂದು ಅವಳ ಮೆಚ್ಚುಗೆ ಗಳಿಸುದುದು, ತನ್ನನ್ನೇ ಮದುವೆಯಾಗುವುದಾಗಿ ಆಕೆ ಹಟ ತೊಟ್ಟಿದು, ಅದೊಂದು ದಿನ ಬಿದಿರುಮೆಳೆಯ ಬಳಿ, ಇಬ್ಬರೂ ಎಲ್ಲಾದರೂ ಓಡಿ ಹೋಗೋಣ—ಎಂದಾಕೆ ಹೇಳಿದುದು, ತಾನು ಏನನ್ನೂ ಮಾಡದೆ ಸುಮ್ಮನಿದ್ದುದು—ಎಲ್ಲವೂ ನೆನಪಾಯಿತು. ಅವಳ ಮಾತಿನಂತೆ ಪಟ್ಟಣಕ್ಕೆ ಹೋಗಿ ಕೂಲಿ ನಾಲಿ ಮಾಡಿ ಹೊಟ್ಟೆ ತುಂಬಿಸಿಕೊಂಡು ಇಬ್ಬರೂ ಸುಖದಿಂದಿರಬಹುದಾಗಿದ್ದಿತು. ಹೊಳೆಪ್ಪ, ಗಂಗವ್ವ ಇಬ್ಬರನ್ನೂ ಅಲ್ಲಿಗೇ ಕರೆಯಿಸಿಕೊಳ್ಳಲು ಬರುತ್ತಿತ್ತು. ಹೊಳೆಪ್ಪ ಹೀಗೆ ಒಮ್ಮೆಲೆ ಸಾಯುವಂಥ ಪ್ರಸಂಗ ಬರುತ್ತಿರಲಿಲ್ಲ. ಗೌಡರು ಕೆಲದಿನ ಸಿಟ್ಟಾಗುತ್ತಿದ್ದರು. ಆಮೇಲೆ ಎಲ್ಲಾ ಮರೆತುಬಿಡಬಹುದಾಗಿತ್ತು. ದನ ಬಡಿಸಿಕೊಂಡಂತೆ ತಾನು ಅವರಿಂದ ಬಡಿಸಿಕೊಂಡು ಹೀಗೆ ನರಳುತ್ತ ಬೀಳುವ ಪ್ರಸಂಗವೂ ಬರುತ್ತಿರಲಿಲ್ಲ......

"ಥೂ. ನನಗ ಒಂದಿಷ್ಟೂ ಬುದ್ಧಿಯಿಲ್ಲ. ಯಮುನಿ ಹೇಳಿದ್ದು ಖರೆ. ನಾ ಮನುಷ್ಯಾ ಅಲ್ಲ. ಕೋಣ. ದೊಡ್ಡ ಕೋಣ," ಎಂದು ತನ್ನನ್ನು ಹಳಿದುಕೊಂಡ ರಾಮ.

ಆ ಮನೋವೃತ್ತಿಯಲ್ಲಿಯೆ ಆತ ಹಳ್ಳಿಯನ್ನು ತ್ಯಜಿಸಿ ಪಟ್ಟಣಕ್ಕೆ ಹೊರಡಲು ನಿರ್ಧರಿಸಿದುದು. ನೈನೋವು ಕಡಿಮೆಯಾಗಿತ್ತು. ಒಂದು ರಾತ್ರಿ ಗುಡಿಸಲು ಬಿಟ್ಟು ಹೊರಟ. ಚಿಕ್ಕೆಗಳ ಬೆಳಕಿನಲ್ಲಿ ಹಾದಿ ತುಳಿದು ನಿಲ್ದಾಣಕ್ಕೆ ಬಂದು, ರಾತ್ರಿಯ ರೈಲನ್ನೇರಿದ. ನಗರದ ನಿಲ್ದಾಣದಲ್ಲಿ ಇಳಿದು ಪ್ಲಾಟ್‌ಫಾರ್ಮಿನ ಮೂಲೆಯೊಂದರಲ್ಲಿ ಕುಳಿತು ರಾತ್ರಿಯನ್ನು ಕಳೆದ. ಯಾರಾದರೂ ಟಿಕೀಟಿಗಾಗಿ ಕೇಳುವರೇನೋ ಎಂಬ ಭೀತಿಯಿತ್ತು. ಯಾರೂ ಆತನನ್ನು ಮಾತನಾಡಿಸಲಿಲ್ಲ. ಬೆಳಗಾಗುತ್ತಲೂ ಎದ್ದು ನಗರದಲ್ಲಿ ನಡೆದ. ಹಿಂದೆ ಹಲವು ಬಾರಿ ಆ ಊರನ್ನು ನೋಡಿದ್ದನಾದುದರಿಂದ ಪೇಟೆಯ ಬೀದಿಗಳ ಪರಿಚಯವಿದ್ದಿತು. ದಲ್ಲಾಲಿ ಅಂಗಡಿಗಳ ಕೇಂದ್ರವಾದ ರವಿವಾರ ಪೇಟೆಯಲ್ಲಿ ದಿನವೂ ವ್ಯಾಪಾರದ ಗದ್ದಲ. ಮೈಮಣಿಸಿ ದುಡಿಯುವ ಕೂಲಿಕಾರರಿಗೆ ಅಲ್ಲಿ ಕೆಲಸಕ್ಕಾವ ಕೊರತೆಯೂ ಇರಲಿಲ್ಲ. ಚೀಲಗಳನ್ನು ಹೊರುವುದು, ಗಾಡಿಗಳನ್ನು ಎಳೆಯುವುದೇ ಮೊದಲಾದ ಕೆಲಸ ಮಾಡಿದರೆ ದಿನವೂ

ಒಂದೆರಡುರೂಪಾಯಿ ಸಹಜವಾಗಿ ಸಿಕ್ಕಬಹುದು, ಅಷ್ಟರಲ್ಲಿ ಹೊಟ್ಟೆಹೊರೆಯ ಬಹುದು—ಎಂದು ಆತ ಯೋಚಿಸಿಕೊಂಡಿದ್ದ.

ಆತನ ಯೋಚನೆಯಂತೆ ಅಲ್ಲಿ ಕೆಲಸ ದೊರೆಯಲೂ ತಡವಾಗಲಿಲ್ಲ. "ಕೂಲಿ ಬೇಕೇನ್ರೀ ? " ಎಂದು ಆತ ಕೇಳಿದೊಡನೆಯೆ ಅಂಗಡಿಯವರೊಬ್ಬರು ಆತನಿಗೆ ಕೆಲಸ ಹಚ್ಚಿದರು ಮೂಟೆ ಹೊರುವ ಕೆಲಸ. ಅದೇ ಕೆಲಸದಲ್ಲಿ ತೊಡಗಿದ್ದ ಕೆಲವರು ಕೂಲಿಕಾರರೊಂದಿಗೆ ಪರಿಚಯವೂ ಬೆಳೆಯಿತು. ಸಂಜೆಯೊಳಗಾಗಿ ಒಂದೂವರೆ ರೂಪಾಯಿಯಷ್ಟು ಸಂಪಾದನೆಯಾಯಿತು. ಕೂಲಿಕಾರ ಗೆಳೆಯನೊಬ್ಬ ಆತನನ್ನು ಕೆಳತರಗತಿಯ ಭೋಜನಾಲಯವೊಂದಕ್ಕೆ ಕರೆದೊಯ್ದ. ಹನ್ನೆರಡು ಆಣೆ ತೆತ್ತು, ಹೊಟ್ಟೆತುಂಬಾ ಉಂಡು, ಬೀಡಿ ಹಚ್ಚಿಕೊಂಡು ಸೇದುತ್ತ ಮತ್ತೆ ಪೇಟೆಗೆ ಮರಳಿದ ರಾಮು. ಅವನಂತೆಯೆ ಒಬ್ಬೊಂಟಿಗರಾದ ಕೂಲಿಕಾರನೇಕರು ಅಂಗಡಿಗಳ ಕಟ್ಟೆಗಳ ಮೇಲೆ ಗೋಣೀಚೀಲ ಹಾಸಿ, ಗೋಣಿಚೀಲ ಹೊದೆದು ನಿದ್ರಿಸುತ್ತಿದ್ದರು. ರಾಮುನೂ ಒಂದು ಕಟ್ಟೆಯನ್ನೇರಿ ಅವರ ಮೇಲೆ ದೇಹವನ್ನೊರಗಿಸಿದ. ತಲೆಗೆ ಸುತ್ತಿಕೊಂಡಿದ್ದ ಪಾವುಡವನ್ನೇ ಬಿಚ್ಚಿ ಮುಖದ ಮೇಲೆಳೆದುಕೊಂಡು ಮಗ್ಗಲಾಗಿ ಮಲಗಿದ. ಹಗಲೆಲ್ಲ ದುಡಿದು ಬಳಲಿದ ದೇಹ. ಒಡನೆಯೆ ಕಣ್ಣು ಮುಚ್ಚಿಕೊಂಡವು. ಗಾಢನಿದ್ರೆ ಆವರಿಸಿತು.

ಅರುಣೋದಯದ ವೇಳೆಗೆ ಎಚ್ಚರವಾಯಿತು. ಎದ್ದು ಕುಳಿತು ಕಣ್ಣುಜ್ಜಿಕೊಳ್ಳುತ್ತಿದ್ದ ಹಾಗೆ ಆತನ ಹತ್ತಿರದಲ್ಲಿಯೆ ಮಲಗಿದ್ದ ಕೂಲಿಕಾರ ಮರಿಯಪ್ಪ— "ಚೆಲೋದಾಗಿ ನಿದ್ದೆ ಮಾಡಿದಿಯೇನೋ ? " ಎಂದು ಪ್ರಶ್ನಿಸಿದ.

" ಮಾಡಿದಿನಿ. ನೀನೋ ? "

" ನಮಗೇನಪ್ಪಾ. ಇದೆಲ್ಲಾ ದಡ್ಡು ಬಿದ್ದೈತಿ. ನೀ ಹೊಸದಾಗಿ ಬಂದಾವ. ಹಾಸೂದಕ್ಕ ಹೊರೂದಕ್ಕ ಏನೂ ಇರದಿದ್ದರೂ ನಿದ್ದೆ ಹ್ಯಾಂಗ ಬಂತೋ ? ಇವೊತ್ತು ಅಂಗಡಿಯವರಿಗೆ ಕೇಳು. ಚೀಲಗಳಿಗೇನು ಕಡಿಮಿ ? "

ಮರಿಯಪ್ಪನೊಂದಿಗೆ ಊರಹೊರಗಿನ ಕೆರೆಗೆ ಹೋಗಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡುದಾಯಿತು. ಚಹದಂಗಡಿಯೊಂದರಲ್ಲಿ ಉಪ್ಪಿಟ್ಟು

ಉಪ್ಪಿಟ್ಟು ತಿಂದು, ಚಹ ಕುಡಿದುದಾಯಿತು. ಪೇಟೆಗೆ ಮರಳಿ ಬರುವುದರೊಳಗಾಗಿ ಅಂಗಡಿಗಳ ಬಾಗಿಲು ತೆರೆಯುತ್ತಿದ್ದುವು. ಮತ್ತೆ ಮೂಟೆ ಹೊರುವ ಕಾಯಕಕ್ಕಾರಂಭವಾಯಿತು. ನಡುನಡುವೆ ನಾಲ್ಕಾರು ಸಲ ಚಹ, ದೋಸೆ ಇಡ್ಲಿ, ಭಜಿ, ಖಾರಾ ತಿಂದು ಹಸಿವೆಯನ್ನು ಹೋಗಲಾಡಿಸಿಕೊಂಡುದಾಯಿತು. ಸಾಯಂಕಾಲದ ವರೆಗೂ ದುಡಿತ. ಮತ್ತೆ ಅದೇ ಭೋಜನಾಲಯ. ಹೊಟ್ಟೆತುಂಬಾ ಊಟ. ಅನಂತರ ಅಂಗಡಿ ಕಟ್ಟೆಯ ಸಹವಾಸ, ನಿದ್ದೆ. ಬೆಳಗಾಗುತ್ತಲೂ ಪುನಃ ಅದೇ ದಿನಚರಿ.

ಒಂದು ತಿಂಗಳು ಹೀಗೆ ಕಳೆಯಿತು.

ಆ ಅವಧಿಯಲ್ಲಿ ಪೇಟೆಯ ಕೂಲಿಕಾರರೆಲ್ಲ ಆತನಿಗೆ ಪರಿಚಿತರಾಗಿದ್ದರು. ಕೂಲಿಕಾರರ ಮುಖಂಡನಂತಿದ್ದ ಹಣಮನ ಗೆಳೆತನವೂ ಲಭಿಸಿದ್ದಿತು.

ಒಂದು ದಿನ ಸಾಯಂಕಾಲ ವಿಶೇಷ ಕೆಲಸವಿರಲಿಲ್ಲವಾದುದರಿಂದ ಹಣಮನೊಂವಿಗೆ ಚಹದಂಗಡಿಯಲ್ಲಿ ಹರಟುತ್ತ ಕುಳಿತಿದ್ದ ರಾಮು.

" ಎಷ್ಟು ದಿನ ಅಂತ ಹೀಂಗೇ ಒಂಟಿಯಾಗಿ ಇರುತೀಯೋ ರಾಮು ? ಮದುವಿ ಗಿದುವಿ ಆಗುವ ಯಿಚಾರ ಇಲ್ಲೇನು ? " ಎಂದು ಕೇಳಿದ ಹಣಮ.

ಬಾಯಲ್ಲಿ ಹಿಡಿದಿದ್ದ ಬೀಡಿಯ ಕೊನೆಯನ್ನು ಕಚ್ಚುತ್ತ ರಾಮು ನಕ್ಕು ನುಡಿದ:

" ನಮ್ಮಂಥವರಿಗೆಲ್ಲಾ ಯಾತಕಪ್ಪಾ ಮದುವಿ? ಮನಿಯಿಲ್ಲ ಮಾರಿಲ್ಲ. ಈ ಕೂಲಿಯಿಂದ ಬರುವ ರೊಕ್ಕನೂ ಅಷ್ಟರಾಗs ಐತಿ. ಇನ್ನು ಮದುವಿ.... ಹೇಣತಿ....ಹ....ಹ್ಹ....ಹ....ಹ್ಹ.... "

" ಮದುವಿ ಅಂದರ ಮದುವೀನs ಅಲ್ಲೋ ಹುಚ್ಚಾ. ಅದೆಲ್ಲಾ ತ್ರಾಸ ಯಾತಕ್ಕ ನಮ್ಮ ನಿಮ್ಮಂಥವರಿಗೆ?— ನಮ್ಮ ಹಂಗs ಪರದೇಶಿಗಳಾಗಿ ಇರುವ ಹೆಂಗಸರು ಎಷ್ಟೋ ಮಂದಿ ಇದಾರ. ಅಂಥವರೊಳಗ ಒಬ್ಬಾಕಿಯ ಸಂಗಡ ದೋಸ್ತಿ ಮಾಡಿಕೊಂಡು ಇರೂದು. ಅವರಿಗೂ ಒಂದು ಆಧಾರ ಆದಂಗ ಆಯ್ತು. ಖಾನಾವಳಿಯೊಳಗ ಎಷ್ಟು ದಿನ ಅಂತ ಉಣ್ಣುತೀಯೋ? ಒಬ್ಬಾಕಿಯ ದೋಸ್ತಿ ಮಾಡಿದರ ಅಡಿಗೀನೂ ಮಾಡಿ ಹಾಕತಾಳ. ಹೇಣತಿಯ ಹಂಗೂ ಇರುತಾಳ. "

“ ಅಂಥಾಕಿ ಹಂಗs ಹೆಂಗ ಸಿಗಬೇಕಪ್ಪ ? ”

“ ಹಂಗs ಸಿಗಂದರ ಹೆಂಗ ಸಿಗಬೇಕೋ? ಆಕಿಯೇನು ನಿನ ಹುಡುಕಿಕೋತ ಇಲ್ಲೀ ತನಕ ಬರಬೇಕೇನು ? ನೀನs ಹುಡುಕಬೇಕು. ಗುರುತು ಮಾಡಿಕೋಬೇಕು ದುಡಿದ ರೊಕ್ಕ ಇರುತ್ಯೆತಿ ಕೈಯಾಗ. ಖಾನಾವಳಿಗೆ ಕೊಡೂದನ್ನ ಆಕಿಗೇ ಕೊಡಬೇಕು. ಈಗ ನಾನೂ ಇದ್ದೀನಲ್ಲ— ಒಬ್ಬಾಕಿಯ ಸಂಗಡ ಆರಾಮಾಗಿ. ”

“ ಮುಸಿ ಮಾಡಿದ್ದೀಯೇನೋ? “

“ ನಾನ್ಯಾತಕ್ಕ ಮಾಡಬೇಕೋ ಮಳ್ಳs ? ಆಕೀನs ಮಾಡಿದಾಳ. ದಿನಾಲು ದುಡಿದದ್ದರಾಗ ಮನಸಿಗೆ ಬಂದಷ್ಟು ಖರ್ಚು ಮಾಡುತೀನಿ. ಉಳಿದದ್ದು ಆಕಿಯ ಕೈಯಾಗ ಕೊಡುತೀನಿ. ”

“ ಮದುವಿ ಆಗಿಲ್ಲಾ ? ” ಎಂದು ಆಶ್ಚರ್ಯದಿಂದ ಪ್ರಶ್ನಿಸಿದ ರಾಮು.

“ ಸೂಳೆಯರ ಕೂಡ ಇರೂದಕ್ಕ ಮದುವಿ ಯಾತಕ್ಕೋ ? ” ಎಂದು ನುಡಿದು ಮೇಜು ಬಡಿದು ನಕ್ಕ ಹಣಮು “ ಬರುತೀಯೇನೋ, ಇವತ್ತು ಕರಕೊಂಡು ಹೋಗುತೀನಿ. ನಿನಗೂ ಒಬ್ಬಾಕಿಯ ದೋಸ್ತಿ ಮಾಡಿಸಿ ಕೊಡುತೀನಿ. ”

ಸೂಳೆಯರ ಮನೆಗಳನ್ನಾಗಲಿ, ಸೂಳೆಯನ್ನಾಗಲಿ ರಾಮು ಅದುವರೆಗೆ ನೋಡಿರಲಿಲ್ಲ. ಹಣ ಕೊಟ್ಟವರನ್ನು ಅವರು ಕರೆದುಕೊಳ್ಳುವರೆಂಬ ವಿಷಯವೇನೋ ಆತನಿಗೆ ಗೊತ್ತಿದ್ದಿತು. ತನ್ನ ಸಹೋದ್ಯೋಗಿ ಕೂಲಿಕಾರರೆಷ್ಟೋ ಜನ ರಾತ್ರಿ ಸೂಳೆಯರ ಮನೆಗೆ ಹೋಗಿ ಬರುತ್ತಿದ್ದ ಸಂಗತಿಯೂ ಆತನಿಗೆ ತಿಳಿದಿದ್ದಿತು. ಈ ಮೊದಲು ಒಂದು ಸಲ ಮರಿಯಪ್ಪ ಆತನನ್ನು ಕರೆದಿದ್ದ. “ ಒಂದೆರಡು ಮಗೀ ಕುಡದು ಒಬ್ಬಾಕಿಯ ಹತ್ತಿರ ಹೋಗಿ ಬರೂಣು ಬಾ, ” ಎಂದು ಆಹ್ವಾನಿಸಿದ್ದ. ಹೆಂಡ ಕುಡಿಯುವ ಇಚ್ಛೆ ರಾಮುನಿಗಿರಲಿಲ್ಲ. ಸೂಳೆಯರೆಂದರೆ ಹೇಗಿರುವರೋ, ಅವರನ್ನೊಮ್ಮೆ ನೋಡಬೇಕು ಎಂಬ ಬಯಕೆಯೇನೋ ಆತನ ಮನಸ್ಸಿನಲ್ಲಿ ಸುಳಿಯುತ್ತಿತ್ತು. ಆದರೆ ಆದಿನ ಮರಿಯಪ್ಪ ಕರೆದಾಗ ಆತ ಹೋಗಿರಲಿಲ್ಲ. ದುಡಿತದಿಂದ ದಣಿದ ದೇಹ ವಿಶ್ರಾಂತಿಗಾಗಿ ಹಾತೊರೆಯುತ್ತಿದ್ದಿತು. “ ಸಾಕಾಗಿ ಹೋಗ್ಯೆತಿ ನನಗ. ಇಂದು ಯಾವದೂ ಬ್ಯಾಡ. ಬಿದ್ದುಕೋತೀನಿ. ” ಎಂದು ಹೇಳಿ ಮಲಗಿ ಬಿಟ್ಟಿದ್ದ. ಸೂಳೆಯತನ್ನು

ನೋಡಬೇಕೆಂಬ ಬಯಕೆ ಮನಸ್ಸಿನಲ್ಲೇ ಉಳಿದಿದ್ದಿತು. ಇಂದು ಹಣಮ ಆ ವಿಷಯವನ್ನೆತ್ತುತ್ತಲೂ ಆತನ ಬಯಕೆ ಜಾಗೃತವಾಯಿತು.

"ಬರ್ತೀಯೇನೋ? ಎಂದು ಹಣಮ ಕರೆಯುತ್ತಲೂ ಆತ ಹೊರಟು ಬಿಟ್ಟ. ಹಣಮ ಆತನನ್ನು ನೇರವಾಗಿ ಸೆರೆಯಂಗಡಿಗೆ ಕರೆದೊಯ್ದ. "ನನಗ ಬ್ಯಾಡಪ್ಪ ಅದು," ಎಂದು ರಾಮು ಪರಿಪರಿಯಾಗಿ ಹೇಳಿದರೂ ಹಣಮ ಬಿಡಲಿಲ್ಲ. "ದೇವರ ಗುಡಿಗೆ ಹೋಗುವವರು ಜಳಕಾ ಮಾಡಿ ಹೋಗುವ ಹಂಗ ಸೂಳೆಯರ ಮನೆಗೆ ಹೋಗುವವರು ಸೆರೆ ಕುಡಿದು ಹೋಗಾಕ ಬೇಕು. ನಿನಗೇನು ಗೊತ್ತು ಇದರ ಮಜಾ? ಕುಡಿಯೋ ಮಳ್ಳs" ಎಂದು ಹೇಳಿ ಒತ್ತಾಯದಿಂದ ಕುಡಿಸಿದ. ಇಬ್ಬರೂ ತೂಗಾಡುತ್ತ ಬೀದಿಯಲ್ಲಿ ಹೊರಟರು. ಹಲವು ಸಂದಿಗಳಲ್ಲಿ ಹಾಯ್ದು ಹಣಮ ಆತನನ್ನು ತಮ್ಮ ಓಣಿಗೆ ಕರೆದುತಂದ. ರಾಮುನ ಬುದ್ಧಿ ಆತನ ಹಿಡಿತದಲ್ಲಿರಲಿಲ್ಲ. ತಾನು ಬಂದಿರುವದೆಲ್ಲಿಗೆಂಬುದೇ ತಿಳಿಯದಂತಾಗಿದ್ದಿತು. ಮನೆಗಳೆದುರಿಗೆ ಕುಳಿತು ಹರಟುತ್ತಿದ್ದ ಹೆಂಗಳೆಯರು ಅವರಿಬ್ಬರನ್ನೂ ಕಂಡು ನಕ್ಕರು. "ನಿನ್ನ ಗೆಣ್ಯಾ ಬಂದ ನೋಡs ಮಲ್ಲೀ. ಇನ್ನೊಬ್ಬ ಗೆಣ್ಯಾನ್ನ ಕರತಂದಾನ," ಎಂದು ಕೂಗಿ ಹೇಳಿದಳು ದುರ್ಗವ್ವ. "ನೀನೇ ಕರೆದುಕೋ ಅವನ್ನ," ಎಂದು ಉತ್ತರವಿತ್ತು ಮಲ್ಲಿ ಗಹಗಹಿಸಿ ನಕ್ಕಳು. "ಈ ಮುದಿರಂಡೆಯ ಸಂಗಡ ಯಾವ ಸೂಳೀಮಗಾ ಮಲಗ್ಯಾನು!" ಎಂದು ತೊದಲುತ್ತ ನುಡಿದ ಹಣಮ. "ಯಾಕೋ ಭಾಡಕೌ, ನಾಲಗೀ ಉದ್ದ ಮಾಡುತೀ? ಒಂದು ಒದ್ದರ ಗಟಾರದಾಗ ಹೋಗಿ ಬಿದ್ದೀ!" ಎಂದು ಸಿಡಿದು ನುಡಿದಳು ದುರ್ಗವ್ವ.

"ಒದೀತೀಯೇನು? ಬಾ, ಒದೀ ಬಾ ನೋಡೋಣು. ನಿನ್ನ ಕಾಲು ಸೀಳಿ ಪಾತಾಳಕ್ಕ ಮೆಟ್ಟುತೀನಿ," ಎಂದು ಗದರಿಸುತ್ತ ಹಣಮ ಅವಳ ಕಡೆ ನುಗ್ಗಿದ. ದುರ್ಗವ್ವ ಭೀತಳಾಗಿ ಮನೆ ಹೊಕ್ಕು ಬಾಗಿಲ ಮುಚ್ಚಿಕೊಂಡಳು. "ನನ್ನ ಕೈಯಾಗ ಸಿಕ್ಕರೆ ಸಿಗು ನೀ. ಹೆಣಾ ಮಲಗಿಸುತೀನಿ," ಎಂದು ತೊದಲುತ್ತ ನುಡಿದು ಹಣಮ ರಾಮುನನ್ನೆಳೆದುಕೊಂಡು ಮಲ್ಲಿಯ ಮನೆಯ ಕಡೆ ಬರುತ್ತಿದ್ದಹಾಗೆ, ತನ್ನ ಮನೆಯೆದುರಿನ ಕಟ್ಟೆಯ ಮೇಲೆ ಕುಳಿತು ಅವರನ್ನೇ ದಿಟ್ಟಿಸುತ್ತಿದ್ದ ಯಮುನಾ ಒಡನೆಯೆ ರಾಮುನನ್ನು ಗುರುತಿಸಿ "ರಾಮ್ಯಾ," ಎಂದು ಕೂಗಿ ಅವನ ಕಡೆ ಧಾವಿಸಿದಳು.

ಪರಿಚಿತ ಧ್ವನಿ ಕಿವಿಗೆ ಬೀಳುತ್ತಲೂ ರಾಮ ತೂಗಾಡುತ್ತಾ ಅವಳತ್ತ ತಿರುಗಿದ. ಸೆರೆಯ ಅಮಲಿನಲ್ಲಿ ವೈಮರೆತ ಆ ಸ್ಥಿತಿಯಲ್ಲಿಯೂ ಆತ ಯಮುನಳನ್ನು ಒಡನೆಯೆ ಗುರುತಿಸಿದ. ಆತನ ಮಿದುಳು ಭರದಿಂದ ಕೆಲಸ ಮಾಡತೊಡಗಿತು. "ಯಮುನಾ....ಯಮುನಾ....ನಮ್ಮೂರ ಹೊಳೆಪ್ಪ ಗೋಳ ಯಮುನಾ....ನನ್ನ ಯಮುನಾ....ಇಲ್ಲಿ ಹೆಂಗ ಬಂದಳು."

"ರಾಮಾ," ಎಂದು ಕೂಗುತ್ತ ಯಮುನಾ ಮುಂದೆ ಬಂದುದನ್ನು ಕಂಡು ಹಣಮ ಕವಕ್ಕನೆ ಅವಳ ಮೈಮೇಲೆ ಹೋಗಿ— "ಬಿಡು ಅವನ್ನ. ನಿನ್ನ ಸಂಗಡ ಮಲಗಾಕಂತ ಬಂದಿಲ್ಲ ಅವ," ಎಂದು ಕಿರಿಚಿದ.

"ಇವ ನನ್ನ ಗುರುತಿನವ, ಹಣಮಣ್ಣಾ, ನಮ್ಮೂರಿನವ. ನಮ್ಮಾವ."

ಯಮುನಳ ಕತೆಯೆಲ್ಲವನ್ನೂ ಕೇಳಿ ತಿಳಿದಿದ್ದ ಮಲ್ಲಿಗೆ ರಾಮ ಯಾರೆಂಬುದು ಒಡನೆಯೆ ತಿಳಿದು ಬಂದಿತು. ಆಕೆ ಹಣಮನನ್ನು ಸಮಾಧಾನಗೊಳಿಸಿ ಮನೆಗೆ ಕರೆದುತಂದು ಮಲಗಿಸಿದಳು. "ಅವಗೂ ಅವಳಿಗೂ ಸಣ್ಣಾಗಿನಿಂದ ಗೆಳೆತನ ಐತೇಳು. ಇಬ್ಬರೂ ಒಂದೇ ಊರಾಗ ಬೆಳೆದವರು. ಅವನ್ನs ಮದುವಿ ಆಗಬೇಕಂತ ಮಾಡಿದ್ದಳು ಆಕಿ. ಆಗಲಿಲ್ಲ. ಈಗ ಮತ್ತ ಕೂಡ್ಯಾರ ದೇವರೇ ಕೂಡಿಸಿರಬೇಕು ಅವರನ್ನ. ಸುಮ್ಮನಿರು," ಎಂದು ಹೇಳಿದಳು. "ಹಿಂಗೇನು!? ಚಲೋನೇ ಆತೇಳು ಹಂಗಾದರ. ಅವಗ ಒಬ್ಬಾಕೀನ್ನ ಗಂಟುಹಾಕುವ ತ್ರಾಸನೂ ತಪ್ಪಿದಂಗಾತು," ಎಂದು ನುಡಿದು ಹಣಮ ಹಾಸುಗೆಯುದ್ದಕ್ಕೂ ಕಾಲು ಚಾಚಿ ಮಲಗಿಕೊಂಡ.

ತೂಗಾಡುತ್ತಿದ್ದ ರಾಮನನ್ನು ಹಿಡಿದುಕೊಂಡು ತನ್ನ ಮನೆಗೆ ಕರೆದು ತಂದಳು ಯಮುನಾ. ಸಿದರಾಯಪ್ಪ ಅಂದೇ ಊರಿಗೆ ಹೋಗಿದ್ದನಾದುದರಿಂದ ಆ ಬಗೆಗೆ ಭೀತಿಯೇನೂ ಇರಲಿಲ್ಲ.

ಗಾದಿಯ ಮೇಲೆ ರಾಮನನ್ನು ಮಲಗಿಸಿ ಯಮುನಾ ಆತನ ತಲೆಯ ಬಳಿ ಕುಳಿತುಕೊಂಡಳು. ಗೂಟಕ್ಕೆ ನೇತು ಹಾಕಿದ್ದ ಕಂದೀಲಿನ ಮಂದ ಬೆಳಕು ಅವಳ ಮುಖವನ್ನು ಬೆಳಗಿಸುತ್ತಿತ್ತು. ನಾಲ್ಕೈದು ನಿಮಿಷ ಸುಮ್ಮನೆ ಬಿದ್ದುಕೊಂಡಿದ್ದು ಅನಂತರ ನಿಧಾನವಾಗಿ ಕಣ್ಣುತೆರೆದು ಅವಳನ್ನು ದಿಟ್ಟಿಸಿ ನೋಡಿದ ರಾಮ.

"ಯಾರು ನೀ ?" ಎಂದು ಗಡುಸು ಧ್ವನಿಯಲ್ಲಿ ಕೇಳಿದ.

" ನನ್ನ ಗುರುತಾಗಲಿಲ್ಲೇನೋ ರಾಮು ? ನಾ ಯಮುನಿ. "

" ಯಮುನಿ ? ಯಾವೂರ ಯಮುನಿ ? ರಾಮು ? ಯಾವೂರ ರಾಮು ? ಎನ್ನುತ್ತ ಆತ ಎದ್ದು ಕುಳಿತು ಅವಳ ಭುಜಗಳನ್ನು ಹಿಡಿದು ಒರಟಾಗಿ ಅಲುಗಾಡಿಸುತ್ತ— " ಇದೇನು ಯಾಸ ಹಾಕಿದ್ದೀ ? ಆಟದಾಗ ಪಾತ್ರ ಮಾಡುವ ವರಾಂಗ ? ಈ ಸೀರಿ, ಈ ಕುಬುಸ, ಈ ವಸ್ತ ಎಲ್ಲಾ ಎಲ್ಲಿಂದ ಬಂತು ? " ಎಂದು ಕೇಳಿದ.

" ನನ್ನ ಸಂಗಡ ಬಾ ಅಂದರ : ಆಗ ನೀ ಬರಲಿಲ್ಲ. ನಾ ಪರದೇಶಿಯಾದಿನಿ. ಈ ಊರಿಗೆ ಬಂದು ಬಿದ್ದಿನಿ. ತಿನ್ನೂದೇನು ? ಮಲಗೂದೆಲ್ಲಿ ? ಈ ಕೆಲಸಕ್ಕ ಬೀಳಬೇಕಾತು. "

" ಕೆಲಸ ? ಎಂಥಾ ಕೆಲಸ ? "

" ಅದನ್ನೂ ಒಡದೇ ಹೇಳಬೇಕೇನು ? ಇದು ಯಾರ ಓಣಿ ಗೊತ್ತಿಲ್ಲ ನಿನಗ ? "

" ಯಾರ ಓಣಿ ? "

" ಸೂಳೆಯರ ಓಣಿ. "

ರಾಮು ತಲೆ ಕೆರೆದುಕೊಂಡ, ಹುಬ್ಬು ಮೇಲಕ್ಕೇರಿಸಿದ, ಕಣ್ಣುಗಳನ್ನ ಗಲಗೊಳಿಸಿ ಯಮುನಳನ್ನು ನುಂಗಿಬಿಡುವಂತೆ ನೋಡಿದ. ಅನಂತರ ಇಳಿದ ಧ್ವನಿಯಲ್ಲಿ ಮಾತನಾಡಿದ:

" ಸೂಳೆಯರ ಓಣಿ....ನೀನೂ ಸೂಳೆಯಾದಿ ಹಂಗಾದರ ? ಹೂಂ. ಗೊತ್ತಾಯ್ತು. ಇದು ಸೂಳೇರ ಓಣಿ ಅನ್ನೂದು ಖರೆ. ಹಣಮಣ್ಣ ನನ್ನ ಕರಕೊಂಡು ಬಂದಿದ್ದ. ಹಾದ್ಯಾಗ ಸೆರೆ ಕುಡೀಬಾರದಾಗಿತ್ತು. ಕುಡಿದಿನಿ. ತಲಿ ಎಲ್ಲಾ ಝುಂ ಅಂತೈತಿ. ಏನೂ ಹೊಳೀದಂಗ ಆಗೈತಿ ಯಮುನೀ, " ಎನ್ನುತ್ತ ಆತ ಮತ್ತೆ ಹಾಸುಗೆಯ ಮೇಲೊರಗಿದ.

" ಉಂಡಿದ್ದೀಯೋ ಇಲ್ಲೋ ? ಎಂದು ಕನಿಕರದಿಂದ ಕೇಳಿದಳು ಯಮುನಾ.

" ಏನು ಉಣ್ಣೂದು ಬಿಡು. ಈ ಸೆರೆ ಹೊಟ್ಟ್ಯಾಗ ಹೊಕ್ಕಾಗಿನಿಂದ ಹಸಿವೇ ಇಲ್ಲದಂಗ ಆಗೈತಿ. "

" ಕುಡೀಬಾರದಾಗಿತ್ತೆ. ಯಾಕ ಕುಡಿದಿ ರಾಮು ? "

" ಹೌದು. ಕುಡೀಬಾರದಾಗಿತ್ತು. ಹಣಮು ಜುಲುಮೆ ಮಾಡಿ ಕುಡಿಸಿದ. "

ಬೆಳಗಿನ ಜಾವದಲ್ಲಿ ಅವನಿಗೆ ಎಚ್ಚರವಾಯಿತು. ಎದ್ದು, ದೀಪ ಹೊತ್ತಿಸಿದ. ಪಕ್ಕದಲ್ಲಿ ಸುಖವಾಗಿ ನಿದ್ದೆ ಮಾಡುತ್ತಿದ್ದಳು ಯಮುನಾ. ಬೀಡಿ ಹಚ್ಚಿ ಕೆಮ್ಮುತ್ತ ಹೊಗೆ ಎಳೆಯತೊಡಗಿದ. ಅವನ ಕೆಮ್ಮು ಯಮುನಳ ನಿದ್ರಾ ಭಂಗ ಮಾಡಿತು.

ಇಬ್ಬರೂ ಎಷ್ಟೋ ಹೊತ್ತಿನ ವರೆಗೆ ಮಾತನಾಡುತ್ತ ಕುಳಿತಿದ್ದರು. ತಾನು ಹಳ್ಳಿ ಬಿಟ್ಟು ಹೊರಟಂದಿನಿಂದ ಮೊದಲು ಮಾಡಿಕೊಂಡು ನಗರಕ್ಕೆ ಬಂದು ಸಿದರಾಯಪ್ಪನ ಸೂಳೆಯಾಗಿ ಮನೆ ಮಾಡಿದ ವರೆಗಿನ ವೃತ್ತಾಂತವನ್ನೆಲ್ಲ ವಿವರಿಸಿದಳು ಯಮುನಾ. ರಾಮನೂ ತನ್ನ ವೃತ್ತಾಂತವನ್ನು ವಿವರಿಸಿದ.

" ಅವ್ವಗ ಏನಾಯಿತೋ ರಾಮು ? "

" ಇನ್ನೂ ಏನೂ ತಿಳಿದಿಲ್ಲ ಯಮುನೀ. ಖಟ್ಲೆ ನಡದೈತಿ. "

" ಆಕಿಗೇನಾಗುತ್ತೈತ್ಯೋ ಅಂತ ಹಗಲೂ ರಾತ್ರಿ ಚಿಂತಿ ನನಗ."

" ಲಕ್ಕಪ್ಪ ವಕೀಲನ್ನ ಇಟ್ಟಾನಂತ. ಏನಾಗುತ್ತೈತ್ಯೋ ನೋಡಬೇಕು. "

ಒಂದೆರಡು ನಿಮಿಷ ಸುಮ್ಮನಿದ್ದು, ಕೇಳಿದಳು ಯಮುನಾ.

" ಈ ಊರಿಗೆ ಬಂದು ಇಷ್ಟು ದಿನಾ ಆದರೂ ನನ್ನ ನಿನ್ನ ಭೆಟ್ಟಿ ಹೆಂಗಾಗಲಿಲ್ಲ ರಾಮು ? "

" ಆಗೂದಾದರೂ ಹೆಂಗ ? ನಾ ದುಡಿಯೂದು ರವಿವಾರ ಪ್ಯಾಟಿಯೊಳಗ. ನೀ ದುಡಿಯೂದು ಇಲ್ಲಿ. ಪ್ಯಾಟಿ, ಖಾನಾವಳಿ ಬಿಟ್ಟು ನಾ ಎಲ್ಲಿಗೂ ಹೋಗಿಲ್ಲ. ನೀನಂತೂ ಅತ್ತ ಬರುವ ಹಾಂಗ ಕಾಣೂದಿಲ್ಲ. "

" ನಂದೇನು ಕೆಲಸ ಅಲ್ಲಿ ? "

" ನಂದಾದರೂ ಇಲ್ಲೇನು ಕೆಲಸ ? ನಿನ್ನೆ ಹಣಮ ಕರದನಂತ ಬಂದಿನಿ. ಇಲ್ಲದಿದ್ದರ ಅಂಗಡೀ ಕಟ್ಟಿಗೂ ನನಗೂ ಗಂಟು ಬಿದ್ದಿತ್ತು."

" ಅಲ್ಲೇ ಮಲಗುತಿದ್ದಿಯಾ ? "

" ಮತ್ತೇನ ಮಾಡೂದು ? ನಮಗೆಲ್ಲಾ ಮನಿ ಎಲ್ಲಿಂದ ಬರಬೇಕು ?"

"ಇಲ್ಲೇ ಬಂದು ಇದ್ದುಬಿಡು," ಎಂದು ಹೇಳಲು ಅವಳ ಮನಸ್ಸು ಹಾತೊರೆಯುತ್ತಿದ್ದಿತಾದರೂ ಸಿದರಾಯಪ್ಪನ ನೆನಪಾಗಿ ಆ ನುಡಿ ಬಾಯಲ್ಲಿಯೆ ಉಳಿಯಿತು. ಆತ ತನ್ನನ್ನು ಪೂರ್ಣವಾಗಿ ನಂಬಿ ಈ ಮನೆ ಹೂಡಿ ಕೊಟ್ಟಿದ್ದಾನೆ. ಮೋಸ ಮಾಡುವುದಿಲ್ಲವಾಗಿ ತಾನು ಆತನಿಗೆ ಭರವಸೆ ಕೊಟ್ಟಿದ್ದಾಳೆ. ಈಗ ರಾಮನನ್ನು ಕರೆದುಕೊಳ್ಳುವುದೆಂದರೆ ಸಿದರಾಯಪ್ಪನಿಗೆ ಮೋಸ ಮಾಡಿದ ಹಾಗೆಯೆ ಆಗುವುದು. ಈ ಸಂಗತಿ ತಿಳಿದ ಬಳಿಕ ಆತನಿಗೆ ಏನೆನ್ನಿಸಬಹುದು ?"

ರಾತ್ರಿ ಉಳಿದಿದ್ದ ಅನ್ನವನ್ನುಂಡು, ಚಹ ಕುಡಿದು ರಾಮು ಕೆಲಸಕ್ಕೆ ಹೊರಡಲು ಸಿದ್ಧವಾಗುತ್ತಿದ್ದಂತೆ ಹಣಮ ಬಂದ. ಅವನ ಹಿಂದೆಯೆ ಮಲ್ಲಿಯೂ ಬಂದಳು. ದುರ್ಗವ್ವ, ಫಾತಿಮಾ, ಬಾಬೂ ಎಲ್ಲರೂ ಬಂದು ಸೇರಿದರು.

"ಹಳೇ ಗೆಣ್ಯಾ ಗಂಟುಬಿದ್ದ. ಇನ್ನು ಆ ಸಾವುಕಾರಗ ಸೋಡಚೀಟಿ ಕೊಡುವಾಕೆಯೇನು ?" ಎಂದು ಕೇಳಿದಳು ದುರ್ಗವ್ವ.

ಅದಕ್ಕೆ ಫಾತಿಮಾ— "ಛೆ. ಹಂಗ ಹೆಂಗ ಮಾಡಾಕ ಬರುತೈತಿ ದುರ್ಗವ್ವ ? ಇಷ್ಟು ದಿನ ಸಿದರಾಯಪ್ಪ ಇವಳನ್ನ ರಾಣಿಯು ಹಂಗ ಇಟ್ಟಾನ. ಕಾಯಂ ಇರೂ ಕರಾರಿನ ಮ್ಯಾಲ ಇವಳಿಗೆ ಮನೀ ಮಾಡಿ ಕೊಟ್ಟಾನ. ಅವ ಬಹಾಳ ಚಲೋ ಮನಸ್ಯ. ಈಗ ಯಮುನಾ ಅವನ ಕೈಬಿಟ್ಟು ಇವನ್ನ ಕೂಡಿಕೊಳ್ಳೂದನ್ನ ದೇವರು ಮೆಚ್ಚಾಕಿಲ್ಲ. ಇದು ವಿಶ್ವಾಸಘಾತ. ಏನಂತೀ ಬಾಬೂ ?" ಎಂದಳು.

"ನೀ ಹೇಳೂದು ಬರಾಬರಿ. ನಂಬಿಕೀ ಬಿಟ್ಟು ಹೋಗಬಾರದು ಎಂದೂ."

"ಇವನೂ ಇಲ್ಲಿ ಇರೂದಕ್ಕ ಸಾವುಕಾರ ಒಪ್ಪಿದರ ಆ ಮಾತು ಬ್ಯಾರೆ. ಆದರ ಅವ ಬಹಾಳ ಮಾಡಿ ಒಪ್ಪೂದಿಲ್ಲ," ಎಂದಳು ಫಾತಿಮಾ.

"ಒಪ್ಪೂದಿಲ್ಲವ್ವ. ಮೊದಲೇ ಹೇಳಿದಾರವರು ಎಲ್ಲಾ," ಎಂದಳು ಯಮುನಾ.

"ಹಂಗಾದರ ಏನು ಮಾಡುವಾಕೆ ಈಗ ?"

"ಏನೋ ಅವ್ವ. ಯಾವದೂ ಹೊಳೀಲೊಲ್ಲದು."

ವಿಶ್ವಾಸಘಾತ....ಕಾಯಂ ಕರಾರು....ನಂಬಿಕೆ....ರಾಮನಿಗೆ ಯಾವುದೂ ಸರಿಯಾಗಿ ಅರ್ಥವಾಗಲಿಲ್ಲ. ತಾನು ಮನೆಯಲ್ಲಿರಲು ಯಮುನಳ ಯಜಮಾನ ಒಪ್ಪುವುದಿಲ್ಲ. ಯಮುನಳೂ ತನ್ನನ್ನಿಲ್ಲಿ ಇಟ್ಟುಕೊಳ್ಳಲು ಹಿಂದೆ ಮುಂದೆ ನೋಡುತ್ತಿದ್ದಾಳೆ—ಎಂಬುದೇನೋ ಆತನಿಗೆ ಗೊತ್ತಾಯಿತು. ಅದಕ್ಕೆ ಕಾರಣವೇನೆಂಬುದು ಮಾತ್ರ ಆತನಿಗೆ ಅರ್ಥವಾಗಲಿಲ್ಲ, ಅರ್ಥವಾಗುವುದು ಸಾಧ್ಯವೂ ಇರಲಿಲ್ಲ ಸಾಹುಕಾರನೊಬ್ಬನ ಸೂಳೆಯಾಗಿ ಆಕೆ ಸುಖದಿಂದಿರುವಳಾದುದರಿಂದ ತನ್ನಂಥ ಬಡ ಕೂಲಿಕಾರನೊಂದಿಗೆ ಬಾಳಲು ಈಗ ಅವಳಿಗೆ ಇಚ್ಛೆಯಿಲ್ಲವೆಂದೇ ಆತ ಭಾವಿಸಿದ.

"ನಡೀ ಹಣಮಣ್ಣಾ. ಹೋರೆಗೆ ಹೋಗೂಣು," ಎಂದಿಷ್ಟೇ ನುಡಿದು ಆತ ಅಲ್ಲಿಂದ ಹೊರಟುಬಿಟ್ಟ.

"ಮಧ್ಯಾನ್ನದಾಗ ಬಂದು ಉಂಡು ಹೋಗೋ ರಾಮಾ," ಎಂದು ಯಮುನಾ ಕೂಗಿ ಹೇಳಿದಳು. ರಾಮ ಏನನ್ನೂ ಹೇಳದೆ ಹಾಗೆಯೆ ಮುಂದೆ ಸಾಗಿದ.

ಮಧ್ಯಾಹ್ನವಾಯಿತು. ಆತ ಯಮುನಳ ಮನೆಗೆ ಹೋಗಲಿಲ್ಲ. ನಿತ್ಯದಂತೆ ಚಹದಂಗಡಿಗೂ ಹೋಗುವ ಮನಸ್ಸಾಗಲಿಲ್ಲ. ಹಾಗೇ ದುಡಿಯುತ್ತಲಿದ್ದ.

ಸಂಜೆಯಾಯಿತು. ಕೆಲಸ ಮುಗಿಯಿತು, ಯಮುನಳ ಮನೆಗೆ ಹೋಗುವುದೇ ಬೇಡವೇ ಎಂದು ಒಂದೆರಡು ಕ್ಷಣ ಯೋಚಿಸುತ್ತಿದ್ದ. "ಛೆ. ಮತ್ಯಾಕ ಹೋಗೂದು ಅವಳ ಹತ್ತರ? ನನ್ನ ಇಟ್ಟುಕೊಳ್ಳುವ ಮನಸ್ಸೇ ಇಲ್ಲ ಅವಳಿಗೆ. ಕರಿಯದವರ ಮನಿಗೆ ಕಳಸಗಿತ್ತಿಯಾಗಿ ಹೋಗೂದಂದರೇನು? ಇಲ್ಲೇ ಬಿದ್ದರಾಯ್ತು," ಎಂದುಕೊಂಡು ಆ ವಿಚಾರವನ್ನು ತ್ಯಜಿಸಿದ. ಹಸಿವೆ, ದುಡಿತಗಳಿಂದಾಗಿ ಮೈ ಮನಸುಗಳೆರಡೂ ಸೋತು ಹೋಗಿದ್ದುವು. ಅಂಗಿಯ ಜೇಬಿನಲ್ಲಿದ್ದ ನಾಣ್ಯಗಳನ್ನೆಲ್ಲ ತೆಗೆದು ಎಣಿಸಿ ನೋಡಿದ. ಒಟ್ಟು ಎರಡು ರೂಪಾಯಿ. ಬೀಸಿ ಬರುತ್ತಿದ್ದ ಗಾಳಿಯೊಂದಿಗೆ ಸೆರೆಯ ವಾಸನೆ ಬಂದಂತಾಯಿತು. ನಾಲಗೆಗೆ ನೀರೂರಿತು. "ಕುಡೀಬಾರದು ಅಂದುಕೊಂಡಿದ್ದಿನಿ. ಯಮುನಿಯ ಸಂಗಡಲೇ ಇರೂದಾಗಿದ್ದರ ಕುಡೀತಿರಲಿಲ್ಲ. ಅವಳ ಆಸೇನೂ ಬಿಟ್ಹಂಗಾಯ್ತು. ಯಾರಿಗಾಗಿ ಉಳಿಸೂದು ಈ

ರೊಕ್ಕಾ ? ಯಾರಿದಾರ ನನಗ ? ಇನ್ನು ನಾ ಏನು ಮಾಡಿದರೇನು ? ” ಎಂದುಕೊಳ್ಳುತ್ತ ಸೆರೆದಂಗಡಿಯ ಕಡೆ ಸಾಗಿದ. ಎರಡೂ ರೂಪಾಯಿ ತೆತ್ತು ಹೊಟ್ಟೆ ತುಂಬುವಷ್ಟು ಸೆರೆ ಕುಡಿದುದಾಯಿತು. ಅಮಲೇರಿ ಕಣ್ಣೆದುರಿಗೆ ಕತ್ತಲೆ ಕವಿಯಿತು. ಅತ್ತ ಇತ್ತ ತೂಗಾಡುತ್ತ ಪೇಟೆಯ ಕಡೆಗೆ ಹೊರಟ. ಅಂಗಡಿಯ ವರೆಗೆ ಬರಲು ಸಾಧ್ಯವಾಗಲಿಲ್ಲ. ಚೌಕವೊಂದರಲ್ಲಿ ಬಿದ್ದುಕೊಂಡ. ರಾತ್ರಿಯಾಯಿತು. ಬೀದಿಯಲ್ಲಿ ಹೋಗುತ್ತಿದ್ದವರಾರೋ ಆತನನ್ನು ಎಡವಿ ಬಿದ್ದು ಶಪಿಸುತ್ತ ಎದ್ದು ಹೊರಟು ಹೋದರು. ರಾಮನಿಗೆ ಕೊಂಚ ಎಚ್ಚರವಾಯಿತು. ಉಗುಳುತ್ತಾ ಎದ್ದು ಮುಂದೆ ಹೊರಟ. ಪೋಲಿಸಿನವನೊಬ್ಬ ಈತನನ್ನು ಕಂಡು ದಂಡದಿಂದ ಒಂದೇಟು ಬಿಗಿದ. ರಾಮನಿಗೆ ಇನ್ನೂ ಅರಿವು ಬಂದಿತು. ಹೇಗೋ ಕಾಲೆಳೆಯುತ್ತ ಅಂಗಡಿಯ ವರೆಗೆ ಬಂದು ಕಟ್ಟೆಯ ಮೇಲೆ ದೇಹವನ್ನೊರಗಿಸಿದ.

ಎರಡು ದಿನ, ಎರಡು ಇರುಳು ಹಾಗೆ ಕಳೆದುವು. ಪ್ರತಿದಿನವೂ ಸಾಯಂಕಾಲ ಮನೆಗೆ ಹೊರಟಾಗಲೆಲ್ಲ ಹಣಮ ಆತನನ್ನು ಕರೆಯುತ್ತಿದ್ದ. “ನನ್ನ ಕೂಡ ಇರೂದಕ್ಕ ಅವಳು ತಯಾರಿಲ್ಲ ಅಂದ ಮ್ಯಾಲ-ನಾ ಯಾತಕ್ಕ ಬರಬೇಕು ? ” ಎಂದು ಹೇಳಿ ತಪ್ಪಿಸಿಕೊಳ್ಳುತ್ತಿದ್ದ ರಾಮ. ಅಲ್ಲಿ ಯಮುನಾ ಆತನನ್ನು ಕಾಣಲು ಕಾತರಳಾಗಿ ಕೊರಗುತ್ತಿದ್ದಳು. ಅವಳಿಗೆ ಉಭಯ ಸಂಕಟ. ಇತ್ತ ಸಾವುಕಾರರನ್ನು ತ್ಯಜಿಸುವಂತಿರಲಿಲ್ಲ. ಅತ್ತ ರಾಮನನ್ನು ದೂರಗೊಳಿಸುವಂತಿರಲಿಲ್ಲ. ಮೂರನೆಯ ದಿನ ಸಿದರಾಯಪ್ಪನ ಸವಾರಿ ಆಗಮಿಸಿತು. ಯಮುನಾ ಮೌನ ತಳೆದಳು.

ಊಟ ಮಾಡುವುದನ್ನು ಬಿಟ್ಟು ರಾಮ ಕೊರಗುತ್ತಿದ್ದುದನ್ನು ಕಂಡು ಹಣಮನಿಗೆ ಕಳವಳವಾಗದಿರಲಿಲ್ಲ. ಒಂದು ಸಾಯಂಕಾಲ ಆತ ಮತ್ತೆ ಮಾತು ತೆಗೆದ:

“ಯಮುನಿ ಇಲ್ಲದಿದ್ದರ ಇಲ್ಲ. ಆ ಸಾವುಕಾರನ್ನ ಬಿಡೂದಕ್ಕ ಅವಳಿಗೆ ಬರೂದಿಲ್ಲ. ಅಷ್ಟಕ್ಕ್ಯಾಕ ನೀ ಹೀಂಗ ಕೊರಗಿದರ ಏನು ಬರುತೈತಿ ಬ್ಯಾರೆ ಒಬ್ಬಾಕಿಯ ದೋಸ್ತಿ ಮಾಡಿಸಿಕೊಡುತೀನಿ ಬಾರೋ. ಯಶೋದಾ ಅಂತ ಒಬ್ಬಾಕಿ ಇದ್ದಾಳ. ಅವಳದೂ ನಿಂದೂ ಚಲೋ ಜೋಡಿ ಕೂಡುತೈತಿ.”

ತಾನು ಹೀಗೆ ಕೊರಗುವುದರಿಂದ ಉಪಯೋಗವೇನೂ ಇಲ್ಲವೆಂದು ರಾಮುನಿಗೂ ಅನ್ನಿಸಿತ್ತು. ಕುಡಿತದ ಚಟವಂತೂ ಅಂಟಿಕೊಂಡಂತಾಯಿತು. ಇನ್ನು ಅದೂ ಒಂದು. ಹೋಗಲೇ, ಹೋಗಿ ಬಿಡಲೇ, ಎಂದು ಯೋಚಿಸಿದ. ಅದೇ ಓಣಿಯಲ್ಲಿಯೇ ಇನ್ನೊಬ್ಬಳ ದೋಸ್ತಿ ಮಾಡಿ ಯಮುನಳಿಗೆ ಬುದ್ಧಿ ಕಲಿಸಬೇಕೆಂದು ಆತನ ಅಲ್ಪಮತಿ ಹಟತೊಟ್ಟಿತು.

" ಹಂಗೇ ಆಗಲಿ ಹಣಮಣ್ಣಾ. ಬರ್ತೀನಿ ನಡಿ. "

ಅಂದು ಹಣಮ ಹೆಚ್ಚು ಕುಡಿಯಲಿಲ್ಲ. ರಾಮುನಿಗೂ ಹೆಚ್ಚಾಗಿ ಕುಡಿಯಗೊಡಲಿಲ್ಲ. " ರೊಕ್ಕಾ ಹಾಳುಮಾಡಬ್ಯಾಡ. ನಿನ್ನ ಸಂಗಡ ಮಲಗೂವಾಕಿಗೆ ಕೊಡಬೇಕಾಗುತ್ತೈತಿ. ಅವಳೇನೂ ಪುಕಟ ಮಲಗೂದಿಲ್ಲ. " ಎಂದು ಹೇಳಿದ " ಹೌದಾದು " ಎಂದು ತಲೆದೂಗಿದ ರಾಮು.

ಓಣಿಯಲ್ಲಿ ಕೆಲವು ಬಾಗಿಲು ಮುಚ್ಚಿಕೊಂಡಿದ್ದುವು. ಸಿದರಾಯಪ್ಪ ಮನೆಯಲ್ಲಿದ್ದನಾದುದರಿಂದ ಯಮುನಳೂ ಬಾಗಿಲು ಮುಚ್ಚಿಕೊಂಡಿದ್ದಳು. ಯಶೋದಳಿಗೆ ಗಿರಾಕಿ ದೊರೆತಿರಲಿಲ್ಲವೇನೋ—ಆಕೆ ತನ್ನ ಮನೆಯ ಮೆಟ್ಟಿಲುಗಳ ಮೇಲೆ ಕುಳಿತುಕೊಂಡು ದುರ್ಗವ್ವನೊಂದಿಗೆ ಹರಟೆ ಕೊಚ್ಚುತ್ತಲಿದ್ದಳು. ಹಣಮ ಸಲುಗೆಯಿಂದ ಯಶೋದಳ ಕೆನ್ನೆ ಚಿವುಟಿ, " ನಿನಗೊಬ್ಬ ಗೆಣ್ಯಾನ್ನ ತಂದೀನಿ. ಕರಕೋ. " ಎಂದು ನಗುತ್ತ ನುಡಿದು ರಾಮುನನ್ನು ಅಲ್ಲಿ ಬಿಟ್ಟು ಮಲ್ಲಿಯ ಮನೆಗೆ ಹೊರಟ.

ಮೆಟ್ಟಲುಗಳ ಮೇಲೆ ಕುಳಿತು ಸಿಗರೇಟು ಸೇದುತ್ತಿದ್ದ ಮಲ್ಲಿ ಕುತೂಹಲದಿಂದ ಕೇಳಿದಳು: " ಯಾರೋ ಅವ, ಹಣಮಾ ? "

" ಮನ್ನೆ ಬಂದಿದ್ದನಲ್ಲ ಅವನೇ—ಆ ರಾಮು, " ಎಂದು ಹಣಮ ತನ್ನ ಸಹಜ ಕರ್ಕಶ ಸ್ವರದಲ್ಲಿ ಕೂಗಿ ಹೇಳಿದ. ತನ್ನ ಮನೆಯಲ್ಲಿದ್ದ ಯಮುನಳಿಗೆ ಆ ಮಾತು ಕೇಳಿಸುತ್ತಲೂ, " ರಾಮ ಬಂದನೇ ? ಎಲ್ಲಿದಾನ ? " ಎನ್ನುತ್ತಾ ಆಕೆ ಬಾಗಿಲು ತೆಗೆದು ಹೊರಗೆ ಬಂದಳು. " ಎಲ್ಲಿದಾನ ಹಣಮಣ್ಣಾ ? "

" ಅಲ್ಲಿದಾನ ನೋಡು ಯಶೋದಿಂಯ ಮನಿಯಾಗ. "

ಅಷ್ಟರಲ್ಲಿ ಯಶೋದೆಯ ಮನೆಯ ಬಾಗಿಲು ಮುಚ್ಚಿಕೊಂಡಿದ್ದಿತು. ನಿಟ್ಟುಸಿರೊಂದನ್ನು ಬಿಟ್ಟು ಮತ್ತೆ ಒಳಸೇರಿದಳು ಯಮುನಾ. ಹಾಸುಗೆಯ ಮೇಲೊರಗಿಕೊಂಡು ಸಿಗರೇಟು ಸೇದುತ್ತಿದ್ದ ಸಿದರಾ

ಯಪ್ಪ ಆಶ್ಚರ್ಯ–ಸಂಶಯ ಬೆರೆತ ಧ್ವನಿಯಲ್ಲಿ ಕೇಳಿದ:

"ಯಾರು ಯಮುನಾ ಆ ರಾಮು ಅಂದರ ?"

ಏನಾದರೊಂದು ಸುಳ್ಳು ಹೇಳಿ ಆ ಪ್ರಸಂಗದಿಂದ ತಪ್ಪಿಸಿಕೊಳ್ಳಲು ಬರುವಂತಿದ್ದಿತಾದರೂ ಸುಳ್ಳು ಹೇಳಲು ಆಕೆಯ ಮನಸ್ಸೊಪ್ಪಲಿಲ್ಲ. ನಿಜ ವಿಷಯವನ್ನೇ ಅರುಹಿದಳು:

"ಅವ ನಮ್ಮೂರವ. ಮನ್ನೆ ಮನ್ನೆ ಇಲ್ಲಿಗೆ ಬಂದಾನ."

"ನಿನಗೂ ಅವಗೂ ಏನಾದರೂ ಸಂಬಂಧ ಐತೇನು ?"

ಆ ಪ್ರಶ್ನೆಗೆ ಅವಳೇನು ಉತ್ತರವೀಯಬೇಕು ? ಆತನಿಗೂ ತನಗೂ ಯಾವ ಸಂಬಂಧವೂ ಇಲ್ಲ, ಯಾವ ನಂಟೂ ಇಲ್ಲ. ಆದರೂ ಆತ ತನಗೆ ತೀರ ಆತ್ಮೀಯನಾಗಿದ್ದಾನೆ ತನ್ನ ಹೃದಯದಲ್ಲಿ ಆತನಿಗಿರುವ ಸ್ಥಾನ ಬಹಳ ದೊಡ್ಡದು. ಬೇರಾರೂ ಅದನ್ನಾಕ್ರಮಿಸುವಂತಿಲ್ಲ. ತನಗೇನಾಗಬೇಕು ಆತ ? ಎಂಥ ಪ್ರಶ್ನೆ !

"ಹಾಂಗ ಸಂಬಂಧ ಏನೂ ಇಲ್ಲ. ಇಬ್ಬರೂ ಕೂಡೇ ಬೆಳೆದವರು. ಇಬ್ಬರೂ ಕೂಡಿ ದನಾ ಕಾಯುತಿದ್ದಿವಿ."

ಸಿದರಾಯಪ್ಪನಿಗೆ ಕೊಂಚ ನಗೆ ಬಂದಿತು. ಆತನೆಂದ:

"ಹೀಂಗೇನು ? ಸರಿ. ಸರಿ. ಅವನ್ನ ಮನೆಯೊಳಗ ಮಾತ್ರ ಸೇರಿ ಸಿಕೋ ಬ್ಯಾಡ ಅಂದರಾಯ್ತು ಇಲ್ಲೇನು ಮಾಡುತಾನ ಆ ದನಗಾಹಿ ?"

"ಪ್ಯಾಟ್ಯಾಗ ಕೂಲಿ ಮಾಡುತಾನ."

"ದನಾ ಕಾಯುವವ ಕೂಲಿ ಮಾಡದೆ ಇನ್ನೇನು ಮಾಡಿಯಾನು ? ಹೋಗಲಿ ಬಿಡು. ನೀ ಮಾತ್ರ ಅವನಿಂದ ದೂರs ಇರು" ಎಂದು ಹೇಳಿ ಆತ ಆ ವಿಷಯವನ್ನು ಅಲ್ಲಿಗೇ ಬಿಟ್ಟುಕೊಟ್ಟ.

ಸಿದರಾಯಪ್ಪ ಆ ವಿಷಯ ನಿಲ್ಲಿಸಿದರೂ ಯಮುನಳ ಮನಸ್ಸು ಮಾತ್ರ ಆ ರಾತ್ರಿಯೆಲ್ಲ ಅದನ್ನೇ ಕುರಿತು ಯೋಚಿಸುತ್ತಿತ್ತು. ತನ್ನ ರಾಮು, ತನ್ನ ಪ್ರೀತಿಯ ರಾಮು ಅದೇ ಓಣಿಯಲ್ಲಿ ಇನ್ನೊಬ್ಬಳ ಜತೆಗೆ ಮಲಗಿಕೊಂಡಿರುವುದು ಅವಳಿಗೆ ಸಹಿಸಲಸಾಧ್ಯವಾಗಿದ್ದಿತು. ರಾತ್ರಿಯೆಲ್ಲ ನಿದ್ದೆ ಬರಲಿಲ್ಲ. ಅವಳು ಮತ್ತೆ ಮತ್ತೆ ಮಗ್ಗಲು ಬದಲಿಸುವುದನ್ನು ಒಮ್ಮೆ ಕಂಡ ಸಿದರಾಯಪ್ಪ— "ಯಾಕ ಯಮುನಾ ? ಏನಾಯ್ತು ? ನಿದ್ದೆ ಬರಲೊಲ್ಲದೇನು ?" ಎಂದು

ಕೇಳಿದ. ಆಕೆ ಉತ್ತರವೀಯಲಿಲ್ಲ. ನಿದ್ರೆಯಲ್ಲಿದ್ದವಳಂತೆ ನಟಿಸುತ್ತ ಸುಮ್ಮನೆ ಬಿದ್ದುಕೊಂಡಿದ್ದಳು.

ಮಾರನೆಯ ದಿನ ಶಿವರಾಯಪ್ಪ ಹೊರಗಡೆ ಹೋದ ಸಂಧಿ ಸಾಧಿಸಿ ಯಮುನಾ ಯಶೋದಳ ಮನೆಗೆ ಹೋಗಿ—"ನನ್ನ ಮನಷ್ಯಾನ್ನ ನೀಹ್ಯಾಂಗ ಕರಕೊಂಡಿಯೇ ?" ಎಂದು ಕೇಳಿದಳು.

ಯಶೋದಾ ಕಣ್ಣು ಕೆರಳಿಸಿ ಉತ್ತರವಿತ್ತಳು:

"ನಿನ್ನ ಮನುಷ್ಯಾ! ಏನು, ಅವನ ಮದುವಿಯು ಹೇಣತಿ ಇದ್ದಂಗs ಮಾತಾಡುತೀಯಲ್ಲ? ತಾನಾಗಿ ಬಂದವಗ ಬ್ಯಾಡ ನಡೀ ಅನ್ನಾಕ ಬರುತೈತೇನು? ರೊಕ್ಕ ಕೊಟ್ಟು ಎಷ್ಟೋ ಮಂದಿ ಬರುತಾರ, ಹೋಗುತಾರ. ಅವನೂ ಬಂದ. ನಂದೇನು ತಪ್ಪೈತಿ ಇದರಾಗ?"

"ಹೌದು. ಇವಳದೇನು ತಪ್ಪಿಲ್ಲ," ಎಂದುಕೊಂಡಳು ಯಮುನಾ. ಪಡಸಾಲೆಯ ಗೋಡೆಗೊರಗಿ ಕುಳಿತು ಬಿಕ್ಕಿಬಿಕ್ಕಿ ಅತ್ತಳು. ಅವಳು ಅಳುವುದನ್ನು ಕಂಡಾಗ ಯಶೋದಳಿಗೂ ವ್ಯಥೆಯಾಯಿತು. ತಾನು ಹಾಗೆ ಮಾತನಾಡಬಾರದಾಗಿದ್ದಿತು. ತನ್ನದು ತಪ್ಪಾಯಿತು— ಎಂದು ಮನಸ್ಸಿನಲ್ಲೇ ಹೇಳಿಕೊಂಡು, ಯಮುನಳನ್ನು ಸಂತವಿಸುತ್ತ—

"ಕಣ್ಣೀರು ಯಾಕ ಹಾಕುತೀಯವ್ವ? ನೀ ಬ್ಯಾಡಾ ಅಂದರ ಇನ್ನೊಮ್ಮೆ ಅವನ್ನ ಕರಕೊಳ್ಳುವದಿಲ್ಲ ನಾ. ನನಗೇನೇ? ಅವ ಇಲ್ಲದಿದ್ದರ ಇನ್ನೊಬ್ಬಾವ ಸಿಕ್ಯಾನು. ಬಿಡು ಬಿಡು. ಅಳೂದು ಯಾಕ?" ಎಂದಳು.

"ಹುಟ್ಟಿದಾಗಿಂದ ಇಲ್ಲೀತನಕ ಬರೀ ಅಳೂದೇ ಆಗೈತಿ ನನ್ನ ಬಾಳು ಯಶೋದಾ."

"ಸಮಾಧಾನ ಮಾಡಿಕೋ ಅವ್ವ. ನಿನಗೇನು ಕಡಿಮಿಯಾಗೈತಿ ಈಗ? ಆರಾಮಾಗಿ ಇದ್ದೀಯಲ್ಲಾ? ನಿನ್ನಂಥಾ ಯಜಮಾನ ಎಲ್ಲಾರಿಗೂ ಸಿಗೂದಿಲ್ಲ."

"ಏನು ಆರಾಮೊ, ಏನು ಯಜಮಾನನೊ. ಎಲ್ಲಾ ಬ್ಯಾಸರಾಗೈತಿ. ಎಲ್ಲಾ ಹೇಸಿಗೆಯಾಗೈತಿ. ನನ್ನ ರಾಮು......ಸಾವುಕಾರನ್ನ ಬಿಟ್ಟು ಅವನ ಸಂಗಡಲೇ ಇರಬೇಕಂತ ಮಾಡೀನಿ. ಏನಂತೀ?"

"ನಿನಗ ಹೆಂಗ ತಿಳೀತೈತ್ಯೋ ಹಂಗ ಮಾಡು."

"ರಾತ್ರಿ ನಿನ್ನ ಹತ್ತರ ಅವ ಬಂದರ ನಾ ಕರದೀನಿ ಅಂತ ಹೇಳಿ ಕಳಿಸಿ ಕೊಡವ್ವ."

"ಹೂಂ. ಹೇಳುತೀನಿ. ಆದರ ಸಾವುಕಾರ ಇರತಾನಲ್ಲ ನಿನ್ನ ಮನಿ ಯಾಗ? ಹೆಂಗ ಮಾಡುತೀ?"

"ಏನಾರ ಮಾಡುತೀನಿ. ನೀ ಹೇಳು ಅವಗ."

ರಾತ್ರಿ ರಾಮು ಬರುತ್ತಲೂ ಯಶೋದಾ ಯಮುನಳ ಸಂದೇಶವನ್ನು ಆತನಿಗೆ ಮುಟ್ಟಿಸಿದಳು.

"ಆಕಿಯ ಆ ಗೆಣ್ಯಾ ಅದಾನೇನ ಮನಿಯಾಗ?"

"ಇದಾನ."

"ಅವ ಅಲ್ಲಿ ಇರುವಾಗ ನನ್ನ ತಗೊಂಡೇನು ಮಾಡುತಾಳ ಆಕಿ? ಅವನ ಕೈಗೆ ನನ್ನ ಹಾಕಿ ಮೈಮುರಿ ಬಡಿಸಬೇಕಂತ ಮಾಡ್ಯಾಳೋ ಏನು? ಹಿಂದೊಮ್ಮೆ ಇವಳ ಸಂಗ ಮಾಡಿ ಗೌಡರಿಂದ ಹೊಡಿಸಿಕೊಂಡು ಹದಿನೈದು ದಿನ ಸಾಯುತಾ ಬಿದ್ದಿದ್ದಿನಿ. ಇನ್ನೂ ಆ ನೋವು ಹೋಗಿಲ್ಲ," ಎಂದು ರಾಮು ಯಶೋದಳನ್ನು ತೀಕ್ಷ್ಣವಾಗಿ ದಿಟ್ಟಿಸುತ್ತ— "ಯಾಕ? ನಿನಗೂ ಬ್ಯಾಡಾ ದೆನೇನು ನಾ? ಹಾಂಗಿದ್ದರ ಹೇಳಿ ಬಿಡು. ಇನ್ನು ಮ್ಯಾಲ ಎಂದೆಂದೂ ಈ ಓಣಿಯೊಳಗ ಕಾಲಿಡೂದಿಲ್ಲ. ಹೆಂಗಸ ರಂಡೇರ ಸಂಗಾನೇ ಮಾಡೂ ದಿಲ್ಲ," ಎಂದ.

ಯಶೋದಾ ಅವನನ್ನು ತಬ್ಬಿಕೊಂಡು ನುಡಿದಳು:

"ನೀ ಯಾಕ ಬ್ಯಾಡ ಆದೀ ನನಗ ನನ್ನ ಸರದಾರಾ!"

## ತೆರೆ: ಆರು.

ಒಂದೆರಡು ವಾರ ಹಾಗೆ ಕಳೆದ ಬಳಿಕ ತನ್ನ ತೊಡೆಗಳ ಸಂದುಗಳಲ್ಲಿ ಏನೋ ನೋವು ತಲೆದೋರಿದಂತಾಯಿತು ರಾಮುನಿಗೆ. ಅಂಥ ನೋವನ್ನೆಲ್ಲ ಗಮನಿಸುವ ಸ್ವಭಾವವಲ್ಲ ಆತನದು. "ಏನೋ ಇದ್ದೀತು ಬಿಡು. ತಂತಾನೇ ಹೋದೀತು" ಎಂದುಕೊಂಡು ಕೆಲಸ ಮಾಡುತ್ತಲೇ ಇದ್ದ. ಅದು ಮಾತ್ರ "ತಂತಾನೇ" ಹೋಗಲಿಲ್ಲ. ದಿನಗಳುರುಳಿದ ಹಾಗೆಲ್ಲ ಕ್ರಮೇಣವಾಗಿ

ಹೆಚ್ಚುತ್ತ ಬಂದಿತು. ಭೀಕರ ನೋವು. ಅಂಥ ನೋವನ್ನು ಈ ಮೊದಲೆಂದೂ ಆತ ಅನುಭವಿಸಿರಲಿಲ್ಲ. ಇದೆಂಥ ರೋಗ? ಎಂದು ಯೋಚಿಸಿದ. ಏನೂ ಹೊಳೆಯಲಿಲ್ಲ

ಹಣಮನೆದುರಿಗೆ ಆ ವಿಷಯವೆತ್ತಿದಾಗ ಆತ ನಕ್ಕು— "ಅದೇನು ದೊಡ್ಡದು ಬಿಡೋ. ಎಲ್ಲಾರಿಗೂ ಆಗುತೈತಿ. ಇಷ್ಟ್ಯಾಕ ಗಾಬರಿ ಆಗಿದ್ದೀ? ಗಂಟಲ ತನಕ ಕುಡಿದುಬಿಟ್ಟು ಆರಾಮಾಗಿ ಮಲಗಿ ಬಿಡು. ಎಲ್ಲಾ ಮಾಯ ಆಗುತೈತಿ," ಎಂದು ಹೇಳಿದ.

"ಅಗಸುದ್ದಿ ತಗೊಳ್ಳಲೇನು ಹಣಮಣ್ಣಾ?"

"ಅದಕ್ಕೆಲ್ಲ ಯಾತಕ ಅಗಸುದ್ದೇನೋ ಮಳ್ಳs!"

ನೋವು ಕಡಮೆಯಾಗಲಿಲ್ಲ. ಇನ್ನೂ ವಿಪರೀತಕ್ಕೇರಿತು. ಹೆಜ್ಜೆಯಿಡುವುದೇ ಅಸಾಧ್ಯವಾಯಿತು ಮೈ, ಕೈ, ತಲೆ ಎಲ್ಲವೂ ನೋಯಿಸತೊಡಗಿತು. ಮೈಯಲ್ಲಿ ಜ್ವರವೂ ಬಂದಂತಾಯಿತು. ರಾಮು ಗಾಬರಿಗೊಂಡು, ನಗರ ಸಭೆಯ ಆಸ್ಪತ್ರೆಗೆ ಹೋಗಿ ಡಾಕ್ಟರನ್ನು ಕಂಡ. ಅವರು ಪರೀಕ್ಷಿಸಿ ತಿರಸ್ಕಾರ ಮಿಶ್ರಿತ ನಗೆ ಬೀರಿ, ಕುಡಿಯಲು ದ್ರಾವಕ ಕೊಟ್ಟು, ಗಾಯಕ್ಕೆ ಮುಲಾಮು ಹಚ್ಚಿ ಕಳುಹಿಸಿದರು.

ಅಂದು ಕೂಲಿ ಮಾಡಲು ಸಾಧ್ಯವಾಗಲಿಲ್ಲ. ಕುಳಿತುಕೊಳ್ಳುವುದಕ್ಕೂ ಚೇತನವಿಲ್ಲದಿರುವಾಗ ಕೆಲಸ ಮಾಡುವುದೆಂತು ಸಾಧ್ಯ? ಪೇಟೆಯಲ್ಲಿ ಭಾರಿ ಗದ್ದಲ. ಅಂಗಡಿಗಳೆದುರಿಗೆ ವಿರಮಿಸುವಂತಿರಲಿಲ್ಲ. ಎಲ್ಲಿಗಾದರೂ ಹೋಗಿ ಬಿದ್ದುಕೊಳ್ಳಬೇಕೆಂದು ಮೈ ಮನಸುಗಳೆರಡೂ ಹಾತೊರೆಯುತ್ತಿದ್ದುವು. ಎಲ್ಲಿಗೆ ಹೋಗುವುದು? ಜೇಬಿನಲ್ಲಿ ಒಂದು ಕಾಸೂ ಇರಲಿಲ್ಲ. ಹಣವಿದ್ದರೆ ಮಾತ್ರ ತನ್ನನ್ನು ಮನೆಗೆ ಸೇರಿಸಿಕೊಂಡಾಳು ಯಶೋದಾ. ಯಮುನಳ ಮನೆಗೆ ಹೋಗುವುದೇ? ಯಮುನಾ....ಯಾವ ಮೋರೆಯಿಂದ ಅವಳನ್ನು ಕಾಣುವುದು? ಅಲ್ಲದೆ ಅವಳ ಆ ಯಜಮಾನ ಬೇರೆ ಅಲ್ಲೇ ಇರುವನಲ್ಲ? ತನ್ನನ್ನು ಮನೆಗೆ ಸೇರಿಸುವಂತಿಲ್ಲ ಆಕೆ....

ತುಂಬಾ ಕಷ್ಟದಿಂದ ಕಾಲು ಎತ್ತಿ ಇಡುತ್ತ ಬರುತ್ತಿದ್ದ ರಾಮು. ನಡು ಹಗಲಿನ ಬಿಸಿಲು ತಲೆಯನ್ನು ಸುಡುತ್ತಿತ್ತು. ಬಾಯಿ ಆರಿ ತುಂಬ ದಾಹವಾಗಿದ್ದಿತು. ಚಹದಂಗಡಿಯೊಂದರ ಎದುರಿಗೆ ನಿಂತುಕೊಂಡು ಕುಡಿಯಲು ನೀರು

ಕೇಳಿದ. ಈತ ಯಾರೋ ಭಿಕಾರಿಯಿರಬಹುದೆಂದು ತಿಳಿದು ಅಂಗಡಿಯ ಹುಡುಗ ಒಂದು ಕಪ್ಪು ನೀರು ಕೊಟ್ಟ. ಆದರಿಂದ ದಾಹ ತಣಿಯಲಿಲ್ಲ. ಇನ್ನೊಂದು ಕಪ್ಪು ಕೇಳಿದ. ಕುಡಿದ. ಮೆಲ್ಲಗೆ ಅಲ್ಲಿಂದ ಹೊರಟ. ಬಹು ದೂರ ನಡೆದು ಹೋಗಲಾಗಲಿಲ್ಲ. ಕಣ್ಣುಗಳೆದುರಿಗೆ ಕತ್ತಲೆ ಕವಿದಂತಾಯಿತು. ಹತ್ತಿರದಲ್ಲಿಯೇ ಒಂದು ದೇವಾಲಯ. ಅದರೆದುರಿಗೊಂದು ಬೇವಿನ ಗಿಡ. ನೆರಳಿಗಾದರೂ ಬಂದೆನಲ್ಲ— ಎಂದು ಏನೋ ಕೊಂಚ ಸಮಾಧಾನವಾಯಿತು. “ಅಯ್ಯೋ ಅವ್ವಾ” ಎಂದು ನರಳುತ್ತ, ನೆಲದ ಮೇಲೆ ದೇಹವನ್ನೊರಗಿಸಿದ.

ಮತ್ತೆ ಆತನಿಗೆ ತಿಳಿವು ಬಂದಾಗ ರಾತ್ರಿಯಾಗಿದ್ದಿತು. ಸುತ್ತಮುತ್ತಲಿನ ಮನೆ, ಅಂಗಡಿಗಳ ಬಾಗಿಲು ಮುಚ್ಚಿಕೊಂಡಿದ್ದುವು. ದೂರದಲ್ಲಿ ಬೀದಿ ದೀಪವೊಂದು ಮಿಣುಕುತ್ತಲಿದ್ದಿತು. ಆಕಾಶದಲ್ಲಿ ಕಪ್ಪುಮೋಡಗಳ ಹಿಂಡು. ತಾರೆಗಳ ಸುಳಿವಿರಲಿಲ್ಲ.

ರಾಮನಿಗೆ ಏನೋ ನೆನಪು ಬಂದಿತು. ಯಾರದೋ ಮುಖ ಕಣ್ಣೆದುರಿಗೆ ಕಾಣಿಸಿತು. ಅವನ ಕಣ್ಣಂಚಿನಿಂದ ಎರಡು ತೊಟ್ಟು ನೀರು ಜಾರಿ ಬಿದ್ದುವು. ದುರ್ಬಲವಾಗಿದ್ದ ಕೈಯನ್ನೆತ್ತಿ ಹಣೆಯ ಮೇಲೂ ಎದೆಯ ಮೇಲೂ ಓಡಿಯಾಡಿಸಿದ. ಜ್ವರ....ಭಯಂಕರ ಜ್ವರ....“ನಾ ಇಲ್ಲಿ ಹೀಂಗ ಸಾಯುತಾ ಬಿದ್ದೀನಿ. ಅಲ್ಲಿ ಅವಳು ಗಾದೀಮ್ಯಾಲ ತನ್ನ ಗೆಣ್ಯಾನ ಸಂಗಡ ಬೆಚ್ಚರ ಮಲಗಿರಬೇಕು ರಂಡಿ....” ಎಂದು ಗೊಣಗುತ್ತಾ ಮೇಲಕ್ಕೇಳಲು ಪ್ರಯತ್ನಿಸಿದ. ಏಳಲಾಗಲಿಲ್ಲ. “ಥೂ ಇವನಪ್ಪನ” ಎನ್ನುತ್ತಾ ಮತ್ತೆ ಬಿದ್ದುಕೊಂಡ. ಕೊಂಚ ದೂರದಲ್ಲಿದ್ದ ಮಾರುಕಟ್ಟೆಯ ಗೋಪುರದ ಗಡಿಯಾರ ಹನ್ನೆರಡು ಗಂಟೆಯನ್ನು ಘೋಷಿಸಿತು. “ಎಲಾ ಇವನ, ಸರವತ್ತಾಗೈತೇನು ? ಇಲ್ಲೇ ಬಿದ್ದುಕೊಂಡರ ಸತ್ತೇ ಹೋಗುತ್ತೀನೋ ಏನೊ. ಅವಳ ಮುಂದಾದರೂ ಹೋಗಿ ಬೀಳುತೀನಿ. ಹೆಣಾ ಆದರೂ ಮಣ್ಣುಗಹಾಕ್ಯಾಳು” ಎಂದುಕೊಳ್ಳುತ್ತ ಮತ್ತೆ ಮೇಲಕ್ಕೆದ್ದು ನಿಂತ. ಅಲ್ಲಿಯ ತನಕ ಹೋಗಿಯೇ ತೀರುವುದೆಂಬ ಸಂಕಲ್ಪ ಅವನನ್ನು ಹೇಗೋ ನಡಸಿಕೊಂಡು ಹೋಯಿತು. ಆ ಓಣಿಯ ತನಕ ಬಂದುದೂ ಆಯಿತು. ಅಲ್ಲಿಯೂ ಬಾಗಿಲುಗಳೆಲ್ಲ ಮುಚ್ಚಿಕೊಂಡಿದ್ದುವು ಯಮುಳನ್ನು ಕೂಗಿ ಎಚ್ಚರಗೊಳಿಸಬೇಕಾಗಿದ್ದಿತು. ಬಾಯಿ

ತೆರೆದ. ನಾಲಗೆ ಮೇಲಕ್ಕೇಳಲಿಲ್ಲ. "ಯಮುನೀ," ಎಂದು ಆರ್ತಸ್ವರದಲ್ಲಿ ಕೂಗಿಕೊಂಡು ಅವಳ ಮನೆಯೆದುರಿಗೆ ಬಿದ್ದುಬಿಟ್ಟ. ದೂರದಲ್ಲಿ ಮಲಗಿದ್ದ ನಾಯಿಯೊಂದನ್ನುಳಿದು ಇನ್ನಾರನ್ನೂ ಎಚ್ಚರುಗೊಳಿಸಲಿಲ್ಲ ಆ ಕೂಗು. ಕೊಂಚ ಹೊತ್ತು ಹಾಗೆಯೆ ಬಿದ್ದುಕೊಂಡಿದ್ದು ಮತ್ತೆ ಧ್ವನಿಯೆತ್ತಿ ಕೂಗಿದ. ಈ ಸಲ ಇನ್ನೂ ಕುಗ್ಗಿದ ಧ್ವನಿ. ನಾಯಿ ಮುಖವನ್ನೆತ್ತಿ ಒಂದು ಸಲ ಬಗುಳಿತು. ಹತ್ತಿರದಲ್ಲೆಲ್ಲೋ ಕುಳಿತಿದ್ದ ಬೆಕ್ಕು ಬೆದರಿ ಗುರ್‌ರ್‌ರ್‌ ಎನ್ನುತ್ತಾ ಓಡಿಹೋಗಿ ಮನೆ ಸೇರಿಕೊಂಡಿತು. ಯಾರೂ ಎಚ್ಚರುಗೊಳ್ಳಲಿಲ್ಲ. ಯಾರ ಮನೆಯ ಬಾಗಿಲೂ ತೆರೆಯಲಿಲ್ಲ. "ಯಮುನೀ, ಅಯ್ಯೋ ಯಮುನೀ?" ಎಂದು ನರಳುತ್ತ, ನೆಲದ ಮೇಲೆ ಮುಖವನ್ನು ತಿಕ್ಕುತ್ತ ಬಿದ್ದುಕೊಂಡಿದ್ದ ರಾಮು. ಅಂಗಳದಲ್ಲಿ ಸೂರೆಯಾಗಿದ್ದ ಉಗುಳು ಮುಖಕ್ಕೆಲ್ಲ ಅಂಟಿಕೊಂಡಿತು. ಕಣ್ಣುಗಳಲ್ಲಿ ಮಣ್ಣು ಸೇರಿತು. ತನ್ನಲ್ಲಿ ಉಳಿದಿದ್ದ ಶಕ್ತಿಯನ್ನೆಲ್ಲ ಉಪಯೋಗಿಸಿ ಮತ್ತೊಮ್ಮೆ ಕೂಗಿದ.

ಯಜಮಾನನ ತೋಳತೆಕ್ಕೆಯಲ್ಲಿ ಪವಡಿಸಿದ್ದ ಯಮುನಳಿಗೆ ಎಚ್ಚರವಾಯಿತು. ಯಾರೋ ತನ್ನನ್ನು ಕೂಗುತ್ತಿರುವರೆಂಬುದರ ಅರಿವಾಗುತ್ತಲೂ ಆಕೆ ಕಡ್ಡಿ ಗೀಚಿ ದೀಪ ಹಚ್ಚಿ ಹಾಸುಗೆಯಿಂದ ಏಳುತ್ತಿದ್ದ ಹಾಗೆ ಸಿದರಾಮಪ್ಪನಿಗೂ ಎಚ್ಚರವಾಯಿತು. "ಯಾಕ ಯಮುನಾ ಎದ್ದುಬಿಟ್ಟ? ಎಲ್ಲಿಗೆ ಹೊಂಟಿ?" ಎನ್ನುತ್ತ ಆತನೂ ಎದ್ದು ಕುಳಿತ.

"ಯಾರೋ ಕರದಂಗಾತು. ನೋಡುತೀನಿ."

ಆತ ಅವಳ ಕೈಹಿಡಿದು ಎಳೆದುಕೊಂಡು ಒತ್ತಾಯದಿಂದ ಹಾಸುಗೆಯ ಮೇಲೊರಗಿಸುತ್ತ—

"ಇಂಥಾ ರಾತ್ರ್ಯಾಗ ಯಾರು ಕರೀತಾರೇಳು ಹುಚ್ಚೀ. ಎಲ್ಲೋ ಕನಸು ಬಿದ್ದಿದ್ದೀತು. ಸುಮ್ಮನ ಮಲಗಿಕೋ," ಎಂದು ಹೇಳಿ ದೀಪ ಆರಿಸಿಬಿಟ್ಟ.

ರಾಮು ಪುನಃ ಅವಳನ್ನು ಕೂಗಲಿಲ್ಲ. ಕೂಗಲು ತ್ರಾಣವೇ ಉಳಿದಿರಲಿಲ್ಲ ಆತನ ಕಂಠದಲ್ಲಿ.

ಒಂದೆರಡು ಗಂಟೆಗಳ ವರೆಗೆ ಆತ ಹಾಗೆಯೆ ಬಿದ್ದುಕೊಂಡಿದ್ದ. ಅಷ್ಟರಲ್ಲಿ ರಾತ್ರಿಯೆ ಆಲೆದಾಟದಿಂದ ಮನೆಗೆ ಮರಳಿದ ಬಾಬು ಓಣಿಯಲ್ಲಿ ಬಿದ್ದಿದ್ದ

ಆ ದೇಹವನ್ನು ಕಂಡು, ಘಾತಿಮಳನ್ನು ಕೂಗಿ ಬಾಗಿಲು ತೆಗೆಸಿ ಆತನನು ಹೊತ್ತುಕೊಂಡೊಯ್ದು ಮಲಗಿಸಿದ. ಕಾಯ್ದ ಗಾಜಿನಂತೆ ಸುಡುತ್ತಿತ್ತು ರಾಮನ ಶರೀರ. "ಪಾಪ, ಯಾವಾಗ ಬಂದು ಬಿದ್ದಾನೋ ಏನೊ. ಯಾರೂ ನೋಡಿದಂಗ ಕಾಣೂದಿಲ್ಲ. ಜ್ವರ ಭಯಂಕರ ಐತಿ," ಎಂದು ಮರುಕ ಸೂಚಿಸುತ್ತ ಬಾಬು ತಾನೂ ಮಲಗಿ ನಿದ್ದೆ ಹೋದ.

ಬೆಳಗಾಯಿತು. ಜ್ವರ ಕಡಮೆಯಾಗಲಿಲ್ಲ. ರಾಮನಿಗೆ ಪ್ರಜ್ಞೆಯೂ ಇರಲಿಲ್ಲ. ಬಾಬು ಯಮುನಳನ್ನು ಕೂಗಿ ಕರೆದ. ಸಿದರಾಯಪ್ಪ ಆಗ ತಾನೆ ಊರಿಗೆ ಹೊರಟುಹೋಗಿದ್ದನಾದುದರಿಂದ ಅವಳನ್ನು ಯಾರೂ ತಡೆ ಯುವಂತಿರಲಿಲ್ಲ. ಯಮುನಾ ಧಾವಿಸಿ ಬಂದು ರಾಮನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ರೋದಿಸತೊಡಗಿದಳು. ಬಾಬು ಓಡುತ್ತ ಹೋಗಿ ಡಾಕ್ಟರೊಬ್ಬರನ್ನು ಕರೆದು ತಂದ. ಅವರು ಆತನನ್ನು ಪರೀಕ್ಷಿಸಿ ನೋಡಿ, "ರೋಗ ಬಹಳ ಬೆಳೆದು ಹೋಗಿದೆ. ಆಸ್ಪತ್ರೆಗೆ ಹಾಕಿದರೆಮಾತ್ರ ಉಳಿದಾನು," ಎಂದು ಅಭಿಪ್ರಾಯಪಟ್ಟರು.

"ಇವಗ ಯಾರೂ ದಿಕ್ಕಿಲ್ಲ ದಾಕತರ್‌ಸಾಬ. ಇಂಥಾವನ್ನ ಹೆಂಗ ತಗೊಂಡಾರು ಆಸ್ಪತ್ರೆಯೊಳಗ?" ಎಂದ ಬಾಬು.

ಡಾಕ್ಟರು ಭುಜ ಕುಣಿಸಿ ಹೇಳಿದರು: "ಅದಕ್ಕೆ ಯಾರೇನು ಮಾಡ ಬೇಕು? ನಾನು ಬೇಕಿದ್ದರೆ ಇಂಜಕ್ಷನ್ ಕೊಟ್ಟು ಪ್ರಯತ್ನಿಸಿ ನೋಡುತ್ತೇನೆ. ಇದು ಬಹಳ ಕೆಟ್ಟ ರೋಗ. ಔಷಧಕ್ಕೆ ನೂರಾರು ರೂಪಾಯಿ ಖರ್ಚು ಬರುತ್ತದೆ ಇವನ ಆರೈಕೆಗೂ ಒಬ್ಬರು ಬೇಕು."

"ರೊಕ್ಕದ ಚಿಂತೀ ಮಾಡಬ್ಯಾಡ್ರಿ ದಾಕತರ್‌ಸಾಬ್. ಔಗಸುದ್ದೇ ಕೊಡಿರಿ ನಾ ಇವನ್ನ ನೋಡಿಕೊಂತೀನಿ," ಎಂದಳು ಯಮುನಾ.

ಡಾಕ್ಟರು ಚಕಿತರಾಗಿ ಅವಳನ್ನು ದಿಟ್ಟಿಸಿ ನೋಡಿ, ಬಾಬುವಿನ ಕಡೆ ಹೊರಳಿ ಕೇಳಿದರು:

"ಈಕೆ ಇವನಿಗೇನಾಗಬೇಕು?"

"ಹೀಂಗs ಸಂಬಂಧ."

ಡಾಕ್ಟರಿಗೆ ಅರ್ಥವಾಯಿತು. ಅವರು ಮುಗುಳ್ನಗೆ ನಕ್ಕು ಸುಮ್ಮನಾ ದರು.

ಅಷ್ಟು ಹೊತ್ತಿಗೆ ಹಣಮನೂ ಎದ್ದು ಅಲ್ಲಿಗೆ ಬಂದ. ಇಬ್ಬರೂ ಸೇರಿ ರಾಮನನ್ನು ಮೆಲ್ಲಗೆ ಎತ್ತಿಕೊಂಡೊಯ್ದು ಯಮುನಳ ಮನೆಯಲ್ಲಿ ಗಾದಿಯ ಮೇಲೆ ಮಲಗಿಸಿದರು. ಸೂಜಿಮದ್ದು ಕೊಟ್ಟು, ಗಾಯಕ್ಕೆ ಔಷಧಿ ಕಳುಹಿಸುವುದಾಗಿ ಹೇಳಿ ಡಾಕ್ಟರು ಹೊರಟುಹೋದರು.

"ರೊಕ್ಕಕ್ಕ ಹೆಂಗ ಮಾಡುತೀ ಯಮುನಾ?" ಫಾತಿಮಾ ಕೇಳಿದಳು.

"ಸಾವುಕಾರ್ರು ಕೊಟ್ಟಿದ್ದು ಸ್ವಲ್ಪ ಅದಾವ."

"ಯಾತಕ್ಕ ಸಾಕಾದಾವು ಅವು? ನೂರಾರು ರೂಪಾಯಿ ಬೇಕು ಅಂತ ದಾಕತಾರೇ ಹೇಳಿದರಲ್ಲ?"

"ನೋಡೋಣು. ಏನಾರ ಮಾಡ್ಡಾಕ ಬಂದೀತು.?"

"ಆ ಯಶೋದಿಯ ಹತ್ತರ ಇವನ್ನ ಕಳಿಸಬಾರದಾಗಿತ್ತು. ಅವಳಿಂದಲೇ ಬಂತು ಇವಗ ಈ ಅರಿಷ್ಟ. ನನ್ನಿಂದ ತಪ್ಪಾತು," ಎಂದ ಹಣಮ.

ಯಮುನಾ ಮಾತೇನೂ ಆಡಲಿಲ್ಲ. ದುಃಖದಿಂದ ಅವಳ ಬಾಯಿ ಕಟ್ಟಿದಂತಾಗಿದ್ದಿತು,

"ಮುಂದ ಹೆಂಗ ಮಾಡುವಾಕಿ ಯಮುನಾ? ಸಾವುಕಾರ ಬಂದ ಮ್ಯಾಲ?" ಎಂದು ಕೇಳಿದಳು ಫಾತಿಮಾ.

ಆಗಲೂ ಮೌನದಿಂದಿದ್ದಳು ಯಮುನಾ. ಸಾಹುಕಾರ ಬಂದಮೇಲೆ ಏನಾಗಬಹುದು? ರಾಮನನ್ನು ಇಲ್ಲಿ ಕಂಡು ಆತ ಏನೆನ್ನಬಹುದು? ಬೇರೆ ಯಾರನ್ನೂ ಸೇರಿಸಕೂಡದೆಂದು ಸ್ಪಷ್ಟವಾಗಿ ಹೇಳಿದ್ದಾನೆ ಆತ. ಆತನ ಮಾತನ್ನು ಮೀರಿ ತಾನು ರಾಮನನ್ನು ಇಲ್ಲಿಟ್ಟುಕೊಂಡುದನ್ನು ಕಂಡು ಆತ ಕೋಪಿಸಿಕೊಳ್ಳುವುದು ಖಂಡಿತ. ತನ್ನೊಂದಿಗಿದ್ದ ಸಂಬಂಧವನ್ನು ಮುರಿದು ಬಿಟ್ಟು ಆತ ಹೊರಟು ಹೋಗಬಹುದೋ ಏನೊ........

ಆಕೆ ಊಹಿಸಿಕೊಂಡಿದ್ದಂತೆಯೆ ಆಯಿತು.

ಮೂರು ನಾಲ್ಕು ದಿನಗಳ ತರುವಾಯ ನಗರಕ್ಕೆ ಬಂದ ಸಿದರಾಯಪ್ಪ ಮನೆಯಲ್ಲಿನ ದೃಶ್ಯವನ್ನು ಕಂಡು ಸಿಡಿಮಿಡಿಗೊಂಡ.

"ಯಾರನ್ನೂ ಕರಕೊಳ್ಳಬಾರದಂತ ನಾ ಮೊದಲೇ ಸ್ವಚ್ಛವಾಗಿ ಹೇಳಿದ್ದೆನೊ ಇಲ್ಲೋ? ಇವ ಯಾವ ಬಂದ ಇಲ್ಲಿ?"

ಆತನ ಪಾದಗಳನ್ನು ಹಿಡಿದುಕೊಂಡು ತನ್ನ ಕಂಬನಿಗಳಿಂದ ಅವುಗಳನ್ನು ತೋಯಿಸುತ್ತ ಯಮುನಾ ಹೇಳಿದಳು:

"ಸಿಟ್ಟಾಗಬ್ಯಾಡ್ರಿ. ಇವ ಸಾಯುತಾ ಬಿದ್ದಾನ. ಇವನ್ನ ನೋಡಿಕೊಳ್ಳೂದಕ್ಕ ಯಾರೂ ಇಲ್ಲ. ಈಗ ನಾನೂ ಕೈಬಿಟ್ಟರ ಸತ್ತೇ ಹೋಗುತಾನ."

ಈಗಲೋ ಇನ್ನೊಂದು ಗಳಿಗೆಗೋ ಸಾಯುವಂತಿದ್ದ ಆ ರೋಗಿಯ ಬಗೆಗೆ ಸಿದರಾಯಪ್ಪನಿಗೂ ಕನಿಕರ ಬಂದಿತಾದರೂ ಅಂಥ ರೋಗಿ ಬಿದ್ದಿರುವಾಗ ಅಲ್ಲಿರಲು ಆತನ ರಸಿಕ ಮನಸ್ಸು ಒಪ್ಪದಾಯಿತು.

"ಆಸ್ಪತ್ರಿ ತಗೀಬೇಕಂತ ನಾನೇನೂ ಈ ಮನಿ ಮಾಡಿಲ್ಲ. ರೋಗಿಗಳ ಸಂಗ ಅಂದರ ನನಗಾಗುವದಿಲ್ಲ. ನೀನೇ ಇರು ಇವನ್ನ ನೋಡಿಕೊಂಡು," ಎಂದವನೆ ಆತ ಅಲ್ಲಿ ನಿಲ್ಲದೆ ಹೊರಟು ಹೋದ.

ಫಾತಿಮಾ, ಬಾಬು, ಹಣಮ ಮೊದಲಾದವರೆಲ್ಲ ಸೇರಿ ಆತನನ್ನು ಸಮಾಧಾನಪಡಿಸಿ ಅಲ್ಲಿಯೇ ತಡೆದು ನಿಲ್ಲಿಸಲು ಪ್ರಯತ್ನಿಸಿದರು. ಯಾರ ಮಾತಿಗೂ ಆತ ಕಿವಿಗೊಡಲಿಲ್ಲ. "ಥೂ. ಇಂಥ ಹೇಸಿ ಸಹವಾಸ ನನಗೆ ಬ್ಯಾಡ," ಎಂದು ಹೇಳಿ ಹೊರಟು ಹೋದ

ಮತ್ತೆ ಆತ ಆ ಓಣಿಯಲ್ಲಿ ಅಡಿಯಿರಿಸಲಿಲ್ಲ.

ಒಂದೆರಡು ದಿನಗಳ ವರೆಗೆ ಕಾದು ನೋಡಿದಳು ಯಮುನಾ. ಕೋಪ ವಿಳಿದ ಬಳಿಕ ಸಾಹುಕಾರ ಮತ್ತೆ ತನ್ನಲ್ಲಿಗೆ ಬಂದರೂ ಬರಬಹುದೆಂಬ ಸಣ್ಣ ಆಸೆಯೊಂದು ಉಳಿದಿತ್ತು. ತನ್ನ ಬಗೆಗೆ ಅದೆಷ್ಟು ಪ್ರೀತಿ ವ್ಯಕ್ತಗೊಳಿಸುತ್ತಿದ್ದನಲ್ಲ ಆತ! "ನಿನ್ನಲ್ಲಿ ಸುಖ ಸಿಕ್ಕಷ್ಟು ಇನ್ನಾರಲ್ಲೂ ಸಿಕ್ಕಿರಲಿಲ್ಲ. ನನ್ನ ನಿನ್ನ ಸಂಬಂಧ ಯಾವ ಜನ್ಮದ್ದೋ ಏನೋ," ಎಂದೆಲ್ಲ ಮಾತನಾಡಿದ್ದನಲ್ಲ. ತನ್ನ ಬಗೆಗೆ ಒಂದು ತರದ ಹುಚ್ಚೇ ಹಿಡಿದಂತಿದ್ದಿತು ಆತನಿಗೆ. ಅಂಥವನು ತನ್ನನ್ನು ಒಮ್ಮೆಲೆ ತ್ಯಜಿಸುವುದು ಸಾಧ್ಯವೆ? ಇಂದಿಲ್ಲ ನಾಳೆ ಬಂದಾನು—ಎಂದು ಎಣಿಕೆ ಹಾಕುತ್ತಿದ್ದಳು.

ಒಂದು ವಾರ ಉರುಳಿತು. ಸಿದರಾಯಪ್ಪ ಬರಲಿಲ್ಲ

ಎರಡು ವಾರ. ಒಂದು ತಿಂಗಳು, ಆತ ಇತ್ತ ಸುಳಿಯಲಿಲ್ಲ.

ಆಗ ಮಾತ್ರ ಯಮುನಾ ಅವನ ಆಸೆಯನ್ನು ತ್ಯಜಿಸಲೇಬೇಕಾಯಿತು. ರಾಮುಸಿಗಿನ್ನೂ ಪೂರ್ಣವಾಗಿ ಗುಣವಾಗಿರಲಿಲ್ಲ. ಆತನ ಔಷಧ, ಇಂಜಕ್ಷನ್ನು ಗಳಿಗಾಗಿ ವಾರವಾರವೂ ಹಣ ತೆರಬೇಕಾಗುತ್ತಿದ್ದಿತು. ಅವಳ ಬಳಿಯಿದ್ದ ಅಲ್ಪ ಹಣವೆಲ್ಲ ಯಾವಾಗಲೋ ಮುಗಿದು ಹೋಗಿದ್ದಿತು. ಇನ್ನು ಬೇರೆ ವಿಚಾರ ಮಾಡಬೇಕು. ದುಡಿಯಬೇಕು. ಹೌದು. ಯಶೋದಾ, ಸಾವಿತ್ರಿ, ಫಾತಿಮಾ, ಮಲ್ಲಿ ಮೊದಲಾದವರಂತೆ ತಾನೂ ದುಡಿಯಬೇಕು. ಅವರೆಲ್ಲರೂ ಒಬ್ಬೊಬ್ಬ ಪ್ರಿಯಕರನನ್ನಿಟ್ಟುಕೊಂಡಿದ್ದಾರೆ. ಅವರಿಂದ ಹಣ ಬಂದರೂ ನಡೆಯುತ್ತದೆ, ಬರದಿದ್ದರೂ ನಡೆಯುತ್ತದೆ. ಬೇರೆ ಗಿರಾಕಿಗಳನ್ನು ಕರೆದು ಕೊಂಡು ಸಂಪಾದನೆ ಮಾಡುತ್ತಾರೆ ತಾನೂ ಅವರಂತೆಯೆ ಮಾಡಬೇಕಾ ಯಿತು. ರಾಮುನನ್ನು ಅಡುಗೆಯ ಮನೆಯಲ್ಲಿ ಮಲಗಿಸಬೇಕು. ಹೊರಗಿನ ಕೊಟಡಿಯಲ್ಲಿ ತನ್ನ ದುಡಿತ ನಡೆಯಬೇಕು. ದಿನವೂ ಒಂದೆರಡು ರೂಪಾಯಿ ಯಾದರೂ ಸಿಕ್ಕಬಹುದು. ಅಷ್ಟರಲ್ಲಿಯೆ ರಾಮುನ ಔಷಧದ ಖರ್ಚು ಸಾಗುವ ವಲ್ಲದೆ ಹೊಟ್ಟೆಯನ್ನೂ ತುಂಬಿಸಿಕೊಳ್ಳಬೇಕು.

ಅಂದಿನಿಂದ ಅವಳ ದುಡಿತಕ್ಕಾರಂಭವಾಯಿತು. ಸೂಳೆಗಾರಿಕೆಯ ಸಂಕಟದ ಪ್ರತ್ಯಕ್ಷ ಅನುಭವ ಈಗ ಅವಳಿಗಾಗತೊಡಗಿತು. ಅದುವರೆಗೆ ಒಬ್ಬನೇ ಒಬ್ಬ ಯಜಮಾನನಿದ್ದ, ಆತ ಒಳ್ಳೆಯವನೂ ಆಗಿದ್ದ. ಊಟ, ತಿಂಡಿ, ಹಣ ಯಾವುದಕ್ಕೂ ಕೊರತೆಯಿರಲಿಲ್ಲ, ಇತರ ಸೂಳೆಯರಂತೆ ಮನೆ ಯೆದುರಿಗೆ ಕುಳಿತು ಗಿರಾಕಿಗಳಿಗಾಗಿ ಆಸೆಯಿಂದ ದಾರಿ ಕಾಯುವ ಅವಶ್ಯಕತೆ ಯಿರಲಿಲ್ಲ. ಬೇರೆ ಬೇರೆ ವಯಸ್ಸಿನ, ಬೇರೆ ಬೇರೆ ಮನೋವೃತ್ತಿಯ ಜನ ರೊಂದಿಗೆ ಸಂಗ ಮಾಡಬೇಕಾಗಿ ಬಂದಿರಲಿಲ್ಲ. ಕುಡಿದು ತೂಗಾಡುತ್ತ ಬರುವವರು, ಹಲವಾರು ರೋಗಗಳಿಂದ ದೇಹ ಕೆಡಿಸಿಕೊಂಡವರು, ತಿಂಗಳೆ ರಡು ತಿಂಗಳು ಸ್ನಾನವಿಲ್ಲದೆ ಹೊಲಸು ನಾರುವವರೇ ಮೊದಲಾದವರೊಂದಿಗೆ ಮಲಗುವ ಪ್ರಸಂಗ ಬಂದಿರಲಿಲ್ಲ. ಈಗ ಅದೆಲ್ಲವನ್ನೂ ಅನುಭವಿಸಬೇಕಾಗಿ ಬಂದಿತು. ಒಂದೊಂದು ರಾತ್ರಿ ಏಳೆಂಟು ಜನರಿಗೂ ದೇಹವನ್ನೊಪ್ಪಿಸ ಬೇಕಾಗುತ್ತಿತ್ತು. ಮಧ್ಯರಾತ್ರಿಯ ವೇಳೆಗೆ ತನ್ನ ದೇಹದಲ್ಲಿನ ಸಮಸ್ತ ಶಕ್ತಿಯೂ ಅಳಿದು ಹೋದಂತೆ ತೋರುತ್ತಿತ್ತು. ಸೊಂಟದಲ್ಲಿ ಭೀಕರ ನೋವು, ಕಾಲುನೋವು, ಕೈನೋವು. ತಲೆದಿಂಬಿನ ಮೇಲೆ ಮುಖ ಚೆಲ್ಲಿ ತನ್ನ ತಾಯಿ

ಯನ್ನು ನೆನೆದುಕೊಳ್ಳುತ್ತ ಕಣ್ಣೀರು ಸುರಿಸುವಳು. ಬೆಳಗಾಗಿ ಎರಡುತಾಸು ಹೊತ್ತೇರಿದರೂ ಹಾಸುಗೆ ಬಿಟ್ಟು ಏಳಲಾಗುತ್ತಿರಲಿಲ್ಲ. ಹೇಗೋ ಎದ್ದು ಕೆಲಸಕ್ಕೆ ತೊಡಗುವಳು.

ಒಂದು ತಿಂಗಳು ಹಾಗೆ ದುಡಿಯುವುದರೊಳಗಾಗಿ ಆಕೆಯ ದೇಹ ಕೃಶ ವಾಯಿತು. ತ್ವಚೆಯ ಗೌರವರ್ಣ ಅಳಿದು ಕಪ್ಪು ತಲೆದೋರಿತು. ಕಣ್ಣು ಗಳು ಒಳಸೇರಿದುವು. ಕೆನ್ನೆಗಳ ಮೂಳೆ ಮೇಲೆ ಕಾಣಿಸತೊಡಗಿದುವು. ಸೊಂಟದ ನೋವು ಉಗ್ರವಾಗತೊಡಗಿತು. ದೇಹದ ಮೇಲೆ ಹುಣ್ಣುಗಳೂ ಕಾಣಿಸಿಕೊಂಡು ಅವುಗಳಿಂದ ಕೀವು ಸೋರತೊಡಗಿತು. ರಾಮನ ಮುಲಾ ಮನ್ನು ಸವರಿಕೊಂಡು ಕಾಲು ತಳ್ಳತೊಡಗಿದಳು. ರೋಗ ದಿನೇ ದಿನೇ ಹೆಚ್ಚುತ್ತ ಬಂದಿತು. ಮೈಯಲ್ಲೆಲ್ಲ ಉರಿ. “ಈ ಸಂಕಟ ಹ್ಯಾಂಗ ತಡಿ ಯೂದವ್ವ ?” ಎಂದು ಮಲ್ಲಿಯೆದುರಿಗೆ ಅತ್ತುಕೊಂಡಾಗ ಆಕೆ— “ಇದ ಕ್ಕೊಂದೇ ಉಪಾಯ. ಕುಡಿತ. ಅದರ ಅಮಲಿನಾಗ ಎಂಥಾ ಸಂಕಟವೂ ಮರತು ಹೋಗುತೈತಿ,” ಎಂದಳು. ಕುಡಿತದ ಅಮಲಿನಲ್ಲಿ ಪ್ರಪಂಚವನ್ನೆಲ್ಲ ಮರೆತು ಬಿಡಬಹುದೆಂಬುದರ ಅನುಭವ ಯಮುನಳಿಗೂ ಇದ್ದಿತು. ಇನ್ನು ತಾನು ಏನು ಕುಡಿದರೇನು ? 'ವಿಷ ಕುಡಿದರೂ ಒಳ್ಳೆಯದೇ ಎಂದುಕೊಂಡು ಹೆಂಡ ತರಿಸಿ ಕುಡಿಯತೊಡಗಿದಳು. ಹೆಂಡದ ಪ್ರಭಾವವಿರುವ ತನಕ ನೋವಿನ ಅರಿವೂ ಇರುತ್ತಿರಲಿಲ್ಲ. ಹಾಗೆಂದು ದಿನವಿಡೀ ಕುಡಿಯುತ್ತಲೇ ಇರುವುದೂ ಸಾಧ್ಯವಿರಲಿಲ್ಲ. ಹಗಲು ಹೊತ್ತು ಸಹಿಸಲಸಾಧ್ಯವಾದ ಸಂಕಟ. ಫಾತಿಮಳ ಸೂಚನೆಯಂತೆ ನಾಲ್ಕೈದು ಇಂಜಕ್ಶನ್ ತೆಗೆದುಕೊಂಡಳು. ಸಂಕಟ ಕೊಂಚ ಕಡಮೆಯಾಯಿತು.

ರೋಗದಿಂದ ಮೈಯೆಲ್ಲ ಉರಿಯುತ್ತಿದ್ದ ವೇಳೆಯಲ್ಲೂ ಗಿರಾಕಿಗಳನ್ನು ಕರೆದುಕೊಳ್ಳಬೇಕಾಗುತಿತ್ತು, ಅವರೊಂದಿಗೆ ನಗುತ್ತ ಮಾತನಾಡಬೇಕಾಗು ತ್ತಿತ್ತು, “ನಾಳೆ ಮತ್ತ ಬಾ, ಹಂ, ನನ್ನ ಸರದಾರಾ!” ಎಂದು ಹೇಳಿ ಅವ ರನ್ನು ಆಕರ್ಷಿಸಬೇಕಾಗುತಿತ್ತು. ಒಂದೊಂದು ರಾತ್ರಿ ಆವಳಿಗೆ ಪ್ರಜ್ಞೆಯೇ ಇರುತ್ತಿರಲಿಲ್ಲ. ಬಾಗಿಲಿಗೆ ಚಿಲಕ ಹಾಕಿಕೊಳ್ಳುವುದನ್ನು ಗಮನಿಸದೆ ಹಾಗೆಯೆ ಹೆಣದಂತೆ ಬಿದ್ದುಕೊಂಡಿರುತ್ತಿದ್ದಳು. ಕೆಲದಿನಗಳಿಂದ ಎದ್ದು ಓಡಾಡುತ್ತಿದ್ದ ರಾಮ ಆವಳನ್ನು ಆ ಸ್ಥಿತಿಯಲ್ಲಿ ಕಂಡು ಗಾಬರಿಗೊಂಡು ಹೇಳುತ್ತಿದ್ದ:

"ನೀ ಹೀಂಗ ದನ ದುಡಿದಾಂಗ ದುಡೀಬ್ಯಾಡ ಯಮುನೀ. ನನಗ ನೆಟ್ಟಗಾಯ್ತು. ಇನ್ನ ವ್ಯಾಲ ನಾ ಕೂಲೀ ಮಾಡಿ ತರುತೀನಿ. ನೀ ಯಾರನ್ನೂ ಕರಕೊಳ್ಳಬ್ಯಾಡ."

ಆಕೆ ಒಣನಗೆ ನಕ್ಕು, "ಇನ್ನೂ ಶಕ್ತಿ ಬಂದಿಲ್ಲ ನಿನ್ನ ಮೈಯಾಗ. ಈಗs ಏನು ಕೂಲೀ ಮಾಡುತೀ ? ಏನೂ ಬ್ಯಾಡ. ಇನ್ನೊಂದು ತಿಂಗಳೊಪ್ಪತ್ತು ಆರಾಮಾಗಿ ಇರು," ಎಂದು ನಡಿದು ಆ ವಿಷಯವನ್ನೇ ಮರೆಸಿಬಿಡುತ್ತಿದ್ದಳು.

ರಾಮುವಿನ್ನೂ ಚೇತರಿಸಿಕೊಂಡಿರಲಿಲ್ಲವೆಂಬ ವಿಷಯವೇನೊ ನಿಜವಾದು ದಾಗಿದ್ದಿತು. ಮೂಟೆಗಳನ್ನು ಹೊರುವುದಕ್ಕೂ, ಗಾಡಿಗಳನ್ನು ಎಳೆಯುವು ದಕ್ಕೂ ಆಗತ್ಯವಿರುವ ಶಕ್ತಿ ಆತನಲ್ಲಿರಲಿಲ್ಲ. ರೋಗದ ಹೊಡೆತದಿಂದಾಗಿ ಆತನ ದೇಹ ಕೃಶವಾಗಿ ಕಡ್ಡಿಯಂತಾಗಿದ್ದಿತು. ಮೂಳೆಗಳು ಎದ್ದು ಕಾಣಿ ಸುತ್ತಿದ್ದುವು ಕೊಂಚ ದೂರ ನಡೆಯುವದರೊಳಗಾಗಿ ಕಾಲುಗಳಿಗೆ ನಡುಕ ಬರುತ್ತಿತ್ತು.

ಅಂಥ ಸ್ಥಿತಿಯಲ್ಲೇ ಆತ ಕೂಲಿಗೆ ಹೋಗತೊಡಗಿದ. "ಬ್ಯಾಡ ರಾಮಾ, ಹೋಗಬ್ಯಾಡ," ಎಂದು ಯಮುನಾ ಅತ್ತುಕೊಂಡು ಹೇಳಿದರೂ ಆತ ಕೇಳಲಿಲ್ಲ.

## ತೆರೆ: ಏಳು.

ಮಳೆಗಾಲ ಕಳೆದು, ಚಳಿಗಾಲ ಬಂದಿದ್ದಿತು.

ಯಮುನಾ ಕೊಂಚಕೊಂಚವಾಗಿ ಚೇತರಿಸಕೊಳ್ಳತೊಡಗಿದ್ದಳು. ರಾಮು ದಿನವೂ ಕೂಲಿಗೆ ಹೋಗುತ್ತಿದ್ದ. ರೋಗದಿಂದಾಗಿ ಕೃಶವಾದ ಆತನ ದೇಹ ಮತ್ತೆ ಸುಧಾರಿಸಿಕೊಳ್ಳಲಿಲ್ಲ. ಅಂಥ ಸ್ಥಿತಿಯಲ್ಲಿಯೂ ಬಲು ಭಾರ ವಾದ ಮೂಟೆಗಳನ್ನು ಹೊರಬೇಕಾಗಿ ಬಂದಿದ್ದಿತು. ಕೂಲಿಯ ಕೆಲಸವೊಂ ದನ್ನುಳಿದು ಇನ್ನಾವ ಕೆಲಸವೂ ಆತನಿಗೆ ಸಿಕ್ಕುವಂತಿರಲಿಲ್ಲವಾದುದರಿಂದ ನಿರುಪಾಯವಾಗಿ ಅದಕ್ಕೇ ಅಂಟಿಕೊಳ್ಳಬೇಕಾಗಿದ್ದಿತು. ಒಂದು ದಿನ ಕಡಲೆ ಕಾಯಿ ಚೀಲ ಹೊತ್ತು ಸಾಗಿಸುತ್ತಿದ್ದಾಗ ಬಾಯಿಯಿಂದ ರಕ್ತ ಸುರಿಯ ತೊಡಗಿತು. ಮುಂಗೈಯಿಂದ ಅದನ್ನೊರೆಸಿಕೊಂಡು ಕೆಲಸ ಮುಂದುವರಿಸಿದ.

ಯಮುನಾ ಗಾಬರಿಗೊಳ್ಳಬಹುದೆಂದು ಆ ವಿಷಯವನ್ನಾಕೆಗೆ ತಿಳಿಸಲಿಲ್ಲ.

ಆ ರಾತ್ರಿ ಆತ ಊಟಕ್ಕೆ ಕುಳಿತಾಗ ಹಠಾತ್ತನೆ ಕೆಮ್ಮು ಬಂದಿತು. ಅದರೊಂದಿಗೆ ರಕ್ತದ ಹನಿಗಳು ಸಿಡಿದು ತಾಬಾಣದಲ್ಲಿ ಬಿದ್ದವು. ಯಮುನಾ ಗಾಬರಿಗೊಂಡು— "ಇದೇನೋ ರಾಮೂ ?" ಎಂದು ಕೂಗಿದಳು. "ಏನೂ ಇಲ್ಲ ಯಮುನೀ. ಇಷ್ಟ್ಯಾಕ ಅಂಜುತೀ ?" ಎಂದು ನುಡಿದು ಆತ ನಗಲು ಪ್ರಯತ್ನಿಸಿದ.

"ನಿನಗ ಇನ್ನೂ ಶಕ್ತಿ ಬಂದಿಲ್ಲ. ಈಗs ಕೆಲಸಕ್ಕ ಹೋಗಬ್ಯಾಡ ಅಂದರ ಕೇಳವೊಲ್ಲಿ. ನನ್ನಾಣೆ ನಿನಗ ರಾಮೂ. ನಾಳೆಯಿಂದ ಮನ್ಯಾಗs ಇರು," ಎಂದು ಅಳುತ್ತಳುತ್ತ ಹೇಳಿದಳು ಯಮುನಾ.

ರಾಮನ ಕಣ್ಣುಗಳಲ್ಲಿ ನೀರೂರಿತು. "ಯಶೋದಿಯ ಸಂಗ ಮಾಡಬಾರದಾಗಿತ್ತು ಯಮುನೀ. ನಾ ಬುದ್ಧಿಗೇಡಿ. ಅದರಿಂದನs ಇದೆಲ್ಲಾ ಆದದ್ದು."

"ನನ್ನ ಮ್ಯಾಲ ಸಿಟ್ಟಾಗಿ ಹೋಗಿದ್ದಿಯೇನು ಅವಳ ಹತ್ತರ ?"

"ಹೂಂ. ಸುಳ್ಳು ಯಾಕ ಹೇಳಬೇಕು ? ಸುಮ್ಮಸುಮ್ಮನ ನಿನ್ನ ಮ್ಯಾಲ ಸಿಟ್ಟು ಬಂದಿತ್ತು ನನಗ. ಅದರ ಕೂಡ ಎಲ್ಲಾ ಬ್ಯಾಸರಾಗಿತ್ತು. ಈ ಬದುಕಿನ್ಯಾಗ ಏನೂ ಸುಖಾ ಇಲ್ಲಂದಮ್ಯಾಲ ಇದ್ದಷ್ಟು ದಿನಾ ಮಜಾ ಮಾಡಿ ಸತ್ತುಹೋಗೂದೇ ಚಲೋ ಅಂತನ್ನಿಸಿತು. ಯಶೋದಿಯ ಮನಿಗೆ ಹೋದಿನಿ ಮಜಾ ಮಾಡಾಕ. ಆತು ನೋಡು ಮಜಾ. ಹಾಸಿಗೀಹಿಡಿದು ಲಬೋ ಲಬೋ ಅನ್ನಬೇಕಾತು. ಹೆಂಗ ಪೈಲ್ವಾನನ ಹಂಗ ಇದ್ದಿನಿ ! ಹಿಂಗಾದಿನಿ. ಆಗ ನೀ ನನ್ನ ಕರಕೊಳ್ಳದಿದ್ದರ ನನ್ನ ಗತಿಯೇನಾಗುತ್ತಿತ್ತು ಯಮುನೀ ! ನನ್ನ ಯಾರು ನೋಡುತಿದ್ದರು ? ಆಗಸುದ್ದೆ ಯಾರು ಕೊಡುತಿದ್ದರು ? ಸಾಹುಕಾರ ಬಿಟ್ಟರೂ ಚಿಂತಿ ಇಲ್ಲಂತ ಹೇಳಿ ನೀ ನನ್ನ ಇಟ್ಟುಕೊಂಡಿ. ಯಮುನೀ........"

"ಅದೇನು ದೊಡ್ಡ ಮಾತು ಬಿಡೋ ರಾಮು !"

"ಸಣ್ಣ ಮಾತೇನೇ ಯಮುನೀ ಅದು ? ನೀ ನನಗ ಮಾಡಿದ ಉಪಕಾರ ಈ ಜನುಮದಾಗs ತೀರಿಸುವ ಹಂಗಿಲ್ಲ. ನನ್ನ ಮ್ಯಾಲ ಎಷ್ಟು ಪಿರೀತೀನೇ ನಿಂದು !"

“ಅವತ್ತು ಹಳ್ಳದ ದಂಡಿಯ ಮ್ಯಾಲ ನಾ ನಿನಗ ಒಂದು ಮಾತು ಹೇಳಿದ್ದಿನಿ, ನೆನಪೈತೇನು?”

“ಏನು?”

“ಗಂಡನ ಮನಿಗೆ ಹೋಗೂದಕ್ಕ ಮನಸ್ಸಿಲ್ಲ ನನಗ. ಇಬ್ಬರೂ ಕೂಡಿ ಎಲ್ಲಿಗಾದರೂ ಓಡಿ ಹೋಗಿಬಿಡೂಣು ಅಂತ....”

“ಹೌದೌದು. ನೆನಪೈತಿ. ನಾನೊಂದು ಕತ್ತಿ ಯಮುನೀ. ಆಗ ನನಗ ಏನೇನೂ ಬುದ್ಧಿ ಇರಾಕಿಲ್ಲ.”

“ಆಗs ನೀ ನನ್ನ ಸಂಗಡ ಬಂದಿದ್ದರ ನಮ್ಮಿಬ್ಬರಿಗೂ ಇಂಥಾ ಗತಿ ಬರುತಿರಲಿಲ್ಲ ನೋಡು.”

“ಹೌದೌದು. ಬರಾಬರಿ.”

“ಹೂಂ.. ಆದದ್ದು ಆಗಿಹೋತು. ಇನ್ನ ಮ್ಯಾಲಾದರೂ ಇಬ್ಬರೂ ಕೂಡಿ ಇರೂಣು. ಸಾಯೂತನಕಾ ಒಬ್ಬರನ್ನೊಬ್ಬರು ಬಿಡೂದು ಬ್ಯಾಡ. ಅವತ್ತು ಶಂಕರಣ್ಣ ಅಂತ ಒಬ್ಬರು ಹೇಳುತಿದ್ದರು—ನಮಗೆಲ್ಲಾ ಚಲೋ ಕಾಲ ಬಂದೀತು—ಅಂತ. ಆವಾಗ ಇಬ್ಬರೂ ರಾಜಾ-ರಾಣಿ ಆಗಿ ಇರೂಣಂತ........”

“ರಾಜ....ರಾಣಿ....” ಎಂದು ನಕ್ಕುಬಿಟ್ಟ ರಾಮ.

## ತೆರೆ: ಎಂಟು.

ಒಂದು ದಿನ ಆತ ಪೇಟೆಯಲ್ಲಿ ಮೂಟೆ ಹೊತ್ತುಕೊಂಡು ಲಾರಿಯ ಮೇಲೇರಿಸುತ್ತಿದ್ದ ಹಾಗೆ ಎದುರಿಗೆ ಎತ್ತಿನ ಬಂಡಿಯೊಂದು ಬರುವುದನ್ನು ಕಂಡು ಅದಕ್ಕೆ ದಾರಿ ಮಾಡಿಕೊಡಲೆಂದು ತುಸು ಸರಿದು ನಿಂತ.

“ರಾಮಾ” ಎಂದು ಯಾರೋ ಕೂಗಿದಂತಾಯಿತು. ಬೆನ್ನ ಮೇಲಿನ ಭಾರದಿಂದ ಬಾಗಿದ್ದ ತಲೆಯನ್ನು ಕೊಂಚ ಮೇಲಕ್ಕೆತ್ತಿ ಆತ ಕರೆ ಬಂದ ದಿಕ್ಕಿಗೆ ದೃಷ್ಟಿ ಹೊರಳಿಸಿದಾಗ ಎದುರಿಗಿದ್ದ ಬಂಡಿಯ ಮೇಲೆ ನಿಂಗ ಕುಳಿತಿದ್ದುದು ಕಾಣಿಸಿತು. ಗೌಡರ ಆಳು ನಿಂಗ. ಗೌಡರ ಎತ್ತು. ಗೌಡರ ಬಂಡಿ. ಅದರ ತುಂಬಾ ಬೆಲ್ಲದ ಪೆಂಟಿಗಳು. ಗೌಡರೂ ಬಂದಿರಬಹುದೇನೋ ಎಂಬ ವಿಚಾರ ಬಂದೊಡನೆ ರಾಮನ ಎದೆ ನಡುಗಿತು. ಗೌಡರ

ಬಗೆಗೆ ಚಿಕ್ಕತನದಿಂದಲೂ ಅವನಲ್ಲಿ ಬೆಳೆದು ಬಂದಿದ್ದ ಭೀತಿ ಒಮ್ಮೆಲೆ ಆವರಿಸಿ ಕೊಂಡಿತು. ನಿಂಗನನ್ನು ಕಂಡೂ ಕಾಣದವನಂತೆ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ನಿಂಗ ಅವನನ್ನು ಬಿಡಲಿಲ್ಲ. ಬಂಡಿಯಿಂದಿಳಿದು ರಾಮನ ಬಳಿ ಬಂದು ಅವನನ್ನು ಕೌತುಕದಿಂದ ದಿಟ್ಟಿಸುತ್ತ—

"ಇದೇನೋ ರಾಮಾ ? ಕೂಲೀ ಕೆಲಸ ಮಾಡುತ್ತಿದೀಯಾ ? ಎಷ್ಟು ದಿಸಾ ಆಯ್ತಪ್ಪ ಇಲ್ಲಿಗೆ ಬಂದು ? ಇದೆಷ್ಟು ಸೊರಗಿದ್ದೀಯಲ್ಲಾ ?" ಎಂದ.

ಮೂಟೆಯನ್ನು ಲಾರಿಗೆ ಹೇರಿ ರಾಮು ನಿಂಗನೊಂದಿಗೆ ಮಾತಾಡುತ್ತ ನಿಂತ.

"ಗೌಡರೂ ಬಂದಾರೇನೋ ನಿಂಗಾ ?"

"ಬಂದಾರ. ಅಲ್ಲಿ ಆ ಅಂಗಡ್ಯಾಗ ಕುಂತಾರ," ಎಂದು ನಿಂಗ ದಲ್ಲಾಲಿ ಅಂಗಡಿಯೊಂದನ್ನು ತೋರಿಸಿದ.

ಆ ದಿನವೆಲ್ಲ ರಾಮು ಆ ಅಂಗಡಿಯ ಕಡೆ ಸುಳಿಯಲೇ ಇಲ್ಲ. ಸಂಜೆಯಾಗುತ್ತಲೂ ನೇರವಾಗಿ ಮನೆಗೆ ಧಾವಿಸಿ ಬಂದ.

ಯಮುನಾ ಅಡುಗೆ ಮಾಡುತ್ತ ಕುಳಿತಿದ್ದಳು. ರಾಮು ಬಂದವನೆ ಅವಳ ಹತ್ತಿರ ಕುಳಿತುಕೊಂಡು ಭೀತಿಯಿಂದ ಕಂಪಿಸುತ್ತಿದ್ದ ಧ್ವನಿಯಲ್ಲಿ ಹೇಳಿದ: "ಗೌಡರು ಬಂದಾರ ಯಮುನೀ"

ಗೌಡರು ಎಂಬ ಶಬ್ದ ಕಿವಿಗೆ ಬೀಳುತ್ತಲೂ ಯಮುನಳ ಮುಖ ಬಣ್ಣಗೆಟ್ಟಿತು. ಬಸಲಿಂಗವ್ವನ ಚಹದಂಗಡಿಯಲ್ಲಿನ ಆ ರಾತ್ರಿಯ ನೆನಪು ಬಂದು ಅವಳ ಎದೆ ಕಂಪಿಸಿತು.

"ಗೌಡ ? ಎಲ್ಲಿದಾನ ?"

"ಎಲ್ಲಿದಾನೊ ಏನೊ. ಅಂತೂ ಊರಾಗಿದಾನ. ಬೆಲ್ಲದ ಪೆಂಟೀ ತಂದಾರಂತ. ನಿಂಗನೂ ಬಂದಾನ."

"ಬಂದರ ಬರಲೇಳು. ನೀ ಯಾಕ ಅಂಜಿದ್ದೀ ? ಈಗ ನೀ ಏನೂ ಅವನ ಆಳಲ್ಲ." ಎಂದು ಹೇಳಿ ಯಮುನಾ ಆತನ ಭೀತಿಯನ್ನು ಹೋಗಲಾಡಿಸಲು ಪ್ರಯತ್ನಿಸಿದಳು. ನಿಜವಾಗಿ ಅವಳಿಗೇ ಸಮಾಧಾನವಿರಲಿಲ್ಲ. ಗೌಡರೆಂದರೆ ಚಿಕ್ಕಂದಿನಿಂದಲೂ ದಿಗಿಲು ಆಕೆಗೆ. ಅವರೊಂದಿಗೆ ಸಂಬಂಧ ಬಂದ

ದಿನಿಂದ ಆ ದಿಗಿಲು ಹೆದರಿಕೆಯಾಗಿ ಪರಿಣಮಿಸಿದ್ದಿತು. ನಗರಕ್ಕೆ ಬಂದು ಸ್ವತಂತ್ರವಾಗಿ ಸೂಳೆಯ ಬದುಕು ಸಾಗಿಸುತ್ತಿದ್ದರೂ ಆ ಹೆದರಿಕಯಿನ್ನೂ ಪೂರ್ಣವಾಗಿ ತೊಲಗಿರಲಿಲ್ಲ.

"ಇಲ್ಲಿಗೂ ಬರ್‍ತಾನೋ ಏನೋ."

"ಯಾರಿಗ್ಗೊತ್ತು. ಬಂದರೂ ಬಂದರೇ," ಎಂದ ರಾಮು.

ಅವರು ಊಹಿಸಿದ ಹಾಗೆಯೇ ಆಯಿತು. ಬೆಲ್ಲದ ಪೆಂಟಿಗಳನ್ನು ವ್ಯಾಪಾರಿಗೊಪ್ಪಿಸಿ, ಹಣ ಪಡೆದ ಬಳಿಕ ಗೌಡರು ಆ ದಿನ ಅಲ್ಲಿಯೇ ಉಳಿದು 'ಮೋಜು' ಮಾಡಿ ಹೋಗಬೇಕೆಂದು ನಿರ್ಧರಿಸಿ, ಬಂಡಿಯೊಂದಿಗೆ ನಿಂಗನನ್ನು ಊರಿಗೆ ಕಳುಹಿಸಿ ಆ ಓಣಿಗೆ ಬಂದರು.

ಸಿರಿವಂತನಂತೆ ಕಾಣುತ್ತಿದ್ದ ಆ ಹಳ್ಳಿಯ ಗೌಡನನ್ನು ಕಂಡೊಡನೆಯೆ ಓಣಿಯ ಹೆಂಗಳೆಯರೆಲ್ಲ ಆತನನ್ನು ಸುತ್ತಿದರು. "ನಮ್ಮ ಮನೆಗೆ ಬರ್‍ರಿ ಮಾವಾ," "ನಮ್ಮ ಮನೆಗೆ ಬರ್‍ರಿ" ಎಂದು ಎಳೆಯತೊಡಗಿದರು.

"ಎಳೆದು ಎಳೆದು ಕೊಂದು ಬಿಟ್ಟೀರಿ ಅವರನ್ನ. ಸರೀರಿ ದೂರ," ಎಂದು ಬಾಯಿ ಮಾಡುತ್ತ ದುರ್ಗವ್ವ ಅವರ ನೆರವಿಗೆ ಬಂದಳು.

ಹೆಂಗುಸರು ನಗುತ್ತ ದೂರ ಸರಿದರು.

ಗೌಡರು ಮೀಸೆಯ ಮೇಲೆ ಕೈ ಎಳೆಯುತ್ತ ದುರ್ಗವ್ವನನ್ನು ಕುರಿತು– "ಒಂದು ಚಲೋ ಹೊಸಾ ಮಾಲು ಕೊಡಿಸು ಮುದುಕೀ. ಇನ್ನೂ ಹರೇದಾಕಿ ಇರಬೇಕು," ಎಂದರು.

"ಹರೇದಾಕಿ ಅಂದರ ಯಮುನಾ ಒಬ್ಬಾಕಿಯೇ," ಎಂದು ನುಡಿದು ದುರ್ಗವ್ವ ಯಮುನಳನ್ನು ಕೂಗತೊಡಗಿದಳು.

ಯಮುನಾ ಎಂಬ ಹೆಸರು ಕಿವಿಗೆ ಬಿದ್ದೊಡನೆಯೆ ಗೌಡರ ಮುಖವರಳಿತು. ತಮ್ಮೂರಿನ ಗಂಗವ್ವನ ಮಗಳು ಯಮುನಳೇ ಇಲ್ಲಿಗೆ ಬಂದಿರುವಳೇನೋ ಎಂದುಕೊಂಡರು. ಆಕೆಯನ್ನು ಬಯಸಿ ತಾವು ಪಟ್ಟ ಪರಿಶ್ರಮವೆಲ್ಲ ಅವರ ಕಣ್ಣೆದುರಿಗೆ ಸುಳಿದುಹೋಯಿತು. ಕಾಡೇಶಿಯ ಕೊಲೆ........ ಬಸಲಿಂಗವ್ವನ ಚಹದಂಗಡಿಯಲ್ಲಿನ ಆ ಒಂದು ರಾತ್ರಿ........ಮುಂದೆ ಆಕೆ ಎಲ್ಲಿಯೋ ಮಾಯವಾಗಿದ್ದಳು. ಇಲ್ಲಿಗೆ ಬಂದು ಸೂಳೆಗಾರಿಕೆಗಿಳಿದಿರುವಳೊ ಏನೊ.......

ಗೌಡರ ಧ್ವನಿಯನ್ನು ಯಮುನಾ ಆಗಲೆ ಗುರುತಿಸಿಕೊಂಡಿದ್ದಳು. ದುರ್ಗವ್ವನ ಕರೆ ಕೇಳಿಸಿದರೂ ಆಕೆ ಮೇಲಕ್ಕೇಳಲಿಲ್ಲ. ರಾಮು ಕೈಕಟ್ಟಿ ಕೊಂಡು ಒಲೆಯಲ್ಲಿನ ಬೆಂಕಿಯ ಜ್ವಾಲೆಗಳನ್ನು ದಿಟ್ಟಿಸುತ್ತ ಮೌನವಾಗಿ ಕುಳಿತಿದ್ದ.

ದುರ್ಗವ್ವ ಗೌಡರನ್ನು ಯಮುನಳ ಮನೆಗೇ ಕರೆದು ತಂದಳು. ಪಡ ಸಾಲೆಯಲ್ಲಿ ಗೋಡೆಗುಂಟ ಇರಿಸಿದ್ದ ಹಾಸಿಗೆಸುರುಳಿಗೆ ಆತುಕೊಂಡು ಕುಳಿತು ಗೌಡರು ಮುಗುಳ್ನಗುತ್ತ ಸುತ್ತಲೂ ದೃಷ್ಟಿ ತಿರುಗಿಸಿದರು.

" ಏನು ಮಾಡಾಕ ಹತ್ತೀಯೇ ಯಮುನೀ ? ಬಾರಲಾ ಹೊರಗ, " ಎಂದಳು ದುರ್ಗವ್ವ.

ಇನ್ನು ಒಳಗೇ ಕುಳಿತಿರುವಂತಿರಲಿಲ್ಲ. ಯಮುನಾ ಎದ್ದು ಬರಲೇ ಬೇಕಾಯಿತು. ಅಡುಗೆಯ ಮನೆಯಲ್ಲಿ ರಾಮನೊಬ್ಬನೇ ಚಡಪಡಿಸುತ್ತ ಕುಳಿತ.

" ಬಾ ಯಮುನಾ. ಬಾ, ಕುಂಡ್ರು. ನಿನ್ನ ನೋಡಬೇಕಂತs ಬಂದೀನಿ, " ಎಂದರು ಗೌಡರು " ನನಗೆ ಹೇಳದೆಕೇಳದೆ ಹಾಂಗs ಬಂದು ಬಿಡಬೇಕೇನs ಮಳ್ಳೀ ! ಅಲ್ಲೇ ಇದ್ದಿದ್ದರ ನಿನ್ನ ರಾಣಿಯ ಹಾಂಗ ಇಡುತಿ ದ್ದಿನಿ, " ಎಂದು ಹೇಳಿ ಜೇಬಿಗೆ ಕೈಹಾಕಿ ಹತ್ತುರೂಪಾಯಿನದೊಂದು ನೋಟು ತೆಗೆದು ದುರ್ಗವ್ವನ ಕೈಗೆ ಕೊಟ್ಟು— " ಬ್ರಾಂಡಿ ಬಾಟಲಿ ಒಂದು ತರಿಸು ಮುದುಕೀ. ಬಹಾಳ ದಿವಸಾತು ಬ್ರಾಂಡಿ ಕುಡಿದು, " ಎಂದರು.

ದುರ್ಗವ್ವ ಸಂತೋಷದಿಂದ ಎದ್ದು ಹೋದಳು. ಗೌಡರು ಯಮುನಳ ಕಡೆ ಹೊರಳಿ ಹೇಳಿದರು:

" ನೀನು ಹೊಂಟು ಹೋದದ್ದು ಗೊತ್ತಾದಾಗ ಬಹಾಳ ಕೆಟ್ಟೆನಿಸಿತು ನೋಡು ಯಮುನೀ. ನಾಲ್ಕೈದು ಊರಿಗೆ ಆಳುಗಳನ್ನು ಕಳಿಸಿ ನಿನ್ನ ಹುಡುಕಿಸಿದಿನಿ. ನಿನ್ನ ಪತ್ತೆ ಹತ್ತಲಿಲ್ಲ. ಇಲ್ಲಿ ಬಂದಿದ್ದೀ ಅಂತ ನನಗನಿಸ ಲಿಲ್ಲ ಬಿಡು. ಹೆಂಗಿದ್ದೀ ? ಆರಾಮ ಇದ್ದೀಯಾ ? "

ಯಮುನಾ ಮೂಕ ಬೊಂಬೆಯಂತೆ ನಿಂತುಕೊಂಡಿದ್ದಳು. ಗೌಡರೇ ಮುಂದುವರಿಸಿದರು:

“ಏನೇನೋ ಆಗಿಹೋತು ಯಮುನೀ. ನಾನು ಸಿಟ್ಟಿನ ಕೈಯಾಗ ಬುದ್ಧೀ ಕೊಡಬಾರದಾಗಿತ್ತು. ಪಾಪ, ನಿಮ್ಮವ್ವಗ ಆದ ಗತಿ ನೆನಿಸಿಕೊಂಡರೆ ಬಹಾಳ ದುಕ್ಖ ಆಗುತ್ತೈತಿ. ಏನು ಮಾಡೂದು ಹೇಳು.”

“ಏನಾತು ಅವ್ವಗ?”

“ನೀ ಇನ್ನೂ ಕೇಳೇ ಇಲ್ಲೇನು? ಮೂರು ವರ್ಷ ಶಿಕ್ಷಾ ಆತು; ಲಕ್ಕಪ್ಪಗ ಕಾಳಾಪಾಣಿ ಆತು.”

“ಅಯ್ಯೋ ಅವ್ವಾ....” ಎಂದು ಕೂಗಿ ಯಮುನಾ ಸೆರಗಿನಲ್ಲಿ ಮುಖ ಮುಚ್ಚಿಕೊಂಡು ಬಿಕ್ಕತೊಡಗಿದಳು. ಗೌಡರಿಗೆ ಕನಿಕರ ಬಂದಂತಾಯಿತು. ಅವಳನ್ನು ಸಂತವಿಸಲೆಂದು ಅವರು ಎದ್ದು ಅವಳ ಬಳಿ ಬಂದು, ಅವಳ ಭುಜದ ಮೇಲೆ ಕೈಯಿರಿಸಿ, “ಅಳಬ್ಯಾಡ ಯಮುನೀ. ಆದದ್ದು ಆಗಿ ಹೋತು. ನನ್ನದೂ ದೊಡ್ಡ ತಪ್ಪಾತು. ಇನ್ನಮ್ಯಾಲ ಎಂದೂ ಹೀಂಗ ಮಾಡುವದಿಲ್ಲ. ನನ್ನ ಕೂಡ ಊರಿಗೆ ನಡೀ. ನಿನಗೊಂದು ಮನೀ ಮಾಡಿ ಕೊಡುತೀನಿ. ಆರಾಮಾಗಿ ಇದ್ದೀಯಂತ........” ಎನ್ನುತ್ತಿದ್ದ ಹಾಗೆ ಆಕೆ ಅವರ ಕೈ ಕೊಡಹಿ, ದೂರ ಸರಿದು ನಿಂತು ತ್ವೇಷದಿಂದ ನುಡಿದಳು:

“ನನ್ನ ಮೈ ಮುಟ್ಟಬ್ಯಾಡ. ನನ್ನ ಅಪ್ಪನ್ನ ಕೊಂದಿ. ಅವ್ವನ್ನ ಜೇಲಿಗೆ ಹಾಕಿಸಿದಿ. ನನ್ನ ಕೆಡಿಸಿ ಈ ಹಾದಿಗೆ ಹಚ್ಚಿದಿ. ಈಗ ಮತ್ತ ಬಂದು ಕರಕೊಂಡು ಹೋಗಬೇಕಂತ ಮಾಡೀಯೇನು? ನಿನ್ನ ರಂಡಿಯಾಗಿ ಇಟ್ಟುಕೋಬೇಕಂತ ಮಾಡೀಯೇನು? ಹಾಳಾಗಿ ಹೋಗು. ನಿನ್ನ ರಂಡಿಯಾಗಿ ಸುಖದಿಂದಿರೂದಕ್ಕಿಂತ ಇಲ್ಲಿ ಸೂಳಿಯಾಗಿ ಸಾಯೂದು ನೆಟ್ಟಗ. ನಡೀ ನನ್ನ ಮನೀ ಬಿಟ್ಟು. ಅಯ್ಯೋ ಅವ್ವಾ....ರಾಮಾ....ರಾಮಾ....”

ಊದುಗೊಳವೆ ಹಿಡಿದುಕೊಂಡು ಒಲೆಯ ಮುಂದೆ ಕುಳಿತಿದ್ದ ರಾಮ ಗಾಬರಿಗೊಂಡು ಧಾವಿಸಿ ಬಂದ. ಆತನ ದೇಹವೆಲ್ಲ ಥರಥರ ಕಂಪಿಸುತ್ತಿದ್ದಿತು. ಕೈಯಲ್ಲಿದ್ದ ಕಬ್ಬಿಣದ ಊದುಗೊಳವೆಯನ್ನೆತ್ತಿ ಗೌಡರ ತಲೆಗೆ ಏಟು ಹಾಕತೊಡಗಿದ.

ಆ ರೀತಿಯಾಗಿ ಯಾರಿಂದಲೂ ಎಂದೂ ಏಟು ತಿಂದವರಲ್ಲ ಗೌಡರು. ಕೋಪದಿಂದ ಕೆರಳಿ ಅವರು ರಾಮುನನ್ನು ಹಿಡಿದೆಳೆದು ನೆಲಕ್ಕೆ ಕೆಡವಿ— “ನನ್ನ ಅನ್ನ ತಿಂದು ಬೆಳೆದ ನೀ ನನ್ನನ್ನ ಬಡಿಯುವಷ್ಟು ಸೊಕ್ಕೇದೀಯೇನು?”

ಎನ್ನುತ್ತಾ ಆತನ ಎದೆಯ ಮೇಲೆ ಹತ್ತಿ ನಿಂತು ಬಲವಾಗಿ ತುಳಿಯತೊಡಗಿದರು. ತಾವು ಮಾಡುತ್ತಿರುವುದೇನೆಂಬುದರ ಅರಿವೂ ಅವರಿಗಿರಲಿಲ್ಲ.

ಯಮುನಾ ಗಾಬರಿಗೊಂಡು ಒಂದೆ ಸಮನೆ ಆಕ್ರೋಶ ಮಾಡತೊಡಗಿದಳು.

"ನನ್ನ ರಾಮುನ್ನ ಕೊಂದರಪ್ಪೋ. ಯಾರಾರೆ ಬರ್ರಿ. ಬಿಡಿಸಿಕೊಳ್ರಿ. ಅಯ್ಯೋ, ಸತ್ತ....ಸತ್ತ... ಖೂನಿ....ಖೂನಿ....ಬರ್ರಿ ಬರ್ರಿ."

ಓಣಿಯವರೆಲ್ಲ ದಿಗಿಲುಗೊಂಡು ಮನೆಯ ಸುತ್ತಲೂ ಸೇರಿದರು. ಆಗ ತಾನೆ ಮನೆಗೆ ಬಂದಿದ್ದ ಬಾಬುವೂ ಧಾವಿಸಿ ಬಂದು ಗೌಡರನ್ನು ಹಿಡಿದು ಹೊರಗಡೆ ಎಳೆದುಕೊಂಡು ಹೋದ. ಬ್ರಾಂಡಿಯ ಬಾಟಲಿಯೊಂದಿಗೆ ಬರುತ್ತಿದ್ದ ದುರ್ಗವ್ವ ಅದನ್ನು ಬೀದಿಗೆಸೆದು ಓಡಿಬಂದಳು.

ರೋಗದಿಂದ ಪೂರಾ ದುರ್ಬಲವಾಗಿದ್ದ ರಾಮುನ ಎದೆಗೆ ಗೌಡರ ತುಳಿತದಿಂದಾಗಿ ಭೀಕರ ಪೆಟ್ಟು ಬಿದ್ದಿತ್ತು. ಆತನ ಮೂಗು ಬಾಯಿಗಳಿಂದ ನೆತ್ತರು ಸುರಿಯತೊಡಗಿದ್ದಿತು.

ಬಾಬು ಓಡಿಹೋಗಿ ಡಾಕ್ಟರನ್ನು ಕರೆದುಕೊಂಡು ಬಂದ. ಅವರು ರಾಮುನನ್ನು ಪರೀಕ್ಷಿಸಿ ನೋಡಿ, ಕತ್ತು ಕೊಡವಿ ಕೈ ಚೆಲ್ಲಿದರು.

"ಮೊದಲೇ ಇವನ ಎದೆ ದುರ್ಬಲವಾಗಿತ್ತು. ಈಗ ಭಯಂಕರ ಪೆಟ್ಟು ಬಿದ್ದಿದೆ. ಮೊದಲು ಈ ರಕ್ತಸ್ರಾವ ನಿಲ್ಲಿಸಬೇಕು. ಇಲ್ಲಿಯೆ ಬಿಟ್ಟರೆ ಈತ ಬದುಕುವ ಆಸೆಯಿಲ್ಲ. ಕೂಡಲೆ ಸಿವಿಲ್ ಹಾಸ್ಪಿಟಲಿಗೆ ಒಯ್ಯಿರಿ."

"ಏನಾರ ಮಾಡಿ ನನ್ನ ರಾಮುನ್ನ ಉಳಿಸಿಕೊಡ್ರಿ ದಾಕತರಸಾಬರೇ!" ಎಂದು ಆಕ್ರೋಶ ಮಾಡುತ್ತಿದ್ದಳು ಯಮುನಾ.

"ನೋಡಬೇಕವ್ವ. ಬಹಳ ಪೆಟ್ಟು ಬಿದ್ದಿದೆ."

ಪೋಲೀಸರು ಬಂದರು. ರಾಮುನನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಬಾಬುವಿನ ಮನೆಯಲ್ಲಿದ್ದ ಗೌಡರನ್ನು ಜತೆಗೆ ಕರೆದುಕೊಂಡು ಪೋಲೀಸರು ಹೊರಟು ಹೋದರು.

# ಭರತ ವಾಕ್ಯ.

ಮೇಜಿನ ಮೇಲಿದ್ದ ಗಡಿಯಾರ ಗಂಟೆ ಎರಡಾದುದನ್ನು ತೋರಿಸು ತ್ತಿದ್ದಿತು.

ಶಂಕರ ಆಕಳಿಸುತ್ತ ಕುರ್ಚಿಯಿಂದೆದ್ದು ಹಾಸಿಗೆಗಳನ್ನು ಸಿದ್ಧಗೊಳಿಸ ತೊಡಗಿದ.

" ಮುಂದೇನಾಯಿತು ಶಂಕರೂ ? " ನಾನು ಆತುರತೆಯಿಂದ ಕೇಳಿದೆ.

" ಆಗಬೇಕಾದದ್ದು ಆಗಿ ಹೋಯಿತು. ರಾಮು ಉಳಿಯಲಿಲ್ಲ. ಉಳಿಯಲು ಸಾಧ್ಯವಿರಲಿಲ್ಲ. ಎರಡು ದಿನಗಳವರೆಗೆ ಆಸ್ಪತ್ರೆಯಲ್ಲಿ ಒದ್ದಾಡು ತ್ತಿದ್ದು ಆತನ ಜೀವ ಹಾರಿಹೋಯಿತು. "

" ಗೌಡರಿಗೇನಾಯಿತು ? "

" ಅವರೇನಪ್ಪ, ದೊಡ್ಡ ಸಾಹುಕಾರರು. ಇಂಥ ಅನೇಕ ಪ್ರಸಂಗ ಗಳಿಂದ ಸುಖರೂಪವಾಗಿ ಪಾರಾದವರು. ಇದರಲ್ಲೂ ಪಾರಾದರು. "

" ಅದು ಹೇಗೆ ? ಪೋಲೀಸರು ಸುಮ್ಮನಿದ್ದರೇ ? "

" ಅವರೇಕೆ ಸುಮ್ಮನಿರುತ್ತಾರೆ ? ಅವರ ಸಹಾಯದಿಂದಲೇ ಪಾರಾದ ಗೌಡ. ಈ ಪ್ರಸಂಗದಲ್ಲಿ ಸುಮಾರು ಮೂರು ಸಾವಿರ ರೂಪಾಯಿಗಳ ವರೆಗೂ ಅವರ ಕೈಬಿಟ್ಟಿತಂತೆ. "

"ಆ ಓಣಿಯುವರು ಸುಮ್ಮನಾದವರೇ ?"

"ಹಣವಂತರ ಈ ರಾಜ್ಯದಲ್ಲಿ ಸೂಳೆಯರ ಓಣಿಯ ದಟ್ಟ ದರಿದ್ರರ ನ್ನಾರು ಕೇಳಬೇಕು ? ಬಾಬು ಸ್ವಲ್ಪ ಹಾರಾಡಿದಾಗ ಇನಸ್ಪೆಕ್ಟರು ಆತನನ್ನು ಹಿಡಿದು ನಾಲ್ಕು ಏಟು ಕೊಟ್ಟು ಜೈಲಿಗೆ ಹಾಕುವುದಾಗಿ ಬೆದರಿಸಿದರಂತೆ."

"ನೀವಾದರೂ ಏನನ್ನಾದರೂ ಮಾಡಲು ಬರುತ್ತಿದ್ದಿತಲ್ಲ ?"

"ನಾನಾಗ ಊರಲ್ಲಿರಲಿಲ್ಲ. ಪ್ರವಾಸದ ಮೇಲಿದ್ದವನು ಒಂದು ತಿಂಗಳ ತರುವಾಯ ಬಂದ ಬಳಿಕ ಒಂದು ದಿನ ಬಾಬು ಭೆಟ್ಟಿಯಾಗಿ ಎಲ್ಲ ವನ್ನೂ ಹೇಳಿದ. ಕಾಲ ಮೀರಿ ಹೋಗಿತ್ತು. ಆಗ ನಾವೇನನ್ನೂ ಮಾಡು ವಂತಿರಲಿಲ್ಲ"

"ಯಮುನಾ ?"

"ಯಮುನಾ ಬೀದಿಯ ಪಾಲಾದಳು. ತಂದೆ ಸತ್ತು ಹೋಗಿದ್ದ. ತಾಯಿ ಜೈಲಿನಲ್ಲಿದ್ದಳು. ಕಣ್ಣೆದುರಿಗೇ ತನ್ನ ಪ್ರಿಯನೂ ಹೊಡೆತ ತಿಂದು ಸಾಯಬೇಕಾಗಿ ಬಂದಿತ್ತು. ಬಾಳಿನುದ್ದಕ್ಕೂ ಆ ಬಡ ಹುಡುಗಿಗೆ ಸಂಕಟ ಪರಂಪರೆಯೇ ಎದುರಾಗಿದ್ದಿತು. ಆವಳ ತಪ್ಪೇನೂ ಇರಲಿಲ್ಲವಾದರೂ ಈ ಸಮಾಜದಲ್ಲಿ ಆವಳಿಗೆ ಸ್ವಲ್ಪವೂ ಸುಖ ಸಿಕ್ಕಲಿಲ್ಲ. ಸೂಳೆಗಾರಿಕೆ ಮಾಡಿ ಕೊಂಡಾದರೂ ಶಾಂತಿಯಿಂದ ಇರೋಣವೆಂದರೆ ಈ ಹಣವಂತರು ಆದಕ್ಕೂ ಅಡ್ಡಬಂದರು. ಅವಳ ಬಾಳಿನ ಒಂದೇ ಒಂದು ಆಶಾತಂತುವಾಗಿದ್ದ ಪ್ರಿಯ ಕರನನ್ನೂ ತುಳಿದು ಕೊಂದರು. ಎಲ್ಲ ಸಂಕಟಗಳಲ್ಲೂ ಹೇಗೋ ಧೈರ್ಯ ತಳೆದು ಅದುವರೆಗೂ ಬದುಕಿದ್ದಳಾಕೆ. ಆದರೆ ಕಣ್ಣೆದುರಿಗೇ ಆ ಭೀಕರ ದೃಶ್ಯವನ್ನು ಕಂಡಾಗ ಅವಳಲ್ಲಿ ಉಳಿದಿದ್ದ ಧೈರ್ಯದ ಕೊನೆಯ ಕಣವೂ ಮಾಯವಾಯಿತು. ರಾಮನನ್ನು ನೋಡಲು ಆಸ್ಪತ್ರೆಗೆ ಹೋಗಿದ್ದವಳಿಗೆ ಆತ ಕೊನೆಯುಸಿರು ಬಿಟ್ಟ ಸಂಗತಿ ತಿಳಿಯುತ್ತಲೂ ಬುದ್ಧಿ ಕೆಟ್ಟಿತು. ಅಂದು ಅವಳೊಡನೆ ಆಸ್ಪತ್ರೆಗೆ ಹೋಗಿದ್ದ ಬಾಬು ಹೇಳುತ್ತಿದ್ದ: ಕಣ್ಣುಗಳನ್ನು ಅಗಲಸೂಳಿಸಿ, ರೆಪ್ಪೆ ಹೊಡೆಯದೆ ಐದಾರು ನಿಮಿಷಗಳವರೆಗೆ ಆಕೆ ಹಾಗೇ ನಿಂತುಕೊಂಡಿದ್ದಳಂತೆ. "ರಾಮ ಸತ್ತ ? ನನ್ನ ರಾಮ.... ಸತ್ತ ? ಸತ್ತ ?

ರಾಮು ರಾಮಾ ರಾಮಾ ಎನ್ನುತ್ತಾ ಆಸ್ಪತ್ರೆಯಿಂದ ಓಡಿ ಹೋದಳಂತೆ—ಹುಚ್ಚಿಯಂತೆ ”

“ ಅಂದಿನಿಂದಲೇ ಆಕೆಗೆ ಹುಚ್ಚು ಹಿಡಿಯಿತೊ ಏನೊ. ”

“ ಆಗ ಅಂಟಿಕೊಂಡದ್ದು ದಿನದಿಂದ ದಿನಕ್ಕೆ ಬೆಳೆಯುತ್ತ ಹೋಯಿತು. ಹಗಲು ರಾತ್ರಿ ಒಂದೆಸಮನೆ ಓಣಿಓಣಿ ಅಲೆಯುವುದು, ಯಾರಾದರೂ ಏನಾದರೂ ಕೊಟ್ಟರೆ ತಿನ್ನುವುದು, ಎಲ್ಲಾದರೂ ಬಿದ್ದುಕೊಳ್ಳುವುದು. ಸುರಿಯುವ ಮಳೆಯಲ್ಲಿ, ಕೊರೆಯುವ ಚಳಿಯಲ್ಲಿ, ಸುಡುವ ಬಿಸಿಲಲ್ಲಿ ತಿರುಗುವುದು. ಆ ಓಣಿಯವರು ಕನಿಕರಗೊಂಡು ಅವಳನ್ನು ಅಲ್ಲಿಯೆ ಇಟ್ಟುಕೊಳ್ಳಲು ಪ್ರಯತ್ನಿಸಿದರು. ಅದೂ ಸಾಧ್ಯವಾಗಲಿಲ್ಲ. ಕರೆದವರ ಮುಖವನ್ನು ಪರಚಿ ಓಡಿ ಹೋಗುತ್ತಿದ್ದಳಂತೆ ಹುಚ್ಚರಾಸ್ಪತ್ರೆಗೆ ಕಳಿಸಿ ಸರಿಯಾಗಿ ಉಪಚರಿಸಿದ್ದಲ್ಲಿ ಅವಳಿಗೆ ಗುಣವಾಗಲು ಸಾಧ್ಯವಿದ್ದಿತು. ಆದರೆ ಕಳಿಸುವವರು ಯಾರು ? ಅದಕ್ಕೆಲ್ಲ ಹಣ ಬೇಕು. ಎಲ್ಲಿದೆ ಹಣ ? ”

ಪಡಸಾಲೆಯಲ್ಲಿ ಸದ್ದಾಗುವುದು ಕೇಳಬಂದಿತು. ನಾವಿಬ್ಬರೂ ಲಗುಬಗೆಯಿಂದ ಎದ್ದು ಹೊರಗಡೆ ಬರುತ್ತಿದ್ದಂತೆಯೆ, ಅಲ್ಲಿ ಮಲಗಿದ್ದ ಯಮುನಾ ಎದ್ದು, ಹೊರಬಾಗಿಲನ್ನು ತೆರೆದು ಕತ್ತಲೆಯಲ್ಲಿ ಕರಗಿ ಹೋದಳು. “ ರಾಮು ರಾಮಾ ರಾಮಾ, ” ಎಂಬ ಅವಳ ಆರ್ತಸ್ವರ ಮಾತ್ರ ಗಾಳಿಯೊಂದಿಗೆ ತೇಲಿ ಬರತೊಡಗಿತು.

ಮಲಾಮರಡಿ,
ಜೂನ್–ಜುಲೈ ೧೯೫೨.

## ಈ ಲೇಖಕರ ಇತರ ಕೃತಿಗಳು.

**ಕಥಾಸಂಗ್ರಹಗಳು :**

ಕಾರವಾನ್ ( ದ್ವಿತೀಯ ಮುದ್ರಣ )
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ ( ಅಚ್ಚಿನಲ್ಲಿ )

**ಕಾದಂಬರಿಗಳು:**

ಸ್ವಾತಂತ್ರ್ಯದೆಡೆಗೆ ( ದ್ವಿತೀಯ ಮುದ್ರಣ )
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಹುತಾತ್ಮನ ಹೆಂಡತಿ ( ಬರಲಿದೆ )
ಗಂಡು ಹೆಣ್ಣು ಮತ್ತು ಮಣ್ಣು ,,
ಜರತಾರೀ ಜಗದ್ಗುರು ,,